

ನಮೋ ಭಗವತೇ ಶಂಕರಾನಂದಾಯ

ಭಗವತ್ಪೂಜ್ಯಪಾದ ಶ್ರೀ ಸುರೇಶ್ವರಾಚಾರ್ಯರ

# ನೈಷ್ಕರ್ಮ್ಯಸಿದ್ಧಿ

(ಪ್ರಶ್ನೋತ್ತರ)

## ಒಂದನೇ ಭಾಗ

(ಒಂದು ಮತ್ತು ಎರಡನೇ ಅಧ್ಯಾಯಗಳು)

ಆರ್. ಚಿಕ್ಕೇಶ್ವರಾಚಾರ್ಯ

: ಪ್ರಕಾಶಕರು :

**ಶ್ರೀ ಶಂಕರಾನಂದ ಟ್ರಸ್ಟ್ (ರಿ.)**

ಶ್ರೀ ಶಿವಾನಂದಾಶ್ರಮ–ಅಜ್ಜಂಪುರ.

ಕರ್ನಾಟಕ.

1979

**ಬೆಲೆ : ರೂ. 6—00**



ಜಗದ್ಗುರು ಶ್ರೀ ಶಂಕರ ಭಗವತ್ಪಾದಾಚಾರ್ಯರು

ಓಂ ನಮೋ ಭಗವತೇ ಶಂಕರಾನಂದಾಯ

# ಪ್ರಕಾಶಕರ ನುಡಿಗಳು

ಶ್ರೀ ಶಿವಾನಂದಾಶ್ರಮ, ಅಜ್ಜಂಪುರ, ಇದರ ಸ್ಥಾಪಕರೂ, ತಮ್ಮ ಅದ್ವಿತೀಯ ಗೀತಾ ಪ್ರವಚನಗಳಿಂದ "ಗೀತಾ ಸ್ವಾಮಿ"ಗಳೆಂದು ಪ್ರಖ್ಯಾತರಾದವರೂ ಆದ ಬ್ರಹ್ಮಲೀನ ಶ್ರೀ ಶ್ರೀ ಶ್ರೀ ಸ್ವಾಮಿ ಶಂಕರಾನಂದ ಮಹಾಸ್ವಾಮೀಜಿಯವರು ಭವ್ಯಭಾರತದ ಸನಾತನ ಧರ್ಮದ ಸಾರಸರ್ವಸ್ವವನ್ನೂ ಶ್ರೀಸಾಮಾನ್ಯನ ರೂಪದಲ್ಲಿರುವ ನರರೂಪಿ ನಾರಾಯಣನ ಸೇವೆಯಲ್ಲಿ ಇಟ್ಟರು. ಅವರು ದೇಹಧಾರಿಗಳಾಗಿದ್ದ ಕಾಲದಲ್ಲಿ ಕರ್ನಾಟಕ ಮತ್ತು ಆಂಧ್ರಪ್ರಾಂತ್ಯಗಳಲ್ಲಿ ಪ್ರವಚನಗಳನ್ನು ಮಾಡುತ್ತಾ ಪ್ರವಾಸ ಮಾಡುತ್ತಿದ್ದರು, ಮತ್ತು ಪ್ರವಾಸ ಮಾಡುತ್ತಾ ಮಾಡುತ್ತಾ ಪ್ರವಚನಗಳನ್ನು ಮಾಡುತ್ತಿದ್ದರು. ಶ್ರೀಗಳವರ ಪ್ರವಚನಗಳಿಂದ ಲಕ್ಷಾಂತರ ಮುಮುಕ್ಷುಗಳಿಗೆ ತಮ್ಮ ಜೀವನದ ಗುರಿಯನ್ನು ಮುಟ್ಟಲು ಸಾಧ್ಯವಾಯಿತು. ಈ ರೀತಿಯ ಪ್ರವಚನ ಕಾರ್ಯಕ್ರಮಗಳಲ್ಲಿ ಅಧ್ಯಾತ್ಮ ಪ್ರಚಾರ ಸಮಿತಿಯ ಸದಸ್ಯರುಗಳಿಗೆ ಪ್ರವಚನ ಮಾಡುವ ಕಲೆಯಲ್ಲಿ ತರಬೇತಿಯನ್ನು ಕೊಡುತ್ತಿದ್ದರು. ಶ್ರೀಗಳವರು ಆಗಾಗ್ಗೆ ತರಬೇತಿ ಶಿಬಿರಗಳನ್ನು ಏರ್ಪಡಿಸಿ ಅವುಗಳಲ್ಲಿ ತೀವ್ರ ತರಬೇತಿಯನ್ನು ಕೊಟ್ಟರು. ಹಾಗೆ ತೀವ್ರ ತರಬೇತಿ ಪಡೆದವರಲ್ಲಿ ಶ್ರೀ ಆರ್. ಚಿಕ್ಕೇಶ್ವರಾಚಾರ್ಯರೂ ಒಬ್ಬರು. ಅವರು ಈ ಸದ್ಗ್ರಂಥವನ್ನು ಬರೆಯಲು ಶ್ರೀಗಳವರಿಂದ ಪ್ರೇರಣೆಯನ್ನು ಪಡೆದು ಕಾರ್ಯೋನ್ಮುಖರಾಗಿ, ಈಗ ಮುಗಿಸಿದ್ದಾರೆ. ಈ ಗ್ರಂಥವನ್ನು ಬರೆದವರ ಬಗ್ಗೆ ಸ್ವಲ್ಪ ಹೇಳುವುದು ಅವಶ್ಯ. ಇವರು ತೀವ್ರ ಮುಮುಕ್ಷುಗಳು ; ಶಾಸ್ತ್ರಾಧ್ಯಯನವನ್ನು ಗುರುಸಾನ್ನಿಧ್ಯದಲ್ಲಿಯೇ ಚೆನ್ನಾಗಿ ಮಾಡಿದ್ದಾರೆ ಪ್ರವಚನ ಕಲೆಯಲ್ಲಿ ಸಿದ್ಧಿಯನ್ನು ಪಡೆದಿರುತ್ತಾರೆ. ಶ್ರೀಗುರು ಕೃಪೆಯಿಂದ ಲಭ್ಯವಾಗಿರುವ ಅರಿವನ್ನು ಗುರುವಿಗೆ ಕಾಣಿಕೆಯಾಗಿ ಅರ್ಪಿಸುವ ಉದ್ದೇಶದಿಂದ ಈ ಗ್ರಂಥದ ಬರವಣಿಗೆ ಕೆಲಸಮಾಡಿ ಕೃತಕೃತ್ಯರಾಗಿರುತ್ತಾರೆ. ಶ್ರೀಗಳವರು ಅವತಾರ ಪರಿಸಮಾಪ್ತಿ ಮಾಡಿದ ಮೇಲೆ ಎಲ್ಲರ ಅಂತಃಕರಣಗಳಿಗೂ ಸಾಕ್ಷಿಯಾಗಿ, ಪ್ರೇರಕರಾಗಿ, ಚೇತಕರಾಗಿ ಮುಮುಕ್ಷುಗಳ ಜೀವನನೌಕೆಯ ಚುಕ್ಕಾಣಿ ಹಿಡಿದು ಮಾರ್ಗದರ್ಶನ ಮಾಡುತ್ತಿರುವ

ರೆಂಬುದು ಅವರ ದೃಢನಂಬಿಕೆ. ಶ್ರೀ ಚಿಕ್ಕೀಶ್ವರಾಚಾರ್ಯರನ್ನು ಒಂದು ಸಾಧನವಾಗಿ ಬಳಸಿಕೊಂಡು ಶ್ರೀಗಳವರು ಈ ಗ್ರಂಥವನ್ನು ಬರೆಸಿರುವರೆಂಬುದು ಇವರ ನಂಬಿಕೆ.

ಜಗತ್ತಿನಲ್ಲಿರುವುದು ಎರಡೇ ವಸ್ತುಗಳು ಚೇತನ ಮತ್ತು ಜಡ. ಶರೀರ ಜಡ, ಮತ್ತು ಅಂತಃಕರಣವೂ ಜಡ. ಈ ಜಡವಾದ ಅಂತಃಕರಣವು ಚೇತನದ ಸಂಯೋಗದಿಂದ ಚೇತನಗೊಂಡು ಕರ್ತೃತ್ವದ ಭ್ರಾಂತಿಗೆ ಎಡೆಯಾಗುತ್ತದೆ. ಅಹಂಕಾರವಿರುವವರೆಗೆ ಕರ್ತೃತ್ವ ಭಾವಹೋಗದು. ವಿಚಾರದಿಂದ ಅಹಂಕಾರವನ್ನು ನಾಶಮಾಡುವುದೇ ಈ ಗ್ರಂಥದ ಗುರಿ. ವೇದಾಂತ ವಾಙ್ಮಯದಲ್ಲಿ ನಾವು ಯಾವುದನ್ನು ಹೇಳಿದರೂ ಅದು "ಸಂತರ ಎಂಜಲು". ಹೊಸದೇನೂ ಇಲ್ಲ. ಇಲ್ಲಿ ಬರೆದಿರುವುದೆಲ್ಲಾ ಪರಮಪೂಜ್ಯ ಶ್ರೀ ಶ್ರೀ ಶ್ರೀ ಸುರೇಶ್ವರಾಚಾರ್ಯರ ಶ್ರೀ ಮುಖದಿಂದ ಬಂದ ವಿಚಾರಗಳೇ ಆಗಿವೆ, ಹೊಸದೇನೂ ಇಲ್ಲ.

ಬ್ರಹ್ಮಲೀನ ಶ್ರೀ ಶ್ರೀ ಶ್ರೀ ಶಂಕರಾನಂದ ಮಹಾಸ್ವಾಮಿಜಿಯವರು ತಾವು ದೇಹಧಾರಿಗಳಾಗಿದ್ದ ಕಾಲದಲ್ಲಿ ಧರ್ಮಪ್ರಚಾರವನ್ನೇ ತಮ್ಮ ಜೀವನ ಧ್ಯೇಯವನ್ನಾಗಿ (Life Mission) ಇಟ್ಟುಕೊಂಡಿದ್ದರು. ಅವರು ತಮ್ಮ ಅವತಾರ ಪರಿಸಮಾಪ್ತಿ ಮಾಡಿದ ಮೇಲೆ ಶ್ರೀ ಸ್ವಾಮಿ ಶಂಕರಾನಂದ ಟ್ರಸ್ಟ್ (ರಿ.) ಅಜ್ಜಂಪುರ, ಅಸ್ತಿತ್ವಕ್ಕೆ ಬಂತು. ಈ ವಿಶ್ವಸ್ತ ಸಮಿತಿಯು ಶ್ರೀಗಳವರ ಜೀವನಧ್ಯೇಯ (Life Mission) ಆಗಿದ್ದ ಧರ್ಮಪ್ರಚಾರದ ಮೂಲಕ ಅಧರ್ಮದ ಪ್ರಸಾರವನ್ನು ತಡೆಗಟ್ಟಲು ತನ್ನ ಕೈಲಾದಷ್ಟು ಪ್ರಯತ್ನಿಸುತ್ತಿದೆ. ಈ ದಿಸೆಯಲ್ಲಿ ಕಾರ್ಯಾಚರಣೆಯಲ್ಲಿದ್ದು ಆಧ್ಯಾತ್ಮಿಕ ಪ್ರವಚನಗಳು, ಧರ್ಮ ಗ್ರಂಥಗಳ ಪ್ರಚಾರ ಮಾಡುತ್ತಿದೆ. ಈ ವರ್ಷ ಗೀತಾ ಜಯಂತಿಯ ಸಂದರ್ಭದಲ್ಲಿ ಬೆಂಗಳೂರಿನಲ್ಲಿ ಮನೆ ಮನೆಯ ಬಾಗಿಲಿಗೂ ಶ್ರೀಮದ್ಭಗವದ್ಗೀತಾ ಪ್ರತಿಗಳನ್ನು ತೆಗೆದುಕೊಂಡು ಹೋಗಿ ಮಾರುವ ಕಾರ್ಯಕ್ರಮವನ್ನು ಪ್ರಾರಂಭಿಸಲಾಯಿತು. ಈ ರೀತಿ ಈ ಸಮಿತಿಯು ತನ್ನ ಅಳಿಲುಸೇವೆಯನ್ನು ಸಲ್ಲಿಸುತ್ತಿದೆ. ಶ್ರೀ ಆರ್. ಚಿಕ್ಕೀಶ್ವರಾಚಾರ್ಯರು ಈ ವಿಶ್ವಸ್ಥ ಸಮಿತಿಗೆ ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಪ್ರಕಟಣೆಗಾಗಿ ಈ ಸದ್ಗ್ರಂಥವನ್ನು

ಬರೆದುಕೊಟ್ಟು ಮಹದುಪಕಾರವನ್ನು ಮಾಡಿರುತ್ತಾರೆ. ಅವರಿಗೆ ವಿಶ್ವಸ್ಥ ಸಮಿತಿಯ ಪರವಾಗಿ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಈ ವಿಶ್ವಸ್ಥ ಸಮಿತಿಯು ತನ್ನ ಸೇವೆಯನ್ನು ದಾನಿಗಳ ಉದಾರ ಕೊಡುಗೆಯಿಂದಲೇ ನಡೆಸುತ್ತಾ ಬರುತ್ತಿದೆ. ಈ ಸದ್ಗ್ರಂಥವನ್ನು ಅಚ್ಚು ಹಾಕಿಸಲು ಶಿವಸಾನ್ನಿಧ್ಯವನ್ನು ಪಡೆದ ದಿವಂಗತ ಶ್ರೀ ಬಳೇ ಚಂಗಪ್ಪನವರು ಮತ್ತು ಅವರ ಧರ್ಮಪತ್ನಿ ದಿವಂಗತ ಶ್ರೀಮತಿ ಮುನಿವೆಂಕಟಮ್ಮನವರು, ಇವರುಗಳ ಸುಪುತ್ರ ಶ್ರೀ ಬಿ. ಸುಬ್ಬಯ್ಯನವರು, B.E., M.I.E. ಮುಖ್ಯ ಎಂಜಿನಿಯರ್, ಸಣ್ಣ ನೀರಾವರಿ ಮತ್ತು ಸಾರ್ವಜನಿಕ ಆರೋಗ್ಯ ಎಂಜನಿಯರಿಂಗ್, ಕರ್ನಾಟಕ ಸಂಸ್ಥಾನ, ಅವರು ತಮ್ಮ ಪ್ರೀತಿಯ ತಂದೆತಾಯಿಗಳ ಆತ್ಮಶಾಂತಿಗಾಗಿಯೂ, ಹಾಗೂ ಮಾತಾಪಿತೃಗಳ ಋಣವನ್ನು ತೀರಿಸುವ ಸದುದ್ದೇಶದಿಂದಲೂ ಉದಾರವಾಗಿ ದಾನಮಾಡಿರುತ್ತಾರೆ. ಶ್ರೀ ಸುಬ್ಬಯ್ಯನವರ ಮಾವನವರಾದ ಶ್ರೀ ಸಾಧು ಪ್ರೇಮದಾಸರು ತಮ್ಮ ನಿವೃತ್ತಿ ವೇತನದಿಂದ ಮಿಗಿಸಿದ ಹಣವನ್ನು ಈ ಪುಸ್ತಕ ಪ್ರಕಟಣೆಗೆ ಪ್ರೇಮಪೂರ್ವಕವಾಗಿ ದಾನ ಮಾಡಿರುತ್ತಾರೆ ಈ ಉದಾರಹೃದಯಿಗಳಿಗೆ ಶ್ರೀ ಗುರುನಾಥನು ಅವರ ಇಷ್ಟಾರ್ಥಸಿದ್ಧಿಗಳನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಅದ್ವೈತಿಗಳಿಗೆ ಆಕರ ಗ್ರಂಥವಾಗಿರುವ ಈ ಸದ್ಗ್ರಂಥಕ್ಕೆ ತುಂಬಾ ಪ್ರೀತಿಪೂರ್ವಕವಾಗಿ ಆಶೀರ್ವಚನಗಳನ್ನು ದಯಪಾಲಿಸಿದ ಪರಮಪೂಜ್ಯ ಶ್ರೀ ಶ್ರೀ ಶ್ರೀ ಜಗದ್ಗುರು ಅಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳಿಗೆ ವಿಶ್ವಸ್ಥ ಸಮಿತಿಯು ಚಿರಋಣಿಯಾಗಿದೆ.

ಈ ಗ್ರಂಥವನ್ನು ಅಂದವಾಗಿ ಸಕಾಲಕ್ಕೆ ಮುದ್ರಣ ಮಾಡಿಕೊಟ್ಟ ಶ್ರೀ ಗುರುದೇವ ಪ್ರಿಂಟರ್ಸ್, ಚಿತ್ರದುರ್ಗ ಇವರಿಗೆ ಪ್ರಕಾಶಕರು ಋಣಿಯಾಗಿದ್ದಾರೆ.

ಟಿ. ರಾಮಯ್ಯನವರು
ಜನರಲ್ ಸೆಕ್ರೆಟರಿ
ಶ್ರೀ ಶಂಕರಾನಂದ ಟ್ರಸ್ಟ್ (ರಿ.)
ಅಜ್ಜಂಪುರ.

ಬೆಂಗಳೂರು.
14—1—1979.



ಶ್ರೀ ಶ್ರೀ ಜಗದ್ಗುರು ಅಭಿನವವಿದ್ಯಾತೀರ್ಥ ಸ್ವಾಮಿಗಳವರು
ಶಾರದಾಪೀಠ, ಶೃಂಗೇರಿ.

# श्री श्री जगद्गुरु शंकराचार्य महासंस्थानं,

## शारदापीठम्

श्रृंगेरी-कडूर्   (कर्नाटक राज्यम्)


R. P. 754/78

ನಿವೇಶ ಸ್ಥಾನ: ಶೃಂಗೇರಿ

ದಿನಾಂಕ: 12-12-78

ಶ್ರೀ ಸುಬ್ಬಯ್ಯನವರಿಗೆ ನಮಸ್ಕಾರಗಳು

ನೀವು ಕಳುಹಿಸಿದ ನೈಷ್ಕರ್ಮ್ಯಸಿದ್ಧಿ ಎಂಬ ಕನ್ನಡ ಗ್ರಂಥವನ್ನು ಶ್ರೀ ಶ್ರೀ ಜಗದ್ಗುರು ಮಹಾಸ್ವಾಮಿಗಳವರು ಪರಾಂಬರಿಸಿ ಈ ಕೆಳಕಂಡಂತೆ ತಮ್ಮ ಅಮೋಘ ಸಂದೇಶವನ್ನು ಅನುಗ್ರಹಿಸಿರುತ್ತಾರೆ.

"ವೇದಾಂತ ಪ್ರತಿಪಾದಕ ಗ್ರಂಥಗಳಲ್ಲಿ ಶ್ರೀಮಚ್ಛಂಕರ ಭಗವತ್ಪಾದಾಚಾರ್ಯರ ಶಿಷ್ಯರಾದ ಶ್ರೀ ಸುರೇಶ್ವರಾಚಾರ್ಯರಿಂದ ಬರೆಯಲ್ಪಟ್ಟ ನೈಷ್ಕರ್ಮ್ಯಸಿದ್ಧಿ ಎಂಬ ಗ್ರಂಥವು ಪ್ರಮುಖವಾದದು. ನೈಷ್ಕರ್ಮ್ಯಸಿದ್ಧಿ ಎಂಬ ಪದವು ಮೊಟ್ಟಮೊದಲು ಭಗವದ್ಗೀತೆಯಲ್ಲಿ 'ನೈಷ್ಕರ್ಮ್ಯಸಿದ್ಧಿಂ ಪರಮಾಂ ಸನ್ಯಾಸೇನಾಧಿಗಚ್ಛತಿ' ಎಂಬಲ್ಲಿ ಕಂಡು ಬರುತ್ತದೆ. ಅಲ್ಲಿ ನೈಷ್ಕರ್ಮ್ಯಸಿದ್ಧಿ ಎಂಬ ಪದಕ್ಕೆ ಶ್ರೀ ಭಗವತ್ಪಾದರು 'ನಿರ್ಗತಾನಿ ಕರ್ಮಾಣಿ ಯಸ್ಮಾತ್ ನಿಷ್ಕ್ರಿಯಬ್ರಹ್ಮಾತ್ಮ ಸಂಬೋಧಾತ್ ಸ ನಿಷ್ಕರ್ಮಾ ತಸ್ಯ ಭಾವೋ ನೈಷ್ಕರ್ಮ್ಯಂ, ನೈಷ್ಕರ್ಮ್ಯಂ ಚ ತತ್ ಸಿದ್ಧಿಶ್ಚೇತಿ ಸಾ ನೈಷ್ಕರ್ಮ್ಯಸಿದ್ಧಿಃ ನೈಷ್ಕರ್ಮ್ಯಸ್ಯ ವಾ ಸಿದ್ಧಿಃ ನಿಷ್ಕ್ರಿಯಾತ್ಮಸ್ವರೂಪಾವಸ್ಥಾನ ಲಕ್ಷಣಸ್ಯ ಸಿದ್ಧಿ ನಿಷ್ಪತ್ತಿಃ' ಎಂದು ಭಾಷ್ಯವನ್ನು ಬರೆದಿರುತ್ತಾರೆ. ಅಂತಹ ನೈಷ್ಕರ್ಮ್ಯಸಿದ್ಧಿಗೆ ಜ್ಞಾನದ ದ್ವಾರಾ ಹೇತುವಾದ್ದರಿಂದ ಈ ಗ್ರಂಥಕ್ಕೂ ಆ ಹೆಸರು ಬಂದಿರುತ್ತದೆ. ಆದ್ದರಿಂದ ಈ

ಗ್ರಂಥದ ನಾಮಧೇಯವೇ ಏತದ್ಗ್ರಂಥ ಪ್ರತಿಪಾದ್ಯ ವಿಷಯಕ್ಕೆ ಸೂಚಕ ವಾಗಿದೆ.

ಮುಖ್ಯವಾಗಿ ಮೀಮಾಂಸಕರು ಮೋಕ್ಷಕ್ಕೆ ಕರ್ಮಗಳೇ ಸಾಧನ ಗಳೆಂದು ವಾದಿಸುವರು. ಈ ಗ್ರಂಥದಲ್ಲಿ ಶ್ರೀ ಸುರೇಶ್ವರಾಚಾರ್ಯರು

'ಕರ್ಮಾಜ್ಞಾನ ಸಮುತ್ಥತ್ವಾನ್ನಾಲಂ ಮೋಹಾಪನುತ್ತಯೇ
ಸಮ್ಯಗ್ ಜ್ಞಾನಂ ವಿರೋಧ್ಯಸ್ಯ ತಾಮಿಸ್ರಸ್ಯಾಂಶುಮಾನಿವ'

ಎಂದು ಅಜ್ಞಾನದಿಂದಲೇ ಅನುಷ್ಠಿತವಾದ ಕರ್ಮಗಳಿಗೆ ಅಜ್ಞಾನ ನಾಶಕತ್ವವು ಬರಲಾರದು ಎಂದು ಮುಂತಾದ ಯುಕ್ತಿಗಳಿಂದ ಆ ವಾದ ವನ್ನು ಖಂಡಿಸಿ ಜ್ಞಾನದಿಂದಲೇ ಮೋಕ್ಷವೆಂಬ ಔಪನಿಷದ ಸಿದ್ಧಾಂತವನ್ನು ಬಹಳ ಚೆನ್ನಾಗಿ ಪ್ರತಿಪಾದನೆ ಮಾಡಿರುತ್ತಾರೆ.

ಮಹಾವಾಕ್ಯದಿಂದ ಬರತಕ್ಕ ಜ್ಞಾನವು ಅಜ್ಞಾನವನ್ನು ಪೂರ್ತಿಯಾಗಿ ನಾಶಮಾಡಲಾರದು ; ಆದುದರಿಂದಲೇ ತತ್ವದರ್ಶನಾಭ್ಯಾಸವನ್ನು, ಯಾಜ್ಞಾದಿ ಕರ್ಮಗಳನ್ನು ಆತ್ಮ ಸಾಕ್ಷಾತ್ಕಾರ ಪರ್ಯಂತವೂ ಅನುಷ್ಠಿಸ ಬೇಕೆಂದು ಬ್ರಹ್ಮಸಿದ್ಧಿಕಾರರ ಅಭಿಪ್ರಾಯ. ಆದರೆ ಆ ಅಭಿಪ್ರಾಯವು ಸರಿಯಲ್ಲ, ಮಹಾವಾಕ್ಯದಿಂದ ಜ್ಞಾನ ಬಂದಮೇಲೆ ಅಜ್ಞಾನವು ಇರಲು ಸಾಧ್ಯವಿಲ್ಲ.

'ಸಕೃತ್ಪ್ರವೃತ್ತ್ಯಾ ಮೃದ್ನಾತಿ ಕ್ರಿಯಾಕಾರಕ ರೂಪಭೃತ್
ಅಜ್ಞಾನಮಾಗಮಜ್ಞಾನಂ ಸಾಂಗತ್ಯಂ ನಾಸ್ತ್ಯತೋಽನಯೋಃ'

ಎಂದು ಬ್ರಹ್ಮಸಿದ್ಧಿಕಾರರ ಅಭಿಪ್ರಾಯವನ್ನು ಶ್ರೀ ಸುರೇಶ್ವರಾಚಾರ್ಯರು ಖಂಡಿಸಿರುವರು. ಹಾಗೆಯೇ ಕರ್ಮಗಳಿಗೆ ಉಪಯೋಗವನ್ನು ತಿಳಿಸುವಾಗ

'ಪ್ರತ್ಯಕ್ಪ್ರವಣತಾಂ ಬುದ್ಧೇಃ ಕರ್ಮಾಣ್ಯುತ್ಪಾದ್ಯ ಶುದ್ಧಿತಃ
ಕೃತಾರ್ಥಾನ್ಯಸ್ತಮಾಯಾಂತಿ ಪ್ರಾವೃಡಂತೇ ಘನಾ ಇವ'

ಎಂದು ಹೇಳಿ ಚಿತ್ತಕ್ಕೆ ಪ್ರತ್ಯಕ್ಪ್ರಾವಣ್ಯ ಬರುವವರೆಗೆ ಕರ್ಮಗಳಿಗೆ ಉಪಯೋಗವೆಂದೂ ಅನಂತರ ಅವುಗಳಿಗೆ ಉಪಯೋಗವಿಲ್ಲವೆಂದೂ ಸ್ಪಷ್ಟ ಪಡಿಸಿದ್ದಾರೆ.

ವೇದಾಂತ ಸಿದ್ಧಾಂತದಲ್ಲಿ ಮುಕ್ತಿ ವಿಷಯದಲ್ಲಿ ಜೀವನ್ಮುಕ್ತಿ ಮತ್ತು ಸದ್ಯೋಮುಕ್ತಿ ಎಂದು ಎರಡು ಪಕ್ಷಗಳಿವೆ. ಶ್ರೀ ಸುರೇಶ್ವರಾಚಾರ್ಯರು

‘ಸಮ್ಯಗ್ ಜ್ಞಾನ ಶಿಖಿಪ್ಲುಷ್ಟ ಮೋಹ ತತ್ಕಾರ್ಯ ರೂಪಿಣಃ
ಸಕೃನ್ನಿವೃತ್ತೇರ್ಬಾಧ್ಯಸ್ಯ ಕಿಂ ಕಾರ್ಯಮವ ಶಿಷ್ಯತೇ’

ಎಂದು ಸದ್ಯೋಮುಕ್ತಿ ಪಕ್ಷವನ್ನು ಮಂಡಿಸಿದ್ದಾರೆ. ಜೀವನ್ಮುಕ್ತಿ ಪಕ್ಷವನ್ನೂ ‘ಅಥಾಪರ: ಸಾಂಪ್ರದಾಯಿಕಃ’ ಇತ್ಯಾದಿ ಗ್ರಂಥದಿಂದ ಹೇಳಿದ್ದಾರೆ.

ಈ ರೀತಿಯಾಗಿ ಅದ್ವೈತ ಸಿದ್ಧಾಂತಕ್ಕೆ ಆಕರ ಗ್ರಂಥವಾಗಿರುವ ‘ನೈಷ್ಕರ್ಮ್ಯಸಿದ್ಧಿ’ಯು ಮುಮುಕ್ಷುಗಳಿಗೆ ಅತ್ಯಂತೋಪಾದೇಯವಾಗಿರುತ್ತದೆ. ಸಂಸ್ಕೃತ ತಿಳಿಯದವರಿಗೂ ಕೂಡ ಈ ಗ್ರಂಥದ ಪರಿಚಯವನ್ನು ಮಾಡಿಕೊಡಬೇಕೆಂಬ ಅಭಿಪ್ರಾಯದಿಂದ ಈ ಅನುವಾದ ಗ್ರಂಥವು ಪ್ರಕಟವಾಗುತ್ತಿದೆಯೆಂದು ನಾವು ಭಾವಿಸಿದ್ದೇನೆ. ಗುರು ಶಿಷ್ಯ ಸಂವಾದ ರೂಪದಲ್ಲಿರುವ ಈ ಗ್ರಂಥವು ಓದಲು ತುಂಬಾ ಉತ್ಸಾಹ ಜನಕವಾಗಿದೆ. ತಿಳಿಗನ್ನಡದಲ್ಲಿ ಬರೆದ ಈ ಗ್ರಂಥದಿಂದ ನೈಷ್ಕರ್ಮ್ಯಸಿದ್ಧಿ ಗ್ರಂಥದ ಅಭಿಪ್ರಾಯವನ್ನು ತಿಳಿಯುವುದು ಸುಲಭ. ಈ ಗ್ರಂಥವು ಪ್ರಸಿದ್ಧವಾಗಿ ಜನೋಪಯೋಗಿಯಾಗಲೆಂದು ಹರಸುತ್ತೇವೆ.”

ಶ್ರೀ ಶ್ರೀ ಜಗದ್ಗುರು ಮಹಾಸ್ವಾಮಿಗಳವರ ಆಶೀರ್ವಾದವನ್ನು ತಿಳಿಸುತ್ತಿದ್ದೇನೆ.

ಇಂತು,

ಸಿ. ವಿ. ಗಿರಿಧರ ಶಾಸ್ತ್ರಿ
ಪ್ರೈವೇಟ್ ಸೆಕ್ರೆಟರಿ



# "ನೈಷ್ಕರ್ಮ್ಯಸಿದ್ಧಿ"

## (ನನ್ನ ಕಟಾಕ್ಷ)

ಆತ್ಮೀಯ ಭಕ್ತರು ಶ್ರೀ ಶಂಕರಾನಂದ ಸ್ವಾಮಿಜಿಯವರ ಆದರ್ಶ ಗೃಹಸ್ಥ ಶಿಷ್ಯರು, ಉದ್ಯಮ ಶೀಲರೂ, ಉತ್ತಮ ಜಿಜ್ಞಾಸುವೂ ಆದ ನಮ್ಮ ಚಿಕ್ಕೇಶ್ವರಾಚಾರ್ಯರ ಸತ್ಕೃಷಿಯೇ "ನೈಷ್ಕರ್ಮ್ಯಸಿದ್ಧಿ". ಈ ಹೊಸದಾದ, ಜಟಿಲವಾದ ಈ ಪ್ರಕರಣ ಗ್ರಂಥವನ್ನು ಇವರು ಪ್ರಶ್ನೋತ್ತರ ಮೂಲಕವಾಗಿ ಸುಬೋಧವನ್ನು ಮಾಡಿ ಕನ್ನಡನಾಡಿಗೆ ಅರ್ಪಿಸಿ ಉಪಕಾರ ಮಾಡಿದ್ದಾರೆ. ಈ ಪುಣ್ಯಾತ್ಮರು ಧನ್ಯವಾದಕ್ಕೆ ಪಾತ್ರರು. ಇಂತಹ ಪ್ರೌಢವಾದ ಸೂಕ್ಷ್ಮಬುದ್ಧಿಯವರಿಗೆ ಮಾತ್ರ ತಿಳಿಯಲು ಯೋಗ್ಯವಾದ ಈ ಗ್ರಂಥವನ್ನು ಬರೆಯುವಂತಹ ಬುದ್ಧಿಶಕ್ತಿ, ವಿಚಾರಶಕ್ತಿಯನ್ನು ನಮ್ಮ ಸ್ವಾಮಿಗಳವರೇ ಅವರಿಗೆ ದಯಪಾಲಿಸಿದ್ದಾರೆ. ಬಹು ದಿವಸಗಳಿಂದ ನಮ್ಮ ಸ್ವಾಮಿಗಳವರಲ್ಲಿ ಭಕ್ತಿಯಿಂದ ಸೇವೆ ಮಾಡಿ ವೇದಾಂತ ಶ್ರವಣ ಮಾಡಿದ ಫಲವೇ ಈ ನೈಷ್ಕರ್ಮ್ಯಸಿದ್ಧಿ.

ಶೃಂಗೇರಿ ಮಠದ ಪ್ರಥಮ ಪೀಠಾಧಿಪತಿಗಳಾದ ಶ್ರೀ ಸುರೇಶ್ವರಾಚಾರ್ಯರ ಅಗ್ರಗಣ್ಯ ಕೃತಿಯೇ ಈ ನೈಷ್ಕರ್ಮ್ಯಸಿದ್ಧಿ. ಇದು ಪಾಂಡಿತ್ಯ ಪೂರ್ಣವಾದ ಪ್ರೌಢ ವೇದಾಂತ ಪ್ರಕರಣ ಗ್ರಂಥವು. ಗ್ರಂಥಕರ್ತರಾದ ಶ್ರೀ ಸುರೇಶ್ವರಾಚಾರ್ಯರವರೇ ಸ್ವತಃ ಈ ಗ್ರಂಥವನ್ನು ಕುರಿತು "ಅಶೇಷ ವೇದಾಂತಸಾರ ಸಂಗ್ರಹ ಪ್ರಕರಣ"ವೆಂದು ಪ್ರಶಂಸೆ ಮಾಡಿದ್ದಾರೆ.

ವೇದಾಂತ ದರ್ಶನವೆಂದು ಹೇಳಲ್ಪಡುವ ಬ್ರಹ್ಮಸೂತ್ರಗಳು ಯಾವ ವಿಧದಿಂದ ನಾಲ್ಕು ಅಧ್ಯಾಯಗಳಾಗಿ ವಿಭಾಗ ಮಾಡಲ್ಪಟ್ಟಿವೆಯೋ ಅದೇ ವಿಧದಿಂದ ಈ ನೈಷ್ಕರ್ಮ್ಯಸಿದ್ಧಿಯೂ ಸಹ ನಾಲ್ಕು ಅಧ್ಯಾಯಗಳಾಗಿ ವಿಂಗಡಿಸಲ್ಪಟ್ಟಿದೆ.

"ನಿರ್ಗತಾನಿ ಕರ್ಮಾಣಿ ಯಸ್ಮಾತ್ ನಿಷ್ಕ್ರಿಯ ಬ್ರಹ್ಮಾತ್ಮ ಸಂಬೋಧಾತ್‌ಸ ನಿಷ್ಕರ್ಮಾ ತಸ್ಯಭಾವೋ ನೈಷ್ಕರ್ಮ್ಯಂ ನೈಷ್ಕರ್ಮ್ಯಂ ಚ ತತ್‌ಸಿದ್ಧಿಃ ಚೇತಿ ಸಾ ನೈಷ್ಕರ್ಮ್ಯಸಿದ್ಧಿಃ ॥ ಅರ್ಥಾತ್ ಸರ್ವಕರ್ಮ ಸಂನ್ಯಾಸ ಪೂರ್ವಕ ಬ್ರಹ್ಮಾತ್ಮಾವ ಬೋಧಾ, ಅಥವಾ "ನಿಷ್ಕಾಮೋಽಬ್ರಹ್ಮ ತದ್ ವಿಷಯಂ ಪರಿ ನಿಷ್ಪನ್ನಂ ಜ್ಞಾನಂ ನೈಷ್ಕರ್ಮ್ಯಂ ತದ್‌ರೂಪ ಸಿದ್ಧಿಃ"

ಮೋಕ್ಷಕ್ಕೆ ಕಾಯ, ವಾಚ, ಮಾನಸಿಕವಾದ ಯಾವ ಕರ್ಮವೂ ಸಹ ಸಾಕ್ಷಾತ್ತಾಗಿ ಸಾಧನವಾಗಲಾರದೆಂದು ತಿಳಿಸಿ ಜ್ಞಾನದಿಂದಲೇ ಮೋಕ್ಷ ವೆಂಬ ಸಿದ್ಧಾಂತವು, ನಿಷ್ಠೆಯಿಂದಲಭಿಸುವ ಸದ್ಯೋಮುಕ್ತಿಯೇ ಇಲ್ಲಿ ಪ್ರತಿ ಪಾದ್ಯವಿಷಯ.

ಈಗ ಸದ್ಯ ಈ ಗ್ರಂಥದಲ್ಲಿ ಎರಡು ಅಧ್ಯಾಯಗಳು ಮಾತ್ರ ಸೇರಿಸಲ್ಪಟ್ಟಿವೆ. ಇನ್ನೂ ಅರ್ಧ ಗ್ರಂಥ ಉಳಿದಿದೆ. ಈ ನಮ್ಮ ಚಿಕ್ಕೇಶ್ವರಾ ಚಾರ್ಯರು ಆ ಸುರೇಶ್ವರಾಚಾರ್ಯರಂತೆ ಗುರು ಅನುಗ್ರಹ ಪ್ರಭಾವಿತರಾಗಿ ಅವಶಿಷ್ಟ ಗ್ರಂಥವನ್ನು ಪೂರ್ಣಮಾಡಿ ಕರ್ನಾಟಕ ಜನತೆಗೆ ಮಹದುಪಕಾರ ಮಾಡುತ್ತಾರೆಂದು ನಾನು ಆಶಿಸುತ್ತೇನೆ.

ಕ್ಯಾಂಪ್ : ಗಂಡಿಕ್ಷೇತ್ರಂ
ಆಂಧ್ರಪ್ರದೇಶ
ತಾ॥ 19–10–78

ಇತಿ,
ಶ್ರೀ ಸ್ವಾಮಿರಾಮಕೃಷ್ಣಾನಂದಜಿ
ಅಧ್ಯಕ್ಷರು.
ಶ್ರೀ ಶಂಕರಾನಂದ ಟ್ರಸ್ಟ್,
ಅಜ್ಜಂಪುರ.

# ಮುನ್ನುಡಿ

"ನೈಷ್ಕರ್ಮ್ಯಸಿದ್ಧಿ" ಎಂಬ ಹೆಸರಿನಿಂದ ಮುದ್ರಿತವಾಗಿರುವ ಈ ತಿಳಿಗನ್ನಡ ಭಾಷೆಯ ಆಧ್ಯಾತ್ಮಿಕ ಗ್ರಂಥವನ್ನು ನಾನು ತಕ್ಕಮಟ್ಟಿಗೆ ಆ ಮೂಲಾಗ್ರವಾಗಿ ಪರಿಶೀಲಿಸಿ ನೋಡಿರುವೆನು. ಇಲ್ಲಿ ವಿವರಿಸಲಾಗಿರುವ ಅಭಿಪ್ರಾಯಗಳು ಉಪನಿಷತ್ತುಗಳಲ್ಲಿನ ಮೂಲ ವಾಕ್ಯಗಳಿಂದಲೂ ಮತ್ತು ಶ್ರೀ ಶಂಕರಭಗವತ್ಪಾದರ ಭಾಷ್ಯ, ಶ್ರೀ ಸುರೇಶ್ವರಾಚಾರ್ಯರವರ ನೈಷ್ಕರ್ಮ್ಯಸಿದ್ಧಿ ಈ ಭಾಗಗಳಿಂದಲೂ ಪುಷ್ಟೀಕರಿಸಲ್ಪಟ್ಟಿರುವುವು. ಮತ್ತು ಪ್ರಭಾಕರರು, ಕುಮಾರಿಲ ಭಟ್ಟಪಾದರು, ಮೊದಲಾದ ಮಹಾ ದಾರ್ಶನಿಕರ ಸಿದ್ಧಾಂತಗಳಲ್ಲಿನ ಸಾಧಕಬಾಧಕಗಳನ್ನು ಪ್ರಶ್ನೋತ್ತರಗಳಿಂದಲೂ, ಆಕ್ಷೇಪ ಸಮಾಧಾನಗಳಿಂದಲೂ ಉದಾಹರಣೆಗಳ ಮೂಲಕ ವಿವರಿಸಿ ಬರೆಯಲಾಗಿದೆ. ಕರ್ಮಜ್ಞಾನಗಳಿಗಿರುವ ಮಹದಂತರವನ್ನು, ಶಾಸ್ತ್ರಾನುಸಾರವಾಗಿ ಸುಲಭವಾದ ಅನುಭವಿಗಳ ದೃಷ್ಟಾಂತಗಳಿಂದ ತಿಳಿಮಾಡಿ ತಿಳಿಸಲಾಗಿದೆ. ಈ ಗ್ರಂಥವನ್ನು ಉಪದೇಶ ಭಾಷಣದ ಮೂಲಕ ಬೋಧಿಸಿರುವ ಶ್ರೀ ಶ್ರೀ ಅಳ್ಳಗಡ್ಡ, ಶ್ರೀ ಶಂಕರಾನಂದಜೀಯವರು ಗೀತಾರ್ಥದ ಪ್ರತ್ಯಕ್ಷ ಮೂರ್ತಿಗಳು, ಸಾಧಕರು, ಬೋಧಕರು ಆಗಿದ್ದು ನನಗೆ ಸುಪರಿಚಿತರೂ, ಗುಣಗ್ರಾಹಿಗಳೂ, ಶ್ರೇಷ್ಠವಾಗ್ಮಿಗಳೂ ಆಗಿದ್ದರು. ಇವರ ಆಶ್ರಮಗಳು ಹಲವು ಕಡೆಗಳಲ್ಲಿದ್ದು ಅಸಂಖ್ಯಾತ ಶಿಷ್ಯ ವರ್ಗದವರು ಸನ್ಮಾರ್ಗದಲ್ಲಿ ಸಾಧಕರಾಗಿ ಮುಂದುವರೆಯುತ್ತಿರುವರು ಇವರ ಸಚ್ಛಿಷ್ಯರಲ್ಲೊಬ್ಬರಾದ ಚಿತ್ರದುರ್ಗ ನಗರವಾಸಿಗಳಾದ ಆರ್. ಚಿಕ್ಕೇಶ್ವರಾಚಾರ್ಯರು ಈ ಉತ್ತಮ ಗ್ರಂಥವನ್ನು ರಚಿಸಿ ಜಿಜ್ಞಾಸುಗಳಿಗೆ ಜ್ಞಾನಾಮೃತವನ್ನು ಹಂಚಿರುವುದು ಬಹು ಸ್ತುತ್ಯಕಾರ್ಯವಾಗಿದೆಯೆಂದು ವಿಶ್ವಾಸಪೂರ್ವಕವಾಗಿ ವಿಜ್ಞಾಪಿಸಿರುತ್ತೇವೆ.


ಪಂಡಿತಪ್ರವರ ನ್ಯಾಯ, ವೇದಾಂತ, ಮೀಮಾಂಸಾ ವಿದ್ವಾನ್,

**ಎಂ. ಲಕ್ಷ್ಮೀನರಸಿಂಹಶಾಸ್ತ್ರಿ**

55, ಎಚ್.ಬಿ. ಸಮಾಜ ರಸ್ತೆ, : : ಬೆಂಗಳೂರು–560 004.



ದಿ|| ಬಳೇಚಂಗಪ್ಪನವರು ಮತ್ತು ಮುನಿವೆಂಕಟಮ್ಮನವರು



ಶ್ರೀ ಪ್ರೇಮದಾಸ್ ಜಿಯವರು ಗುನಾಠಿ



## ನಮೋ ಭಗವತೇ ಶಂಕರಾನಂದಾಯ

ಯದವಿದ್ಯಾ ವಿಲಾಸೇನ ಭೂತ ಭೌತಿಕ ಸೃಷ್ಟಯಃ ।
ತಂ ನೌಮಿ ಪರಮಾತ್ಮಾನಂ ಶಂಕರಾನಂದ ಸದ್ಗುರುಮ್ ॥

# ಪ್ರಸ್ತಾವನೆ

"ಧರ್ಮವು ಗ್ಲಾನಿಯಾಗಿ ಅಧರ್ಮವು ಅಭಿವೃದ್ಧಿಯಾದಾಗ ಪರಮಾತ್ಮನು ಅವತರಿಸಿ ಅಧರ್ಮವನ್ನು ನಾಶಮಾಡಿ ಧರ್ಮವನ್ನು ಬೆಳಗುವಂತೆ ಮಾಡುತ್ತಾನೆ." ಎನ್ನುವುದು ಗೀತೆಯ ಸಾರಸಂದೇಶ. ಇದು ಅವತಾರ ರಹಸ್ಯ. ಹಾಗೆಯೇ ಶಂಕರನು ಶ್ರೀ ಶಂಕರಭಗವತ್ಪಾದಾಚಾರ್ಯನಾಗಿ ಅವತರಿಸಿ ಧರ್ಮವನ್ನು ಬೆಳಗುವಂತೆ ಮಾಡಿದನು; ಅದೇ ಶಂಕರನೇ ಹತ್ತೊಂಬತ್ತನೆಯ ಶತಮಾನದ ಅಂತ್ಯಭಾಗದಲ್ಲಿ ಶ್ರೀ ಶಂಕರಾನಂದರೆಂಬ ಹೆಸರಿನಿಂದ ಅವತರಿಸಿ ಭರತಖಂಡದೆಲ್ಲೆಲ್ಲಾ ಮೂರಾವರ್ತಿ ಪಾದಯಾತ್ರೆ ಮಾಡಿ ಜಗದ್ವಿಖ್ಯಾತ ಶ್ರೀಮದ್ಭಗವದ್ಗೀತೆಯ ಸಾರಸಂದೇಶವನ್ನು ಆಂಧ್ರ ಕರ್ಣಾಟಕದಲ್ಲಿ ಪ್ರಚಾರಮಾಡಿ ಗೀತಾಚಾರ್ಯ, ಗೀತಾಸ್ವಾಮಿಗಳೆಂದು ಅಭಿವಾದನೆ ಹೊಂದಿ, ಶ್ರೀಮದ್ಭಗವದ್ಗೀತೆಗೆ ಸರಳವಾದ ತಿಳಿಗನ್ನಡದಲ್ಲಿ ಸರ್ವರೂ ಓದಿ ಆನಂದಿಸುವಂತೆ ವ್ಯಾಖ್ಯಾನವನ್ನು ಬರೆದು, ಸರ್ವರಿಗೂ ದಯಪಾಲಿಸಿದರು. ಆ ಅವತಾರ ಪುರುಷರಾದ ಆ ಗುರುದೇವರು ಜಗತ್ತಿನ ಜನಗಳ ಅವಿದ್ಯಾನಿರಸನ ಮಾಡುತ್ತಾ ಸದಾ ಪ್ರಚಾರ–ಪ್ರವಚನ ಮಾಡುತ್ತಾ ಶ್ರೀ ಶಂಕರ ಭಗವತ್ಪಾದಾಚಾರ್ಯರು ಧರ್ಮ ಪ್ರಚಾರಕ್ಕಾಗಿ ನಾಲ್ಕು ಮಠಗಳನ್ನು ಸಂಸ್ಥಾಪಿಸಿದಂತೆ ಇವರೂ ಎಂಟು ಆಶ್ರಮಗಳನ್ನು

ಸಂಸ್ಥಾಪಿಸಿ ಧರ್ಮಪ್ರಚಾರಕ್ಕೆ ಅವಕಾಶ ಮಾಡಿಕೊಟ್ಟರು ಇಂಥ, ಕರ್ಣಾಟಕದಲ್ಲಿ ಪಂಡಿತರಿಗೂ ಪಾಮರರಿಗೂ, ಭಕ್ತರಿಗೂ, ಕರ್ಮಿಗಳಿಗೂ, ಕರ್ಮಯೋಗಿಗಳಿಗೂ, ಜಿಜ್ಞಾಸುಗಳಿಗೂ ಅವರವರ ವ್ಯುತ್ಪತ್ತಿಗೆ ತಿಳಿಯುವಂತೆ ಜ್ಞಾನೋಪದೇಶವನ್ನು ಮಾಡಿದರು. ಅವರ ಆ ದಿವ್ಯವಾದ ಚಿತ್ತಾಕರ್ಷಕಮಯವಾದ ಆ ಸಿಂಹವಾಣಿಯನ್ನು ಕೇಳಿದವರಾರೂ ಎಂದೂ ಮರೆಯದಂತಹ ಸ್ಥಿತಿಯನ್ನು ಪಡೆದರು. ಅವರ ಪ್ರವಚನಕ್ಕೆ ಎಲ್ಲಿ ಇಲ್ಲದ ಜನ. ಅವರ ಅಮೃತಮಯವಾಣಿಯ ಒಂದಕ್ಷರವನ್ನು ಕಳೆದುಕೊಳ್ಳಲು ಯಾರೂ ಇಚ್ಛೆಪಡುತ್ತಿರಲಿಲ್ಲ. ಅದು ತಮ್ಮದೇ ಆದ ಶೈಲಿ—ತಮ್ಮದೇ ಆದ ಗಾಂಭೀರ್ಯ—ತಮ್ಮದೇ ಆದ ವೈಖರಿ, ಮತ್ತೆಲ್ಲಿಯೂ ಸಿಕ್ಕಲಾರದು. ಪಕ್ಷಿಗಳು ಕಠಿಣವಾದ ಬೀಜವನ್ನು ಮೃದುವಾಗಿ ಮಾಡಿ ತನ್ನ ಮರಿಗಳಿಗೆ ಗುಟುಕು ಕೊಡುವಂತೆ ಶ್ರೀ ಗುರುದೇವರು ಕಠಿಣವಾದ ವೇದಾಂತ ವಿಚಾರವನ್ನು ಸಾಮಾನ್ಯರಿಗೂ ತಿಳಿಯುವಂತೆ ಮೃದುವಾಗಿ ಮಾಡಿ ಬೋಧಿಸುತ್ತಿದ್ದರು. ಅವರ ಪಾದತಳದಲ್ಲಿ ಕುಳಿತು ವೇದಾಂತದ ಕಠಿಣ ಪ್ರಕರಣಗಳನ್ನೂ ಕೇಳಿ ಆನಂದಪಡುವುದು ಒಂದು ಹಬ್ಬ. ಆ ಮಹಾತ್ಮರ ಕೃಪಾಕಟಾಕ್ಷದಿಂದ ಯಾರೋ ಕೆಲವು ಜನ ಸೂಕ್ಷ್ಮ ಬುದ್ಧಿಯವರಿಗಾಗಿಯೇ ಮೀಸಲಾಗಿದ್ದ ವೇದಾಂತವು ಸಾರ್ವಜನಿಕರ ಹೃದಯವನ್ನೂ ಪ್ರವೇಶಿಸಿತು.

ಅಂತಹ ದಿವ್ಯಮಂಗಳ ಸ್ವರೂಪರಾದ ಶ್ರೀ ಗುರುದೇವರ ಅಡಿದಾವರೆಯಲ್ಲಿ ಕುಳಿತು ಶ್ರವಣ ಮಾಡುವ ಒಂದು ಉತ್ತಮವಾದ ಅವಕಾಶ ಕೇವಲ ೨೧ ನೇ ವಯಸ್ಸಿನಲ್ಲಿಯೇ ನನಗೆ ಒದಗಿದ್ದುದು ಆ ಮಹಾತ್ಮರ ಕೃಪಾಕಟಾಕ್ಷದಿಂದಲೇ. ಅವರ ಆ ದಿವ್ಯವಾದ ಪ್ರವಚನ—ಬೋಧೆಯನ್ನು ಕೇಳಿ ಹೃದಯ ಪರಿವರ್ತನೆ ಆಗದವರೇ ಇಲ್ಲ. ಸಾಮಾನ್ಯ ಗುರುಗಳು ಅಂತಃಕರಣ ಶುದ್ಧಿಯಾದವರನ್ನು ಮಾತ್ರ ಉದ್ಧಾರಮಾಡಬಲ್ಲವರಾದರೆ, ವಾರಿಧಿಮನ್ಥಿಸಿದರೆ ರತ್ನಂಗಳು ದೊರಕುವಂತೆ ಈ ಮಹಾಪುರುಷರ ಬೋಧೆಯಿಂದ ಸಾಮಾನ್ಯರೂ ಉದ್ಧಾರವಾದರು. ನಾನೂ ಸಹ ಅವರ ಜಗದ್ವಿಖ್ಯಾತ ವಾಣಿಗೆ ಎಲ್ಲಿಲ್ಲದ ಅನುಭವಹೊಂದಿದೆ. ಸುಕೋಮಲವಾಗಿ ಅರಳಿದ ಪುಷ್ಪವು ದೂರದ ಭೃಂಗವನ್ನು ಆಕರ್ಷಿಸುವಂತೆ ಅವರು ನಮ್ಮನ್ನೆಲ್ಲಾ ಆಕರ್ಷಿ

ಸಿದರು. ಅವರ ಪಾದತಳವೇ ನಮಗೊಂದು ಆನಂದದ ಕೇಂದ್ರವಾಯಿತು. ಸರ್ವ ವ್ಯವಹಾರ ಪ್ರಪಂಚವನ್ನೇ ಮರೆಸುವ ಕಲೆ ಅವರ ವಾಣಿಯಲ್ಲಿತ್ತು. ಅವರ ದಿವ್ಯ ಸಂಗವೇ ನಿಸ್ಸಂಗಕ್ಕೆ-ನಿರ್ಮೋಹಕ್ಕೆ ದಾರಿದೀಪವಾಯಿತು. ಅವರ ಹೃದಯದ ಪ್ರೇಮವೋ ಅಗಾಧವಾದುದು. "ಕರುಣಾರಸದ ಕೋಡಿ ವರಿವ ಕಟಾಕ್ಷದ" ಎಂಬ ಶ್ರೀ ನಿಜಗುಣರ ವಾಣಿಯನ್ನು ಅವರಲ್ಲಿ ಸಾಕ್ಷಾತ್ತಾಗಿ ಕಂಡೆವು. "ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ। ಈಕ್ಷತೇ ಯೋಗ ಯುಕ್ತಾತ್ಮಾ ಸರ್ವತ್ರ ಸಮದರ್ಶನ" ಎಲ್ಲೆಲ್ಲಿಯೂ ಸಮದೃಷ್ಟಿಯುಳ್ಳ, ಎಲ್ಲರಲ್ಲಿಯೂ ತನ್ನನ್ನು, ತನ್ನಲ್ಲಿ ಎಲ್ಲರನ್ನೂ ಕಾಣುವಂತೆ ಶ್ರೀಮದ್ಭಗವದ್ಗೀತೆಯಲ್ಲಿ ಹೇಳಿರುವ ಯೋಗಾರೂಢನ ಸ್ಥಿತಿಯನ್ನು ಆ ಮಹಾತ್ಮರಲ್ಲಿ ಕಂಡೆವು. ಅದೊಂದು ಅಪೂರ್ವಸ್ಥಿತಿ. ಅಂತಹ ಪೂಜ್ಯಗುರುದೇವರ ಪಾದಕಮಲಗಳ ಸಮೀಪದಲ್ಲಿ ನಿಷ್ಠೆಯಿಂದು ಕುಳಿತು ಶ್ರೀಮದ್ಭಗವದ್ಗೀತಾ, ಉಪನಿಷತ್ತಾದಿಶಾಸ್ತ್ರಗಳನ್ನೂ, ವಿಚಾರ ಚಂದ್ರೋದಯ ಚಾಕಸಾಗರ, ವೇದಾಂತಪಂಚದಶಿ, ಜ್ಞಾನಶತಕಾದಿ, ಪ್ರಕರಣ ಗ್ರಂಥಗಳನ್ನು ಅಧ್ಯಯನ ಮಾಡಿಸುವಾಗ-ಉಪನ್ಯಾಸ ಮಾಡುವಾಗ "ನೈಷ್ಕರ್ಮ್ಯಸಿದ್ಧಿ"ಯಲ್ಲಿರುವ ಕೆಲವು ವಿಷಯಗಳನ್ನೂ ಉದಾಹರಣೆಗಳನ್ನೂ ಸಂದರ್ಭೋಚಿತವಾಗಿ ತಿಳಿಸುತ್ತಿದ್ದರು; ಮತ್ತು ನೈಷ್ಕರ್ಮ್ಯಸಿದ್ಧಿಯೂ ಪ್ರಕರಣ ಗ್ರಂಥದಲ್ಲಿ ಸರ್ವಶ್ರೇಷ್ಠವಾದುದೆಂದೂ ಮುಕ್ತಕಂಠದಿಂದ ಹೊಗಳುತ್ತಿದ್ದರು. "ವೇದಾಂತ ಪ್ರಮಾಣದಿಂದ ನಮಗೆ ಹೊಸ ಜ್ಞಾನವಾಗದೆ ಮೊದಲಿನಿಂದಲೂ ಇದ್ದ ಅಜ್ಞಾನವು ಮಾತ್ರ ನಾಶವಾಗುತ್ತದೆ. ಅಜ್ಞಾನ ನಾಶವೇ ವೇದಾಂತದ ಫಲವೇ ವಿನಃ ಹೊಸ ಜ್ಞಾನವನ್ನು ತಂದು ಕೊಡುವುದಲ್ಲ; ವೇದಾಂತ ಪ್ರಮಾಣವು ಆತ್ಮಜ್ಞಾನ ಮಾಡಿಕೊಡುತ್ತದೆಂದು ಹೇಳುವುದು ಉಪಚಾರಕ್ಕಾಗಿಯೇ ವಿನಃ ನಿಜವಾದುದಲ್ಲ"ವೆಂಬ ನೈಷ್ಕರ್ಮ್ಯ ಸಿದ್ಧಿಯ ಮಾತನ್ನು ಬಹಳ ಗಂಭೀರವಾಗಿ ಪದೇಪದೇ ಹೇಳುತ್ತಿದ್ದರು. ನೈಷ್ಕರ್ಮ್ಯ ಸಿದ್ಧಿಯನ್ನು ಒಮ್ಮೆ ಪಾಠರೂಪದಿಂದ ಬೋಧಿಸುವುದಾಗಿ ಆಗಾಗ್ಗೆ ತಿಳಿಸುತ್ತಿದ್ದರು. ಆದರೆ ಆಭಾಗ್ಯವದಗಲಿಲ್ಲ. ಆದರೂ ನೀವೇ ಸ್ವತಃ ಅಧ್ಯಯನ ಮಾಡಿ ಅದನ್ನು ಅನುಭವಿಸಿರೆಂಬ ಆಶೀರ್ವಾದವೂ ದೊರೆತಿತ್ತು. ಈ ರೀತಿ ಪೂಜ್ಯಪಾದರು ನೈಷ್ಕರ್ಮ್ಯ ಸಿದ್ಧಿಯ ಮೇಲೆ

ಅಭಿಮಾನ ಹುಟ್ಟಿಸಿದರು. ಇಷ್ಟೆಲ್ಲಾ ಅಭಿಮಾನವಿದ್ದರೂ ಆ ಗ್ರಂಥವನ್ನು ಅಧ್ಯಯನ ಮಾಡುವ ಅವಕಾಶ ಬಹ.ದಿನಗಳವರೆಗೆ ಸಿಕ್ಕಲಿಲ್ಲ. ಒಂದು ಸಾರಿ ಅದರ ಅಧ್ಯಯನ ಮಾಡುವ ಕುತೋಹಲವಂತು ತೀವ್ರವಾಗಿತ್ತು.

ಅದೊಂದು ಮಹಾ ಪವಿತ್ರವಾದದಿನ ಆಷಾಢ ಶುದ್ಧ ಏಕಾದಶಿ ಚಾತುರ್ಮಾಸವ್ರತಾರಂಭದ ದಿನ. ಆ ದಿನದಿಂದ ಯಾವುದಾದರೊಂದು ಉತ್ತಮ ಗ್ರಂಥವನ್ನು ಅಧ್ಯಯನ ಮಾಡಬೇಕೆಂಬ ಇಚ್ಛೆ ಶ್ರೀ ಗುರುದೇವರ ಕೃಪೆಯಿಂದ ಸಂಸ್ಫುರಿಸಿತು. ಅದಕ್ಕಾಗಿ ಬಹುದಿನಗಳ ಅಪೇಕ್ಷೆಯಂತೆ “ನೈಷ್ಕರ್ಮ್ಯಸಿದ್ಧಿ”ಯನ್ನೇ ಆರಿಸಲಾಯಿತು. ಸ್ವಲ್ಪಸ್ವಲ್ಪ ಅಧ್ಯಯನ ಮಾಡುವುದು ಅದನ್ನೇ ಮನನ ಮಾಡುವುದು. ಹೀಗೆ ನೈಷ್ಕರ್ಮ್ಯ ಸಿದ್ಧಿಯ ವ್ಯವಸಾಯ ನಡೆಯಿತು. ಆಗ ಅದರ ಮೇಲೆ ಅಪಾರ ಗೌರವಾದರಗಳೂ, ವಿಶ್ವಾಸಗಳೂ ಹುಟ್ಟಿಕೊಂಡವು. ಬೇಕು ಬೇಕಾದಾಗ ನೈಷ್ಕರ್ಮ್ಯ ಸಿದ್ಧಿಯ ವಿಷಯಗಳನ್ನು ಬಳಸುವುದು, ಉದಾಹರಣೆಗಳನ್ನು ಉಪಯೋಗಿಸಿಕೊಳ್ಳುವ ಪರಿಪಾಠವೂ ಬೆಳೆಯುತ್ತಾ ಬಂತು. ಆಗಾಗ್ಗೆ ಅದರ ಅವಲೋಕನವೂ ಹೆಚ್ಚಾಗುತ್ತಾ ಬಂತು. ಇಷ್ಟೆಲ್ಲಾ ವ್ಯವಸಾಯ ಸುಮಾರು ಮೂರು ವರ್ಷಗಳ ವರೆಗೆ ನಡೆಯಿತು. ಅದನ್ನು ಒಮ್ಮೆ ಪ್ರವಚನ ಮಾಡಬೇಕೆಂಬ ಅಭಿಲಾಷೆಯೂ ಬಂತು. ಅಧ್ಯಯನವು ಇನ್ನೂ ತೀವ್ರವಾಯಿತು. ಮನೆಯಲ್ಲಿಯೇ ಪ್ರವಚನ ಆರಂಭವಾಯಿತು. ಕೇಳುವವರಿಗೂ ರುಚಿಯಾಗಿ ಕಂಡಿತು. ನಿರಂತರದ ಈ ಅಭ್ಯಾಸದಿಂದ ಅದರ ಮೇಲಿನ ಪ್ರೇಮ ಗಾಢವಾಯಿತು. “ಪ್ರಶ್ನೋತರ ರೂಪದಿಂದ ಇದನ್ನು ಬರೆದು ಸಾಮಾನ್ಯ ಜನಕ್ಕೂ ತಿಳಿಯಪಡಿಸುವಂತೆ” ಶ್ರೀ ಗುರುದೇವರ ಆಜ್ಞೆಯು ಭಕ್ತರೊಬ್ಬರ ಮೂಲಕ ಬಂತು. ಆ ಮಾತು ಚನ್ನಾಗಿ ಕಂಡುಬಂತು. ಅಂದಿನಿಂದಲೇ ಪ್ರಶ್ನೋತ್ತರ ರೂಪದಿಂದ ನೈಷ್ಕರ್ಮ್ಯಸಿದ್ಧಿಯ ಬರವಣಿಗೆ ಪ್ರಾರಂಭವಾಯಿತು. ಬರವಣಿಗೆಗಾಗಿ ಬೈಲಹೊಂಗಲದ ಶ್ರೀ ಕುಲಕರಣಿ ನಾರಾಯಣರಾಯರು ಉತ್ತಮ ರೀತಿಯಿಂದ ಅನುವಾದ ಮಾಡಿದ ಗ್ರಂಥವನ್ನೂ–ಹೊಳೇನರಸೀಪುರದ ಅಧ್ಯಾತ್ಮ ಪ್ರಕಾಶ ಕಾರ್ಯಾಲಯದ ಪೂಜ್ಯ ಶ್ರೀ ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತಿಸ್ವಾಮಿಗಳವರ ಮೂಲ ಮತ್ತು ತಾತ್ಪರ್ಯದಿಂದ ಒಡಗೂಡಿದ ನೈಷ್ಕರ್ಮ್ಯಸಿದ್ಧಿಯನ್ನು ಆಧಾರವಾಗಿಟ್ಟು

ಕೊಂಡು ಈ ಗ್ರಂಥವ ಬರವಣಿಗೆಯು ಪ್ರಾರಂಭವಾಯಿತು. ಇಲ್ಲಿ ಅವರ ಉಪಕಾರವನ್ನು ಸ್ಮರಿಸುತ್ತೇನೆ. ಮೂಲಕ್ಕೆ ಕುಂದುಂಟಾಗದಂತೆ ಅಲ್ಲಲ್ಲಿ, ಭಗವದ್ಗೀತೆ ಉಪನಿಷತ್ತು, ವಿಚಾರ ಸಾಗರಗಳ ಪ್ರಮಾಣವನ್ನೂ ಕೊಟ್ಟಿದ್ದೇನೆ. ಇದೆಲ್ಲಾ ಈ ಗ್ರಂಥವನ್ನು ಹೆಚ್ಚು ಮಾಡಬೇಕೆಂದಲ್ಲ. ಸಾಮಾನ್ಯ ಜನರೂ ಅರ್ಥ ಮಾಡಿಕೊಳ್ಳಲೆಂಬ ಸದಿಚ್ಛೆಯಿಂದ, ಪ್ರಶ್ನೆಗಳನ್ನು ಕಲ್ಪಿಸಿ ಉತ್ತರಗಳನ್ನು ಇಟ್ಟಿದ್ದೇನೆ. ಪೂರ್ವ ಪಕ್ಷಿಗಳ ಪ್ರಶ್ನೆಗಳನ್ನು ಮಾತ್ರ ಮೂಲದಲ್ಲಿರುವಂತೆಯೇ, ಅಲ್ಪಸ್ವಲ್ಪ ಸರಳ ಮಾಡಿ ಬರೆದಿದ್ದೇನೆ.

ಒಂದು ಮತ್ತು ಎರಡನೇ ಅಧ್ಯಾಯಗಳನ್ನೊಳಗೊಂಡ ಒಂದು ಪುಸ್ತಕ, ಮೂರು ಮತ್ತು ನಾಲ್ಕನೇ ಅಧ್ಯಾಯಗಳನ್ನೊಳಗೊಂಡ ಒಂದು ಪುಸ್ತಕ ಹೀಗೆ ಎರಡು ಗ್ರಂಥಗಳು ಸಿದ್ಧವಾದವು. ಶ್ರೀ ಗುರುದೇವರ ಕೃಪಾ ಕಟಾಕ್ಷದಿಂದಲೂ ಶ್ರೀ ಸುರೇಶ್ವರಾಚಾರ್ಯರ ಅನುಗ್ರಹದಿಂದ ಈಗ ಒಂದನೇ ಭಾಗ ಮಾತ್ರ ಪ್ರಿಂಟಾಗಿ ತಮ್ಮಗಳ ಕೈಸೇರಿದೆ.

೨

ಅದ್ವೈತ ತತ್ತ್ವವನ್ನೇ ಪ್ರತಿಪಾದಿಸುವ ಪ್ರಕರಣ ಗ್ರಂಥಗಳಲ್ಲಿ ನೈಷ್ಕರ್ಮ್ಯಸಿದ್ಧಿಯು ಶ್ರೇಷ್ಠಸ್ಥಾನವನ್ನು ಗಳಿಸಿಕೊಂಡಿದೆ. ಶ್ರೀ ಸುರೇಶ್ವರಾಚಾರ್ಯರು ಗೃಹಸ್ಥಾಶ್ರಮದಲ್ಲಿ ಮಂಡನ ಮಿಶ್ರರೆಂಬ ಹೆಸರಿನಿಂದ ಪೂರ್ವಮೀಮಾಂಸಕರಾಗಿ ಪ್ರಸಿದ್ಧಿಯಾಗಿದ್ದರು. ಅವರ ಧರ್ಮಪತ್ನಿಯೇ ಉಭಯಭಾರತಿ. ಮಂಡನ ಮಿಶ್ರರು ಶ್ರೀ ಜಗದ್ಗುರು ಆದ್ಯ ಶಂಕರಾಚಾರ್ಯರ ಶಿಷ್ಯರಾಗಿ ಸಂನ್ಯಾಸ ಸ್ವೀಕರಿಸಿದನಂತರ ಅವರಿಂದ ತಮ್ಮ ಭಾಷ್ಯಕ್ಕೆ ವಾರ್ತಿಕೆ ಬರೆಸಲು ಜಗದ್ಗುರುಗಳು ಅಭಿಪ್ರಾಯಪಟ್ಟರು. ಇನ್ನುಳಿದ ಶಿಷ್ಯರಿಗೆ ಇದು ಸಮಂಜಸವಾಗಿ ತೋರಲಿಲ್ಲವೆಂಬಂತೆ ಕಾಣುತ್ತದೆ. ಕಾರಣ ಪೂರ್ವಮೀಮಾಂಸಕರಾದ ಮಂಡನ ಮಿಶ್ರರು ಜಗದ್ಗುರುವಿನ ಕೃಪಾಶೀರ್ವಾದದಿಂದ ಪೂರ್ಣಜ್ಞಾನವನ್ನು ಪಡೆದಿದ್ದರೂ, ಭಯಂಕರ ಸ್ವಪ್ನವನ್ನು ಕಂಡವನು ಜಾಗ್ರದಾವಸ್ಥೆಗೆ ಬಂದಿದ್ದರೂ ಸ್ವಪ್ನದ ಕಂಪನವನ್ನು ಇನ್ನೂ ಅನುಭವಿಸುವಂತೆ ಮಂಡನ ಮಿಶ್ರರೂ ಪೂರ್ಣ ಕರ್ಮಿಗಳಾಗಿದ್ದು ಅಲ್ಪಸ್ವಲ್ಪ ಆ ಕರ್ಮದ ವಾಸನೆ ಇಟ್ಟುಕೊಂಡು ಲೋಕ ಕಲ್ಯಾಣಕ್ಕಾಗಿ ಬರೆದ ಜಗತ್ಪ್ರಸಿದ್ಧಿಯಾದ ಶಂಕರಭಾಷ್ಯಕ್ಕೆ ಬರೆಯಲಿರುವ ವಾರ್ತಿಕೆ

ಯಲ್ಲಿಯೂ ಹಿಂದಿನ ಸಂಸ್ಕಾರದ ಕರ್ಮವನ್ನು ಅಲ್ಲಲ್ಲಿ ಸೇರಿಸಿರುವರು ಎಂಬ ಭಯ ಅನೇಕ ಜನ ಶಿಷ್ಯರಿಗೆ ತೋರಿರಬೇಕು. ಇಲ್ಲವೇ ಜಗತ್ಪ್ರಸಿದ್ಧಿಯಾದ ಸ್ವತಂತ್ರ ಗ್ರಂಥವು ಇವರಿಂದ ಹೊರಬೀಳಲಿ ಎಂಬ ಸದಿಚ್ಛೆಯಿಂದ ಶ್ರೀ ಶಂಕರರು ಇವರಿಗೆ ತಮ್ಮ ಜ್ಞಾನದ ಯೋಗ್ಯತೆಯ ಪ್ರದರ್ಶನಕ್ಕಾಗಿ ಈ ಗ್ರಂಥ ಬರೆಯಲು ಆಜ್ಞಾಪಿಸಿರಬಹುದು. ಆ ಕಾರಣದಿಂದ ಶ್ರೀ ಸುರೇಶ್ವರಾಚಾರ್ಯರು ಈ ಜ್ಞಾನ ಪರೀಕ್ಷೆಯ ಉದ್ಗ್ರಂಥವನ್ನು ಜಗತ್ತಿಗೆ ದಯಪಾಲಿಸಿದರು. ಇದು ಆದ್ಯ ಜಗದ್ಗುರುವಿನಿಂದ ಮೊದಲನೆ ಪ್ರಶಸ್ತಿ ಪಡೆದ ಹಿರಿಯ ಗ್ರಂಥ. ಉತ್ತಮಾಧಿಕಾರಿಗೆ ಮೀಸಲಾದ ಉದ್ಗ್ರಂಥ. "ಗುರುಗಳ ಆಜ್ಞೆಯಿಂದಲೇ ನಾನೀಗ್ರಂಥವನ್ನು ಬರೆಯುತ್ತಿದ್ದೇನೆಂದು ಶ್ರೀ ಸುರೇಶ್ವರಾಚಾರ್ಯರೇ ಗ್ರಂಥದ ಆರಂಭದಲ್ಲಿ ಹೇಳಿದ್ದಾರೆ. ಮತ್ತು ಬ್ರಹ್ಮಜ್ಞಾನಿಗಳ ಮುಂದೆ ತಮ್ಮ ಪರೀಕ್ಷೆಯನ್ನು ಕೊಡುವುದಕ್ಕಾಗಿ ತಾವು ಈ ಗ್ರಂಥವನ್ನು ಬರೆದಿವೆಂದೂ ಮುಕ್ತಕಂಠದಿಂದ ಹೇಳಿದ್ದಾರೆ ಮತ್ತು "ನಾನು ಬರೆದೆನೆಂದು ಯಾರೂ ಒಪ್ಪಬೇಡಿರಿ; ನಿಷ್ಪಕ್ಷಪಾತದಿಂದ ಪರೀಕ್ಷಿಸಿರಿ" ಎಂದು ವಿಜ್ಞಾಪನೆ ಮಾಡಿಕೊಂಡಿದ್ದಾರೆ. ಇದು ಇವರ ಸೌಜನ್ಯಕ್ಕೆ ಸಾಕ್ಷಿಯಾಗಿದೆ. ಅವರೇ ತಮ್ಮ ಮುಕ್ತಕಂಠದಿಂದ "ಅಶೇಷ ವೇದಾಂತ ಸಾರ ಸಂಗ್ರಹ ಪ್ರಕರಣಮ್" ಎಂಬುದಾಗಿ ಈ ಗ್ರಂಥವನ್ನು ಹೊಗಳಿದ್ದಾರೆ. ಆ ಕಾರಣದಿಂದ ದಕ್ಷಿಣ ಆಮ್ನಾಯವಾದ, ತಪೋಭೂಮಿಯಾದ, ಅದ್ವೈತ ವಿದ್ಯೆಯ ಕೇಂದ್ರವಾದ ಶೃಂಗೇರಿಯ ಶ್ರೀ ಶಾರದಾ ಪೀಠವನ್ನು ಅಲಂಕರಿಸಿದ ಮೊದಲನೆ ಜಗದ್ಗುರುಗಳ, ಮೊದಲನೆ ಕೃತಿಯಾದ, ಜ್ಞಾನಿಗಳ ಮುಂದೆ ಪರೀಕ್ಷೆಗಾಗಿ ಬರೆದ ಈ ಸ್ವತಂತ್ರವಾದ, ಪ್ರೌಢವಾದ ನೈಷ್ಕರ್ಮ್ಯಸಿದ್ಧಿ ಎಂಬ ಗ್ರಂಥವು ಎಲ್ಲಾ ವೇದಾಂತಿಗಳಿಗೂ ಪ್ರಸಾದ ರೂಪವಾಗಿ ಬೆಳಗಿದೆ.

ಶ್ರೀ ಶಂಕರಾಚಾರ್ಯರ, ಶ್ರೀ ಸುರೇಶ್ವರಾಚಾರ್ಯರ ಕಾಲದ ಬಗ್ಗೆ ಅಸ್ಪಷ್ಟತೆ ಕಂಡುಬರುವಂತೆ ಕಾಣುತ್ತದೆ. ಕಾಲಗತ, ದೇಶಗತ, ವಸ್ತುಗಳ ಪರಿಚ್ಛಿನ್ನತೆ ಇರುವುದು ಜಡವಾದ, ಭೌತಿಕವಾದ, ಮಿಥ್ಯಾಭೂತವಾದ ದೇಹಾದಿ ಪದಾರ್ಥಗಳಿಗೆ. ತಾನು ಬ್ರಹ್ಮಸ್ವರೂಪನೆಂಬ ಅಪರೋಕ್ಷ ಜ್ಞಾನಿಗೆ ಯಾವ ಪರಿಚ್ಛಿನ್ನತೆಗಳೂ ಇರುವುದಿಲ್ಲ. ಪರಿಚ್ಛಿನ್ನತೆಗಳೂ

ಮಿಥ್ಯವೆ ಆವರು ಕಾಲಕ್ಕೆ ಕಾಲನಾದ ಮಹಂಕಾಲೇಶ್ವರರು. ಸರ್ವತ್ರ ವ್ಯಾಪಕರು, ಆದುದರಿಂದ ಅವರಿಗೆ ಕಾಲವಿಲ್ಲಿಯದು! ದೇಹ ಭಾವನೆ ಇರುವವರಿಗೆ ಮಾತ್ರ ಕಾಲ ನಿರ್ಣಯವಿರುತ್ತದೆ "ನಾನು 1930 ನೇ ಇಸವಿಯಲ್ಲಿ ಹುಟ್ಟಿದೆನು" ಎನ್ನುವುದು ದೇಹವನ್ನು ಕುರಿತು ಹೇಳಿದ ಮಾತಾಗಿದೆ. ಆಚಾರ್ಯರಿಗೆ ತಾನು ದೇಹವೆಂಬ ಭಾವನೆ ಪೂರ್ಣ ಇಲ್ಲ ವಾಗಿ ನಾನು ಸತ್ತು, ಚಿತ್ತು, ಆನಂದ ಸ್ವರೂಪನೆಂಬ, ಭಾವನೆ ದೃಢವಾಗಿ ಜೀವನ್ಮುಕ್ತಾವಸ್ಥೆಯನ್ನು ಅನುಭವಿಸುವ ಅವರು ತಮ್ಮ ಕಾಲವನ್ನು ಎಲ್ಲಿಯೂ ಸೂಚಿಸಿಯೇ ಇಲ್ಲ.

ಆವರು ಎಲ್ಲಿಯೂ ತಮ್ಮ ಜಾತಿಕುಲ ಗೋತ್ರಗಳನ್ನು ಸೂಚಿಸಿದಂತೆ ಕಂಡುಬರುವುದಿಲ್ಲ. ಇದಕ್ಕೆ ಕಾರಣ—ಜಾತಿ ಕುಲ ಗೋತ್ರಗಳು ಅಜ್ಞಾನಿ ಗಳಿಗೆ, ಅದೂ ಜಾಗ್ರದಾವಸ್ಥೆಯಲ್ಲಿ ವ್ಯವಹಾರ ಯೋಗ್ಯವಾದ ಈ ದೇಹಕ್ಕೆ ಮಾತ್ರ ಮೀಸಲು ; ಪ್ರತ್ಯಗಾತ್ಮನಾದ, ಕೂಟಸ್ಥನಾದ ತನಗೆ ಈ ಜಾತಿ ಕುಲಗೋತ್ರಗಳು ಏನೂ ಸಂಬಂಧವಿಲ್ಲವೆಂದು ಭಾವಿಸಿ ತಮ್ಮ ಕಾಲ ಜಾತಿ ಕುಲಗೋತ್ರಗಳನ್ನು ಎಲ್ಲಿಯೂ ತೋರಿಸುವ ಗೋಜಿಗೇ ಹೋಗಿರು ವುದಿಲ್ಲ. ಮತ್ತು ಸ್ಥಳದ ಕಲ್ಪನೆಯನ್ನು ಸೂಚಿಸಿಲ್ಲ. ಆದುದರಿಂದ ಶ್ರೀ ಸುರೇಶ್ವರಾಚಾರ್ಯರ ಜಾತಿಕುಲ ಗೋತ್ರಾದಿಗಳು ಸ್ಥಳ ಮತ್ತು ಕಾಲ ಗಳೂ ನಮಗೆ ಸರಿಯಾಗಿ ತಿಳಿದು ಬರುತ್ತಿಲ್ಲ.

ಶ್ರೀ ಶಂಕರ ಭಗವತ್ಪಾದಾಚಾರ್ಯರು ಅದ್ವೈತವನ್ನು ಸಿದ್ಧಾಂತ ಮಾಡುವುದಕ್ಕೋಸ್ಕರ ಭರತಖಂಡವನ್ನು ಪಾದಯಾತ್ರೆಯಿಂದ ಸಂಚರಿ ಸುತ್ತಿರುವಾಗ ಪೂರ್ವಮೀಮಾಂಸಕರಾದ ಕುಮಾರಿಲಭಟ್ಟರ ದರ್ಶನ ವಾಯಿತು. ಬೌದ್ಧ ಮತ ಖಂಡನೆಗಾಗಿ ಬೌದ್ಧಮತವನ್ನು ಸ್ವೀಕರಿಸಿ ಆ ಮತದ ಸಾರ ಸರ್ವಸ್ವವನ್ನು ಅರಿತು, ಆ ಮತವನ್ನು ಪುನಃ ಖಂಡಿಸಿ ಪೂರ್ವಮೀ ಮಾಂಸವನ್ನು ಸ್ಥಿರಪಡಿಸಿ, ಗುರುದ್ರೋಹ ಪ್ರಾಯಶ್ಚಿತ್ತಕ್ಕಾಗಿ ತುಷಾಗಿ ಯಲ್ಲಿ ತಮ್ಮ ದೇಹವನ್ನು ಭಸ್ಮೀಕರಿಸಿಕೊಳ್ಳುತ್ತಿರುವ ಕುಮಾರಿಲ ಭಟ್ಟರನ್ನು ಆಚಾರ್ಯರು ವಾದ ಮಾಡುವುದಕ್ಕಾಗಿ ಆಹ್ವಾನಿಸಿದರು. ಕುಮಾರಿಲ ಭಟ್ಟರು ತಾವು ಪ್ರಾಯಶ್ಚಿತ್ತವನ್ನು ಅನುಭವಿಸುತ್ತಿರುವುದರಿಂದ ಆಚಾರ್ಯ ಶಂಕರರನ್ನು ಮಂಡನಮಿಶ್ರರಲ್ಲಿಗೆ ಕಳಿಸಿದರು. ಮಂಡನ ಮಿಶ್ರರಿಗೂ ಶ್ರೀ

ಶಂಕರರಿಗೂ ವಾದ ಪ್ರಾರಂಭವಾಯಿತು. ಮಂಡನ ಮಿಶ್ರರು ಸೋತರೆ ಮೀಮಾಂಸವನ್ನು ತ್ಯಜಿಸಿ ಸಂನ್ಯಾಸ ಗ್ರಹಣಮಾಡಿ ಆಚಾರ್ಯರ ಶಿಷ್ಯ ರಾಗುವಂತಹ ಪ್ರತಿಜ್ಞೆ ಮಾಡಲಾಗಿತ್ತು. ಇದಕ್ಕೆ ಪರೀಕ್ಷಕರು ಧರ್ಮೋದ್ಧಾರಕ್ಕಾಗಿ ಅವತರಿಸಿದ ಮಂಡನ ಮಿಶ್ರರ ಧರ್ಮಪತ್ನಿ ಉಭಯಭಾರತೀ–ಶಾರದಾದೇವಿಯವರು ವಾದದಲ್ಲಿ ಶ್ರೀ ಮಂಡನಮಿಶ್ರರು ಪೂರ್ಣಪರಾಜಿತ ರಾದರು. ಅದ್ವೈತದಿಂದಲೇ–ಜ್ಞಾನದಿಂದಲೇ ಮೋಕ್ಷವೆಂದು ಸಿದ್ಧಾಂತ ವಾಯಿತು "ಸ್ವಸ್ವರೂಪಾವಸ್ಥಿತಿರ್ಮುಕ್ತಿರಿತ್ಯಭಿಧೀಯತೇ" ಸ್ವಸ್ವರೂಪ ಸ್ಥಿತಿಯೇ ಮುಕ್ತಿ ಎಂದೂ, ಮುಕ್ತಿಯು ಮತ್ತೇನನ್ನಾದರೂ ಮಾಡು ವುದರಿಂದ ಬರುವುದಿಲ್ಲವೆಂದೂ, ಅದು ಕಾರಕವಲ್ಲ ಸ್ಮಾರಕವೆಂದೂ ಸಿದ್ಧಾಂತವಾಯಿತು. "ತದ್ವಿವೇಕೇನ ಚ ವಸ್ತುಸ್ವರೂಪಾವಧಾರಣಂ ವಿದ್ಯಮಾಹುಃ" ವಸ್ತು ಸ್ವರೂಪವನ್ನು ವಿಭಜಿಸಿ, ಅಧಿಷ್ಠಾನದಿಂದ ಅಧ್ಯಸ್ತವನ್ನು ಬೇರ್ಪಡಿಸುವುದೇ ನಿಜವಾದ ವಿದ್ಯೆ ಎಂದು ಕರೆಯುತ್ತಾರೆ. ಅಧ್ಯಸ್ತವಾದ ಅತದ್ರೂಪವಾದ ಸರ್ಪವನ್ನು ವಿಲಯಮಾಡಿ ವಸ್ತು ಸ್ವರೂಪವಾದ ಹಗ್ಗವನ್ನು ಹಗ್ಗವೆಂದು ನಿಶ್ಚಯಿಸುವಂತೆ ಅನಾತ್ಮ ವಸ್ತು ವಿನಿಂದ ಆತ್ಮನನ್ನು ಬೇರ್ಪಡಿಸುವ ಜ್ಞಾನವೇ ವಿದ್ಯೆ ಎಂಬುದು ತೀರ್ಮಾನ ವಾಯಿತು. ತಮ್ಮ ಪ್ರತಿಜ್ಞೆಯಂತೆ ಮಂಡನಮಿಶ್ರರು ಸಂನ್ಯಾಸ ಸ್ವೀಕರಿಸಿ ಸುರೇಶ್ವರಾಚಾರ್ಯರಾದರು. ಶ್ರೀ ಶಂಕರಾಚಾರ್ಯರ ಶಿಷ್ಯರಾದರು. ತಮ್ಮ ಗುರುಗಳ ಜೊತೆಯಲ್ಲಿ ಭರತಖಂಡದ ಸಂಚಾರ ಮಾಡಲು ಪ್ರಾರಂಭಿಸಿದರು. ತಪೋಭೂಮಿಯಾದ ಶೃಂಗೇರಿಗೂ ದಯಮಾಡಿಸಿದರು. ಶ್ರೀ ಶಂಕರಾಚಾರ್ಯರು ಅಲ್ಲಿ ಶ್ರೀ ಶಾರದಾಪೀಠವನ್ನು ಸ್ಥಾಪಿಸಿ ಶ್ರೀ ಸುರೇಶ್ವರಾಚಾರ್ಯರನ್ನೇ ಮೊದಲನೇ ಜಗದ್ಗುರುಗಳನ್ನಾಗಿ ಮಾಡಿದರು.

ಶ್ರೀ ಸುರೇಶ್ವರಾಚಾರ್ಯರು ವೇದವೇದಾಂಗ ಪಾರಾಯಣರೂ, ಘನ ವಿದ್ವಾಂಸರೂ ಆಗಿದ್ದರು. ಗೃಹಸ್ಥಾಶ್ರಮದಲ್ಲಿದ್ದಾಗ ಇವರ ಮನೆಯ ಬಾಗಿಲಲ್ಲಿ ಪಂಜರದಲ್ಲಿದ್ದ ಗಿಳಿಯೂ ವೇದಪಾರಾಯಣ ಮಾಡುತ್ತಿದ್ದಿತೆಂದು ಇತಿಹಾಸವಿದೆ. ಇದರ ಮೇಲಿಂದ ಇವರು ಎಂತಹ ವಿದ್ವಾಂಸರೆಂದು ಪುನಃ ಹೇಳಬೇಕಾಗಿಲ್ಲ. ಇವರನ್ನು ಮಂಡನ ಮಿಶ್ರರೆಂದೂ, ಮಂಡನ ಪಂಡಿತ ರೆಂದೂ, ವಿಶ್ವರೂಪಾಚಾರ್ಯರೆಂದೂ ಕರೆಯುತ್ತಿದ್ದರು. ಇವರು ಒಳ್ಳೆಯ

ಬರಹಗಾರರೂ ಆಗಿದ್ದರು. ಇವರು ತಮ್ಮ ಪೂರ್ವಾಶ್ರಮದಲ್ಲಿದ್ದಾಗ ಪೂರ್ವಮೀಮಾಂಸೆಯ ಮೇಲೆ ಒಳ್ಳೆಯ ಪ್ರೌಢಗ್ರಂಥಗಳನ್ನು ಬರೆದಿದ್ದಾರೆ. (೧) ಆಪಸ್ತಂಬೀಯ ಮಂಡನಕಾರಿಕಾ (೨) ಭಾವನಾವಿವೇಕ (೩) ವಿಧಿ ವಿವೇಕ (೪) ಕಾಶೀ ಮೋಕ್ಷ ನಿರ್ಣಯ ಮೊದಲಾದ ಗ್ರಂಥಗಳು ಅವರ ಗೃಹಸ್ಥಾಶ್ರಮದ ಕೃತಿಗಳು. ಇವರು ಸಂನ್ಯಾಸಿಗಳಾದ ಮೇಲೆ ಬೃಹದಾರಣ್ಯಕ, ತೈತ್ತಿರೀಯೋಪನಿಷತ್ತಿನ ಶಂಕರ ಭಾಷ್ಯಕ್ಕೆ ಬರೆದ ವಾರ್ತಿಕೆಯು ಜಗತ್ಪ್ರಸಿದ್ಧಿಯಾಗಿದೆ. ಆದ್ದರಿಂದಲೇ ಇವರು ವಾರ್ತಿಕ ಕಾರರೆಂದು ಪ್ರಸಿದ್ಧರಾಗಿದ್ದಾರೆ.

೩

ನೈಷ್ಕರ್ಮ್ಯಸಿದ್ಧಿಯಲ್ಲಿ ಅದ್ವೈತದ ಮುಖ್ಯ ತತ್ತ್ವಗಳು ಅಡಕ ವಾಗಿವೆ. ಇದರಲ್ಲಿ ಸೂಕ್ಷ್ಮವಾಗಿ ವಿಚಾರ ಮಾಡಿದಷ್ಟು "ತ್ವಮ್" ಪದದ ವಿಚಾರದ ಆಳವು ಮತ್ತೆಲ್ಲಿಯೂ ಮಾಡಿದಂತೆ ಕಂಡು ಬರುವುದಿಲ್ಲ. ಇದು ಗೊಡ್ಡು ವಿಚಾರಗಳ ಗ್ರಂಥವಲ್ಲ. ಇದನ್ನು ಗೌರವಕ್ಕಾಗಿ ಯಾಗಲೀ, ಹಣಕ್ಕಾಗಿ ಯಾಗಲೀ ಬರೆದದ್ದಲ್ಲ, ಜಗತ್ತಿಗೆ ತಮ್ಮ ಜ್ಞಾನಾಧಿಕಾರದ ಪರೀಕ್ಷೆಗಾಗಿ ಕೊಟ್ಟ ಗ್ರಂಥ. ಇದನ್ನು ಆರಾಮ ಕುರ್ಚಿಯ ಮೇಲೆ ಕುಳಿತು ವರ್ತಮಾನ ಪತ್ರಿಕೆಗಳನ್ನು ಓದಿ ತೆಗೆದಾಕುವಂತೆ ಓದಿ ತೆಗೆದಾಕುವ ಗ್ರಂಥ ವಲ್ಲ. ಪದೇಪದೇ ಓದುತ್ತಾ, ತಿಳಿಯುತ್ತಾ ಮತ್ತೊಬ್ಬರಿಂದ ಶ್ರವಣ ಮಾಡುತ್ತಾ ಹೋಗಬೇಕು. ಶಮದಮಾದಿಗಳಿಂದ ಸುಸಂಸ್ಕೃತವಾದ ಮನಸ್ಸಿನಿಂದ ಇದರ ವಿಚಾರ ಎಟುಕುವುದು. ನಿರಂತರ ಪ್ರಯತ್ನದಿಂದ ತನಗಿಂತ ಭಿನ್ನವಾದ ಪಂಚಭೂತಗಳ ಮೇಲೆ ತನ್ನ ಸ್ವಾಮಿತ್ವವನ್ನು ಸ್ಥಾಪಿಸಿ ಚಂದ್ರಲೋಕಕ್ಕೂ ಹೋಗಿಬಂದ ಮಾನವನಿಗೆ ತನ್ನ ವೃತ್ತಿ ಯನ್ನು ಅಂತರ್ಮುಖ ಮಾಡಿಕೊಂಡರೆ ಅಷ್ಟೇಸಾಕು. ತನ್ನ ಉದ್ಧಾರ ವಾಗುತ್ತದೆ. ಆಗ ಇದರಲ್ಲಿರುವ ಸಿದ್ಧಾಂತಗಳು ಆತ್ಮಸಾಕ್ಷಾತ್ಕಾರದೊಡನೆ ತನ್ನವೇ ಆಗುತ್ತವೆ. ಇದು ಕರ್ಮ, ಉಪಾಸನೆ ಪ್ರಸಂಖ್ಯಾನಗಳನ್ನು ಖಂಡಿಸಿದರೂ, ಅವುಗಳನ್ನೆಲ್ಲಾ ಬಿಡು ಎಂಬ ಅರ್ಥದಿಂದಲ್ಲ. ಅಂದರೆ ಇದು ಸಮ ಸಮುಚ್ಚಯವನ್ನು ಒಪ್ಪದೆ ಕ್ರಮಸಮುಚ್ಚಯವನ್ನು ಒಪ್ಪುತ್ತದೆ ಎಂದು ತಿಳಿಯಬೇಕು. ಯಾರೂ ತಾವು ಮಾಡುವ ಕರ್ಮ ಉಪಾಸನೆ

ಗಳನ್ನು—ಧ್ಯಾನ ಜಪತಪಗಳನ್ನು ಬಿಡುವ ಅಗತ್ಯತೆಯಿಲ್ಲ. ಅಂದರೆ ಅವುಗಳನ್ನು ಕೊನೆಯುವರೆಗೂ ಹಿಡಿದುಕೊಳ್ಳಬೇಕೆಂದೂ ಅರ್ಥವಲ್ಲ. ಅಂತಃಕರಣ ಶುದ್ಧಿಗೋಸ್ಕರ ಕರ್ಮ ಉಪಾಸನಾದಿಗಳು ಬೇಕೇ ಬೇಕು. ಅಂತಃ ಶುದ್ಧಿಯಾದ ಮೇಲೆ ಅವುಗಳ ಅಗತ್ಯತೆ ಇರುವುದಿಲ್ಲ. ಆದರೂ ಆತ್ಮಜ್ಞಾನಿಯು ತನಗಾಗಿ ಇವುಗಳನ್ನು ಅನುಸರಿಸದಿದ್ದರೂ—ತನ್ನ ಅನುಯಾಯಿಗಳ ಆದರ್ಶಕ್ಕಾದರೂ ಅನುಸರಿಸಬೇಕು.

ವಾಸ್ತವವಾಗಿ ವಿಚಾರಿಸಿದರೆ ವೇದಾಂತದಷ್ಟು ಸುಗಮವಾದ ವಿಚಾರ ಮತ್ತೊಂದಿಲ್ಲ; ವೇದಾಂತವೆಂದರೆ ತನ್ನ ವಿಚಾರ; ಅನುಭವ ಶಾಸ್ತ್ರ. ತನಗಿಂತಲೂ ಸಮೀಪವಾದ, ತಿಳಿಯಲು ಸುಲಭವಾದ ವಿಚಾರ ಮತ್ತಾವುದಿದೆ! ಎಲ್ಲಾ ಪದಾರ್ಥಗಳ ಮೇಲೆ ಮಾಡುವ ಪ್ರೇಮ ತನಗಾಗಿ, ತನ್ನ ಮೇಲೆ ಮಾಡುವ ಪ್ರೇಮ ಮತ್ತೊಬ್ಬರಿಗಾಗಿ ಅಲ್ಲ. ಇದನ್ನೇ ಬೃಹದಾರಣ್ಯಕ ಶ್ರುತಿಯಲ್ಲಿ "**ಆತ್ಮಾನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ**" ಎಂದೂ ವೇದಾಂತ ಪಂಚದಿಶಿಯಲ್ಲಿ "**ತತ್ಪ್ರೇಮಾತ್ಮಾರ್ಥಮನ್ಯತ್ರ ನೈವಮನ್ಯಾರ್ಥಮಾತ್ಮನಿ**" ಎಂಬುದಾಗಿಯೂ ಹೇಳಿದೆ. ಆದ್ದರಿಂದ ತನ್ನ ವಿಚಾರದಷ್ಟು ಸುಲಭವಾದ ವಿಚಾರ ಮತ್ತಾವುದೂ ಇಲ್ಲ. ಆದ್ದರಿಂದ ತನ್ನ ವಿಚಾರವು ಎಲ್ಲದಕ್ಕಿಂತಲೂ ಬಹಳ ಅಗತ್ಯ. "**ಬ್ರಹ್ಮಸಾಕ್ಷಾತ್ಕೃತಿಸ್ತ್ವೇವಂ ವಿಚಾರೇಣ ವಿನಾನ್ಯಥಾ**" ಬ್ರಹ್ಮ ಸಾಕ್ಷಾತ್ಕಾರವು ತನ್ನ ವಿಚಾರದಿಂದಲೇ ಉಂಟಾಗುತ್ತದೆಯೇ ವಿನಃ ಮತ್ತಾವುದರಿಂದಲೂ ಆಗುವುದೇ ಇಲ್ಲವೆಂದು ವಿದ್ಯಾರಣ್ಯರು ಪಂಚದಶಿಯ ಧ್ಯಾನದೀಪದಲ್ಲಿ ಹೇಳಿದ್ದಾರೆ. ಇಷ್ಟೆಲ್ಲಾ ಇದ್ದರೂ ಬಹಿರ್ದೃಷ್ಟಿಯುವರಿಗೆ ಈ ತನ್ನ ವಿಚಾರವು ಅಷ್ಟೊಂದು ಕಷ್ಟವಾಗಿ ಕಂಡರೆ ಅದು ವೇದಾಂತದ ತಪ್ಪಲ್ಲ. ಅವರವರ ಮನಸ್ಸಿನ ಸಂಸ್ಕಾರದ ದೋಷವೇ ಆಗಿರುತ್ತದೆ.

೪

ಈ ಗ್ರಂಥಕ್ಕೆ "ನೈಷ್ಕರ್ಮ್ಯಸಿದ್ಧಿ" ಎಂದು ಹೆಸರಿಡಲು ಕಾರಣವೇನೆಂದು ಸ್ವಲ್ಪ ವಿಚಾರ ಮಾಡೋಣ. "ನೈಷ್ಕರ್ಮ್ಯ" ಎಂಬ ಪದವು ಭಗವದ್ಗೀತೆಯ ಮೂರನೇ ಅಧ್ಯಾಯದ ನಾಲ್ಕನೆಯ ಶ್ಲೋಕದಲ್ಲಿಯೂ,

ಹದಿನೆಂಟನೇ ಅಧ್ಯಾಯದ ನಲವತ್ತೊಂಬತ್ತನೇ ಶ್ಲೋಕದಲ್ಲಿಯೂ ಬಂದಿದೆ. ಶ್ರೀ ಶಂಕರಾಚಾರ್ಯರು ಮೂರನೇ ಅಧ್ಯಾಯದಲ್ಲಿ ಬಂದ "ನೈಷ್ಕರ್ಮ್ಯಂ" ಎಂಬ ಶಬ್ದಕ್ಕೆ ಹೀಗೆ ಭಾಷ್ಯ ಬರೆದಿದ್ದಾರೆ. **"ನೈಷ್ಕರ್ಮ್ಯಂ ನಿಷ್ಕರ್ಮಭಾವಂ, ಕರ್ಮಶೂನ್ಯತಾಂ, ಜ್ಞಾನ ಯೋಗೇನ ನಿಷ್ಠಾಂ ನಿಷ್ಕ್ರಿಯಾತ್ಮ ಸ್ವರೂಪೇಣೈವ ಅವಸ್ಥಾನಮಿತಿ"** ನೈಷ್ಕರ್ಮ್ಯವೆಂದರೆ ನಿಷ್ಕರ್ಮತ್ವ ಭಾವವು ; ಕರ್ಮಗಳಿಲ್ಲದೆ ಇರುವಿಕೆಯು ; ಜ್ಞಾನಯೋಗದ ನಿಷ್ಠೆಯು, ಯಾವ ಕ್ರಿಯೆಯೂ ಇಲ್ಲದ ನಿಷ್ಕ್ರಿಯನಾದ ಆತ್ಮ ಸ್ವರೂಪದಲ್ಲಿಯೇ ನೆಲೆ ನಿಲ್ಲುವ ಅವಸ್ಥೆಯೇ ನೈಷ್ಕರ್ಮ್ಯವು. ಹೀಗೆ ಆತ್ಮಸ್ವರೂಪದಲ್ಲಿಯೇ ನೆಲೆನಿಂತ ಜ್ಞಾನ ನಿಷ್ಠನಿಗೆ ಮಾಡಬೇಕಾದ ಯಾವ ಕರ್ಮವೂ, ಪಡೆಯಬೇಕಾದ ಯಾವ ಫಲವೂ ಇರುವುದೇ ಇಲ್ಲ. ಇವನೇ ಕೃತಕೃತ್ಯನು ; ನೈಷ್ಕರ್ಮ್ಯನು. ಭಗವಂತನು ಇವನನ್ನು ಮೂರನೇ ಅಧ್ಯಾಯದ ಹದಿನೇಳನೇ ಶ್ಲೋಕದಲ್ಲಿ ಹೀಗೆ ಹೊಗಳಿದ್ದಾನೆ. **"ಯಸ್ತ್ವಾತ್ಮರತಿರೇವಸ್ಯಾದಾತ್ಮ ತೃಪ್ತಶ್ಚ ಮಾನವಃ। ಆತ್ಮನ್ಯೇವಚ ಸಂತುಷ್ಟಸ್ತಸ್ಯಕಾರ್ಯಂ ನ ವಿದ್ಯತೇ"** ಯಾವ ನಿಷ್ಕ್ರಿಯನಾದ ಆತ್ಮ ಸ್ವರೂಪದಲ್ಲಿಯೇ ನೆಲೆ ನಿಂತ ಆತ್ಮಜ್ಞಾನ ನಿಷ್ಠನಿಗೆ ಆತ್ಮನಲ್ಲಿಯೇ ರತಿಯೇವಿನಃ ವಿಷಯಗಳಲ್ಲಿ ರತಿ ಇರುವುದಿಲ್ಲವೋ, ಯಾವನು ಆತ್ಮನಲ್ಲಿಯೇ ತೃಪ್ತನಾಗಿರುವನೇ ವಿನಃ ವಿಷಯಗಳಲ್ಲಿ ತೃಪ್ತನಾಗಿರುವುದಿಲ್ಲವೋ, ಯಾವನು ಆತ್ಮನಲ್ಲಿಯೇ ಸಂತುಷ್ಟನಾಗಿರುವನೇ ವಿನಃ ವಿಷಯ ಲಾಭದಿಂದ ಸಂತುಷ್ಟನಾಗಿರುವುದಿಲ್ಲವೋ, ಅಂತಹ ಆತ್ಮಜ್ಞಾನಿಗೆ ಮಾಡಬೇಕಾದ ಯಾವ ಕ್ರಿಯೆಗಳೂ, ಕಾರ್ಯವೂ ಇರುವುದಿಲ್ಲ. ಪ್ರತಿಯೊಂದು ಪ್ರಾಣಿ ಕೋಟಿಯ ಕ್ರಿಯಾಕಲಾಪಗಳು ವಿಷಯ ಪ್ರಾಪ್ತಿಗಾಗಿಯೆ. ಆದರೆ ಆತ್ಮ ಜ್ಞಾನಿಯು ಮಾತ್ರ ನೈಷ್ಕರ್ಮ್ಯನು. ಹೀಗೆ 'ನೈಷ್ಕರ್ಮ್ಯ' ಎಂಬ ಪದವು ಆತ್ಮಜ್ಞಾನಿಯನ್ನೇ ಸೂಚಿಸುತ್ತದೆ.

ಇನ್ನು ಭಗವದ್ಗೀತೆಯ ಹದಿನೆಂಟನೇ ಅಧ್ಯಾಯದ ೪೯ನೇ ಶ್ಲೋಕ ದಲ್ಲಿ ಬಂದಿರುವ "ನೈಷ್ಕರ್ಮ್ಯಸಿದ್ಧಿ" ಎಂಬ ಪದಕ್ಕೆ ಶ್ರೀ ಶಂಕರಾಚಾರ್ಯರು ಹೀಗೆ ಭಾಷ್ಯ ಬರೆದಿದ್ದಾರೆ **"ನಿರ್ಗತಾನಿ ಕರ್ಮಾಣಿ ಯಸ್ಮಾತ್ ನಿಷ್ಕ್ರಿಯ ಬ್ರಹ್ಮಾತ್ಮ ಸಂಬೋಧಾತ್ ಸ ನಿಷ್ಕರ್ಮಾ।**

ತಸ್ಯ ಭಾವಃ ನೈಷ್ಕರ್ಮ್ಯಂ ನಮ್। ನೈಷ್ಕರ್ಮ್ಯಂ ಚ ತತ್‌ಸಿದ್ಧಿಶ್ಚ ಸಾ ನೈಷ್ಕರ್ಮ್ಯಸಿದ್ಧಿಃ। ನೈಷ್ಕರ್ಮ್ಯಸ್ಯ ವಾ ನಿಷ್ಕ್ರಿಯಾತ್ಮರೂಪಾವಸ್ಥಾನ ಲಕ್ಷಣಸ್ಯಸಿದ್ಧಿಃ ನಿಷ್ಪತ್ತಿಃ। ತಾಂನೈಷ್ಕರ್ಮ್ಯ ಸಿದ್ಧಿಂ ಪರಮಾಂ ಪ್ರಕೃಷ್ಟಾಂ ಕರ್ಮಜಸಿದ್ಧಿ ವಿಲಕ್ಷಣಾಂ ಸದ್ಯೋ ಮುಕ್ತ್ಯವಸ್ಥಾನ ರೂಪಮ್ । " ಕರ್ಮಗಳೆಲ್ಲಾ ಯಾವನನ್ನು ಬಿಟ್ಟು ತೊಲಗಿರುವವೋ, ಯಾವನು ನಿಷ್ಕ್ರಿಯವಾದ ಬ್ರಹ್ಮವೇ ತಾನೆಂಬ ದೃಢವಾದ ಜ್ಞಾನ ಹೊಂದಿರುವನೋ ಅವನೇ ನಿಷ್ಕರ್ಮನು ; ಅವನ ಭಾವವೇ ನೈಷ್ಕರ್ಮ್ಯವು; ಆ ನೈಷ್ಕರ್ಮರೂಪ ಸಿದ್ಧಿಯೇ ನೈಷ್ಕರ್ಮ್ಯಸಿದ್ಧಿಯು ; ಅಥವಾ ತನ್ನ ಸ್ವರೂಪವೇ ಆದ ನಿಷ್ಕ್ರಿಯಾತ್ಮ ಬ್ರಹ್ಮದಲ್ಲಿ ನೆಲೆ ನಿಲ್ಲುವುದೇ ನೈಷ್ಕರ್ಮ್ಯವು. ಅದರ ನಿಷ್ಪತ್ತಿಯೇ, (ಪ್ರಾಪ್ತಿಯೇ) ನೈಷ್ಕರ್ಮ್ಯಸಿದ್ಧಿಯು ಕರ್ಮಜಸಿದ್ಧಿಗಿಂತಲೂ ಬೇರೆತೆರನಾದ, ಪರಮವಾದ, ಸದ್ಯೋಮುಕ್ತಿಯ ಅವಸ್ಥೆಯೇ ನೈಷ್ಕರ್ಮ್ಯಸಿದ್ಧಿಯು.

ಈ ರೀತಿ ನೈಷ್ಕರ್ಮ್ಯಸಿದ್ಧಿ ಎಂದರೆ ಜ್ಞಾನ ಅಥವಾ ಸದ್ಯೋಮುಕ್ತಿ ಅವಸ್ಥೆ ಎಂದು ಅರ್ಥವಾಗುತ್ತದೆ. ಈ ಗ್ರಂಥದಲ್ಲಾದರೋ ಮೋಕ್ಷವೇ ಸಿದ್ಧಮಾಡಲ್ಪಟ್ಟಿರುವುದರಿಂದ ಈ ಗ್ರಂಥಕ್ಕೆ ನೈಷ್ಕರ್ಮ್ಯಸಿದ್ಧಿ ಎಂಬ ಹೆಸರು ಸಾರ್ಥಕವಾಗಿದೆ. ನೈಷ್ಕರ್ಮ್ಯದಿಂದಲೇ ಮೋಕ್ಷನೆಂಬುದು ಈ ಗ್ರಂಥದಲ್ಲಿ ತೋರಿಸಲಾಗಿದೆ. ಬ್ರಹ್ಮಾತ್ಮರ ಏಕತ್ವ ಜ್ಞಾನದಿಂದ, ಎಲ್ಲಾ ಕರ್ಮಗಳ ಬಂಧನದಿಂದ ದಾಟಿದವನಸ್ಥಿತಿಯೇ ನೈಷ್ಕರ್ಮ್ಯವು, ಇದೇ ಮೋಕ್ಷವೆಂದು ವೇದಾಂತಿಗಳ ಅಭಿಪ್ರಾಯ.

ಕರ್ಮದಿಂದಾಗಲೀ, ಉಪಾಸನೆಯಿಂದಾಗಲೀ, ತಪಸ್ಸಿನಿಂದಾಗಲೀ, ಧ್ಯಾನ ಅಂದರೆ ಪ್ರಸಂಖ್ಯಾನದಿಂದಾಗಲೀ ಮೋಕ್ಷವಾಗುವುದಿಲ್ಲ. ನೈಷ್ಕರ್ಮ್ಯದಿಂದಲೇ ಮೋಕ್ಷವೆಂದು ಶ್ರೀ ಸುರೇಶ್ವರಾಚಾರ್ಯರು ಸಿದ್ಧಮಾಡಿದ್ದಾರೆ. ಅವರು ಹಾಗೆ ಸಿದ್ಧಮಾಡುವಾಗ ಮೀಮಾಂಸಕರನ್ನೂ, ಸಮುಚ್ಚಯವಾದಿಗಳನ್ನೂ, ಪ್ರಸಂಖ್ಯಾನರನ್ನೂ, ನ್ಯಾಯ ವೈಶೇಷಿಕ ಸಾಂಖ್ಯರನ್ನೂ ಖಂಡಿಸಿ ಜ್ಞಾನದಿಂದಲೇ ಮೋಕ್ಷವೆಂದು ಸಿದ್ಧಮಾಡಿದ್ದಾರೆ.

ನೈಷ್ಕರ್ಮ್ಯಸಿದ್ಧಿಯಲ್ಲಿ ನಾಲ್ಕು ಅಧ್ಯಾಯಗಳಿವೆ. ಬ್ರಹ್ಮಸೂತ್ರವೂ ನಾಲ್ಕು ಅಧ್ಯಾಯಗಳನ್ನೊಳಗೊಂಡಿದೆ. ೧) ಸಮನ್ವಯಾಧ್ಯಾಯ

೨) ಅವಿರೋಧಾಧ್ಯಾಯ ೩) ಸಾಧನಾಧ್ಯಾಯ ೪) ಫಲಾಧ್ಯಾಯ. ನೈಷ್ಕರ್ಮ್ಯಸಿದ್ಧಿಯಲ್ಲಿರುವ ನಾಲ್ಕು ಅಧ್ಯಾಯಗಳಿಗೂ ಇವೇ ಹೆಸರು ಕೊಡಬಹುದೆಂದು ಕೆಲವರ ಅಭಿಮತವಿದೆ.

೫

ಒಂದನೇ ಅಧ್ಯಾಯದಲ್ಲಿ ಶಿಷ್ಟಾಚಾರ ಸಂಪ್ರದಾಯ ಪ್ರಕಾರ ನಿರ್ಗುಣಪರಬ್ರಹ್ಮವಸ್ತುನಿರ್ದೇಶರೂಪ ಮಂಗಳಾಚರಣೆಯನ್ನು ಮಾಡಿದರೂ ತಮ್ಮ ಗುರುಗಳನ್ನು ಭಕ್ತಿಯಿಂದ ಬಾಯ್ತುಂಬ ಹೊಗಳುವುದನ್ನು ಬಿಟ್ಟಿಲ್ಲ. ನಂತರ ಮೀಮಾಂಸಕರನ್ನು, ಅವರ ಮತವನ್ನು ಎತ್ತಿಕೊಂಡಿದ್ದಾರೆ. ವೇದವೆಲ್ಲಾ ಕರ್ಮಪರವೇ ಆಗಿದೆ. ಈಶಾವಾಶ್ಯೋಪನಿಷತ್ತೂ ಸಹ ಕರ್ಮವನ್ನೇ ಮಾಡು ಎಂದು ಎರಡನೇ ಮಂತ್ರದಲ್ಲಿ ಹೇಳಿದೆ. ಆದ್ದರಿಂದ ಕರ್ಮದಿಂದಲೇ ಮೋಕ್ಷವೆಂಬುವ ಅವರ ಮತವನ್ನೂ, ಕರ್ಮ ಮತ್ತು ಜ್ಞಾನ ಎರಡರಿಂದಲೂ ಮೋಕ್ಷವಾಗುತ್ತದೆಂಬ ಸಮುಚ್ಚಯ ವಾದಿಗಳನ್ನು ಖಂಡನೆ ಮಾಡಿದ್ದಾರೆ ಕರ್ಮವು ಮೋಕ್ಷಕ್ಕೆ ಸಾಕ್ಷಾತ್ಸಾಧನವೇ ಅಲ್ಲ–ಕರ್ಮವು ಅಜ್ಞಾನದ ಕಾರ್ಯ; ಕಾರ್ಯವಾದ ಕರ್ಮವು ತನ್ನ ಕಾರಣವಾದ ಅಜ್ಞಾನವನ್ನು ನಾಶಮಾಡಲಾರದು. ಆದುದರಿಂದ ಜ್ಞಾನವೇ ಮೋಕ್ಷಕ್ಕೆ ಸಾಕ್ಷಾತ್ಸಾಧನ; ಕರ್ಮ, ಉಪಾಸನೆ, ಪ್ರಸಂಖ್ಯಾನಗಳು ಪರಂಪರಾ ಸಾಧನಗಳು ಎಂದು ಹೇಳಿ ಮೀಮಾಂಸಕರಮತವನ್ನೂ ಸಮುಚ್ಚಯ ವಾದಿಗಳನ್ನೂ ಖಂಡಿಸಿದ್ದಾರೆ. ಆದರೂ ಕರ್ಮಾದಿಗಳನ್ನು ಉಪೇಕ್ಷೆ ಮಾಡಿಲ್ಲ. ಅವುಗಳನ್ನು ಅಂತಃಕರಣ ಶುದ್ಧಿಗಾಗಿ ಮಾತ್ರ ಬಳಸಬಹುದು. ಭಗವದ್ಗೀತೆಯಲ್ಲಿ ಭಗವಂತನು "**ಯಜ್ಞದಾನ ತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವತತ್ । ಯಜ್ಞೋದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್**" ॥ ೧೮ ॥ ೫ ॥ ಯಜ್ಞದಾನ ತಪೋರೂಪ ಕರ್ಮಗಳನ್ನು ಬಿಡಕೂಡದು–ಅವುಗಳನ್ನು ಮಾಡಲೇಬೇಕು. ಅವು ಆತ್ಮ ಸಾಕ್ಷಾತ್ಕಾರಕ್ಕಾಗಿ ಹೊರಟಿರುವ ಮುನಿಗಳ ಅಂತಃಕರಣ ಶುದ್ಧಿದ್ವಾರ ಪವಿತ್ರಗೊಳಿಸುವುವು ಎಂದು ಹೇಳಿದ್ದಾನೆ. ಅಂತಃಕರಣ ಶುದ್ಧಿಯಾಗದೆ ಈ ಕರ್ಮಗಳನ್ನು ಬಿಡಕೂಡದು. ಸದ್ಗುರುಗಳ ಮುಖದಿಂದ ಮಹಾವಾಕ್ಯ ಶ್ರವಣ ಮಾಡುವ ಅವಕಾಶ ದೊರೆಯುವವರೆಗೆ ಅವುಗಳನ್ನು ಬಿಡಕೂಡದು.

ಹಾಗೆ ಅಂತಃಕರಣ ಪವಿತ್ರವಾಗದೆ ಆ ಕರ್ಮಗಳನ್ನು ಬಿಟ್ಟರೆ ಅವನಿಗೆ ಬ್ರಹ್ಮ ಸಾಕ್ಷಾತ್ಕಾರವಾಗಲಾರದು. ಅಂತಃಕರಣ ಪವಿತ್ರವಾದ ಮೇಲೂ ಅವುಗಳನ್ನು ಇಟ್ಟುಕೊಂಡರೆ ಅವನು ಅಲ್ಲಿಯೇ ಇರುತ್ತಾನೆ. ಪ್ರೌಢಶಾಲೆ ಯಲ್ಲಿ ಉತ್ತೀರ್ಣನಾದವನು ಕಾಲೇಜಿಗೆ ಹೋಗದೆ ಹೋದಲ್ಲಿ ಹೇಗೆ ಅಲ್ಲಿಯೇ ಹೇಗೆ ಇರುತ್ತಾನೋ ಹಾಗೆಯೇ ಅಂತಃಕರಣ ಶುದ್ಧಿಯಾದ ಮೇಲೂ ಕರ್ಮಾದಿಗಳನ್ನು ಹಿಡಿದು ಜ್ಞಾನಕ್ಕೆ ಪ್ರಯತ್ನ ಪಡದಿದ್ದರೆ ಅವನೂ ಅಲ್ಲಿಯೇ ಇರುತ್ತಾನೆ. ಇದು ಜ್ಞಾನಕ್ಕೆ ಪೂರ್ವ ಸ್ಥಿತಿಯುಳ್ಳವರ ವಿಷಯ.

ಇನ್ನು ಜ್ಞಾನಿಗಳು ಕರ್ಮಾದಿಗಳನ್ನು ಮಾಡಬೇಕೇ ಬಿಡಬೇಕೆ? ಇದೊಂದು ಜಿಜ್ಞಾಸೆ. ಕೃತಕೃತ್ಯನಾದ ಜ್ಞಾನಿಗೆ ಏನನ್ನಾದರೂ ಮಾಡಿ ಮತ್ತೇನನ್ನಾದರೂ ಪಡೆಯುವ ಅಗತ್ಯತೆ ಇರುವುದಿಲ್ಲ. ಮತ್ತೇನನ್ನಾದರೂ ಭೋಗಿಸಿ ತೃಪ್ತಿಪಡೆಯುವ ಅವಶ್ಯಕತೆಯೇ ಇಲ್ಲ. ಅವನು ನೈಷ್ಕರ್ಮ್ಯನು ಅವನು ಆತ್ಮಾರಾಮ, ಆತ್ಮತೃಪ್ತನು, ಆತ್ಮ ಸಂತೋಷಿಯು ಅವನಿಗೆ ಮತ್ತಾವ ಕರ್ತವ್ಯ ಕರ್ಮಗಳು ಇಲ್ಲದೇ ಹೋದರೂ **"ಲೋಕ ಸಂಗ್ರಹ ಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ"** ಲೋಕ ಕ್ಷೇಮವನ್ನು ನೋಡಿಯಾದರೂ ನೀನು ಕರ್ಮವನ್ನು ಮಾಡಬೇಕೆಂಬ ಭಗವದಾಜ್ಞೆ ಯಂತೆ ಕರ್ಮಾದಿಗಳನ್ನು ಮಾಡುತ್ತಿರಬೇಕು. ಏಕೆಂದರೆ ದೊಡ್ಡವರು ಹೋದ ದಾರಿಯಲ್ಲಿಯೇ ಇತರರೂ ಅನುಸರಿಸುತ್ತಾರೆ. ಈ ದೃಷ್ಟಿಯಿಂದ ಜ್ಞಾನ ನಂತರವೂ ಕರ್ಮಾದಿಗಳನ್ನು ಮತ್ತೊಬ್ಬರ ಮಾರ್ಗದರ್ಶನಕ್ಕಾಗಿ ಮಾಡಬೇಕು. ಕರ್ಮಾದಿಗಳನ್ನು ಖಂಡಿಸಿರುವುದು, ಅವುಗಳಿಂದ ಮೋಕ್ಷ ವಾಗುವುದಿಲ್ಲ; ಜ್ಞಾನದಿಂದಲೇ ಮೋಕ್ಷವೆಂಬ ಶ್ರುತಿ ಅಭಿಪ್ರಾಯವನ್ನು ಸ್ಥಿರಗೊಳಿಸಲು ಮಾತ್ರ.

ಇನ್ನು ಎರಡನೇ ಅಧ್ಯಾಯದಲ್ಲಿ ಮಹಾ ವಾಕ್ಯದಿಂದಲೇ ಆತ್ಮ ಸಾಕ್ಷಾತ್ಕಾರವೆಂಬುದನ್ನು ಸ್ಥಿರಪಡಿಸಿದ್ದಾರೆ. "ತತ್ತ್ವಮಸಿ" ಮಹಾ ವಾಕ್ಯವು ಶ್ರೋತೃವಿನ ಶ್ರೋತ್ರಕ್ಕೆ ಸಂಬಂಧಪಟ್ಟ ಕೂಡಲೇ ಬ್ರಹ್ಮ ಸಾಕ್ಷಾ ತ್ಕಾರವಾಗಲೇಬೇಕು. ಆದರೆ ಲೋಕದಲ್ಲಿ ಅನೇಕ ಜನರು ಅನೇಕಸಾರಿ ತತ್ತ್ವಮಸಿ ಮಹಾ ವಾಕ್ಯವನ್ನು ಕೇಳಿದರೂ ಆತ್ಮಸಾಕ್ಷಾತ್ಕಾರವಾಗಿರು

ವುದಿಲ್ಲವಲ್ಲ ? ಎಂಬುದನ್ನು ಪ್ರಶ್ನಿಸಿದ್ದಾರೆ. ಪದ-ಪದಾರ್ಥಗಳ ಅರ್ಥವು ಸರಿಯಾಗಿ ಆಗದೆ ಆ ಮಹಾವಾಕ್ಯದಿಂದ ಯಾರಿಗೂ ಪ್ರಯೋಜನವಾಗುವುದಿಲ್ಲ. ಒಬ್ಬ ಮನುಷ್ಯ ಮತ್ತೊಬ್ಬನಿಗೆ ಡ್ಯಾಮ್ " ಎಂದ. ಡ್ಯಾಂ ಎನ್ನುವ ಪದ ಇಂಗ್ಲಿಷ್ ಪದ. ಕೇಳಿದವನಿಗೆ ಯಾವ ವ್ಯತ್ಯಾಸವೂ ಆಗಲಿಲ್ಲ. ಕಾರಣ ಅವನಿಗೆ ಇಂಗ್ಲೀಷ್ ಬರುತ್ತಿರಲಿಲ್ಲ. ಇನ್ನೊಂದು ಸಾರಿ ನೀನು ಮೂರ್ಖ " ಎಂದ. ಕೂಡಲೇ ಅವನ ಕಣ್ಣು ಕೆಂಪಗಾದವು, ಸಿಟ್ಟುಬಂತು ಅವನ ಮೇಲೆ ಏರಿಹೋದನು. ಹೀಗೆ ಯಾವ ವಾಕ್ಯವೇ ಆಗಲಿ ಆ ವಾಕ್ಯದಲ್ಲಿರುವ ಪದಗಳ ಅರ್ಥ ತಿಳಿಯದೆ ಹೋದರೆ ಆ ವಾಕ್ಯವು ಅವನ ಅಂತಃಕರಣ ವೃತ್ತಿಯನ್ನು ಯಾವ ರೀತಿಯಲ್ಲಿಯೂ ಪರಿಣಾಮ ಮಾಡಲಾರದು. " Wife Expired " ಎಂಬುವ ಟೆಲಿಗ್ರಾಂ ಇಂಗ್ಲೀಷ್ ಬಲ್ಲವನನ್ನು ಮಾತ್ರ ದುಃಖಕ್ಕೆ ಗುರಿ ಮಾಡುತ್ತದೇ ವಿನಃ ಆ ಭಾಷೆತಿಳಿಯದವನನ್ನು ಏನೂ ಮಾಡಲಾರದು. " ನಿನ್ನ ಹೆಂಡತಿ ಸತ್ತಳು " ಎಂದಾಗ ಮಾತ್ರ ಇವನು ವಿಕಾರ ಹೊಂದುತ್ತಾನೆ. ಅದೇ ರೀತಿ " ತತ್ತ್ವಮಸಿ " ಮಹಾ ವಾಕ್ಯದಲ್ಲಿರುವ ' ತ್ವಂ ' ಪದದ ಅರ್ಥ ಯಾರಿಗೆ ತಿಳಿದಿಲ್ಲವೋ ಆ ' ತ್ವಂ ' ಪದಕ್ಕೆ ಕೂಟಸ್ಥ ಚೇತನ ಎಂದು ಯಾರಿಗೆ ಅರ್ಥವಾಗಿಲ್ಲವೋ, ಈ ದೇಹಾದಿಗಳು ' ತ್ವಂ ' ಅಲ್ಲ ಅವು ಜಡ-ದೃಶ್ಯಸ್ಥ ಪದಾರ್ಥಗಳು ಇವುಗಳಿಗಿಂತ ಬೇರೆಯಾದ ಚೇತನವೇ ' ನೀನು ' ಎಂಬುದು ಯಾರಿಗೆ ತಿಳಿದಿಲ್ಲವೋ, ಅವರು ನೂರಾರು ಸಾರಿ " ತತ್ತ್ವಮಸಿ " ವಾಕ್ಯ ಕೇಳಿದರೂ ಆ ವಾಕ್ಯದಿಂದ ಅವರಿಗೆ ಯಾವ ಪ್ರಯೋಜನವೂ ಆಗಲಾರದು. ಈ ಕಾರಣದಿಂದ ದೇಹಾದಿಗಳು ನೀನಲ್ಲ, ಇಂದ್ರಿಯಾದಿಗಳು ನೀನಲ್ಲ, ಅಂತಃಕರಣ ನೀನಲ್ಲ ಎಂದು ಶೋಧಿಸಿದ ನಂತರ " ನಾನಾರು " ಎಂಬ ಪ್ರಶ್ನೆ ಜಿಜ್ಞಾಸುವಿನಲ್ಲಿ ಹುಟ್ಟಿದಾಗ " ತತ್ತ್ವಮಸಿ " ಎಂದ ಕೂಡಲೇ ಆತ್ಮ ಸಾಕ್ಷಾತ್ಕಾರವಾಗುತ್ತದೆ.

ಮಹಾವಾಕ್ಯವಿಲ್ಲದೆ ಯಾರಿಗೂ ಬ್ರಹ್ಮ ಸಾಕ್ಷಾತ್ಕಾರವಾಗಿಯೇ ಇಲ್ಲ. ಎನ್ನುವುದನ್ನು ಉಪನಿಷತ್ಪ್ರಮಾಣದಿಂದ ಸ್ಪಷ್ಟಪಡಿಸಿದ್ದಾರೆ. ಮಹಾ ವಾಕ್ಯದಲ್ಲಿರುವ ' ತ್ವಂ ' ಮತ್ತು ' ತತ್ ' ಪದಗಳಿಗೆ ಮುಖ್ಯ ಸಾಮಾನಾಧಿಕರಣ್ಯದಿಂದ ಕೂಟಸ್ಥ ಚೇತನವನ್ನು ಪರಬ್ರಹ್ಮವನ್ನು ತೋರಿಸಿ ಎರಡೂ

ಎರಡಲ್ಲ "ಅವನೇ ಇವನು" ಎಂಬಂತೆ ಪ್ರತ್ಯಗಾತ್ಮನೇ ಪರಬ್ರಹ್ಮ, ಪರಬ್ರಹ್ಮವೇ ಪ್ರತ್ಯಗಾತ್ಮ—"ಘಟಾಕಾಶವೇ ಮಹಾಕಾಶ–ಮಹಾಕಾಶವೇ ಘಟಾಕಾಶ, ಆಕಾಶದಲ್ಲಿ ಯಾವ ಭೇದವೂ ಇಲ್ಲವೆಂದು ತೋರಿಸಿ ಪ್ರತ್ಯಗಾತ್ಮನೇ ಪರಬ್ರಹ್ಮವೆಂದು ಸಿದ್ಧಮಾಡಿದ್ದಾರೆ.

ಬಹಳ ಸೂಕ್ಷ್ಮ ರೀತಿಯಿಂದ ಅಹಂಕಾರವನ್ನು ಆತ್ಮನಿಂದ ಬಿಡಿಸಿ ಅಹಂಕಾರವನ್ನು ದೃಶ್ಯ ಸ್ಥಾನದಲ್ಲಿಟ್ಟು ಪ್ರಮಾತೃವನ್ನು ಸ್ಪಷ್ಟಪಡಿಸಿದ್ದಾರೆ. ಪ್ರಮಾತೃ, ಪ್ರಮಾಣ, ಪ್ರಮೇಯಗಳಿಂದ ಆತ್ಮನನ್ನು ಬಿಡಿಸಿ ತೋರಿಸಿದ್ದಾರೆ. ಆತ್ಮಾನಾತ್ಮಗಳ ಅನ್ಯೋನ್ಯಾಧ್ಯಾಸವು ಅವಿದ್ಯೆಯಿಂದ ಆಗಿದೆ. ಆ ಅವಿದ್ಯೆಯು ಆತ್ಮಜ್ಞಾನದಿಂದ ನಿವೃತ್ತಿಯಾಗುತ್ತದೆ ಎಂದು ತಿಳಿಸಿದ್ದಾರೆ. ಆತ್ಮಸಾಕ್ಷಾತ್ಕಾರಕ್ಕೆ ವೇದಾಂತವೇ ಪ್ರಮಾಣವು-ಆ ವೇದಾಂತ ಪ್ರಮಾಣದಿಂದ ಆತ್ಮನು ದೊರೆಯುತ್ತಾನೆಂದರೆ ಆತ್ಮನು ಪ್ರಮೇಯನಲ್ಲ, ಸ್ವತಃ ಸಿದ್ಧನು–ಸ್ವಯಂ ಪ್ರಕಾಶನು ಆದುದರಿಂದ "ವೇದಾಂತ ಪ್ರಮಾಣದಿಂದ ಆತ್ಮನ ಬಗ್ಗೆ ಹೊಸ ಜ್ಞಾನವಾಗದೆ ಮೊದಲಿನಿಂದಲೂ ಆತ್ಮನ ವಿಷಯದಲ್ಲಿದ್ದ ಅಜ್ಞಾನವು ಮಾತ್ರ ನಾಶವಾಗುತ್ತದೆ" ಎಂದು ಪ್ರತಿಪಾದಿಸಿದ್ದಾರೆ. ಇನ್ನು ಈ ಮಿಥ್ಯವಾದ ದ್ವೈತ ಪ್ರಪಂಚವು ಸಾಕ್ಷಾತ್ತಾಗಿರುವಂತೆ ಕಾಣಲು ಕಾರಣವೇನು? ಹಗ್ಗದಲ್ಲಿ ಭ್ರಾಂತಿಯಿಂದ ತೋರಿದ ಸರ್ಪವು ಹಗ್ಗದ ಜ್ಞಾನವಾದ ಕೂಡಲೇ ಸರ್ಪ, ಮತ್ತು ಸರ್ಪಜ್ಞಾನ ಎರಡೂ ಇಲ್ಲದಂತಾಗುತ್ತವೆ. ಹಾಗೆಯೇ ಬ್ರಹ್ಮದಲ್ಲಿ ಭ್ರಾಂತಿಯಿಂದ ತೋರಿದ ಈ ಜಗತ್ತು ಬ್ರಹ್ಮಜ್ಞಾನದಿಂದ ನಾಶವಾಗಬೇಕಾಗಿತ್ತು. ಬ್ರಹ್ಮಜ್ಞಾನದ ತರುವಾಯವೂ ಜಗತ್ತು ಮರುಮರೀಚಿಕೆಯ ಜಲದಂತೆ ಕಾಣುತ್ತಿರುತ್ತದೆ. ಇದಕ್ಕೆ ಕಾರಣವನ್ನು ಕೊಟ್ಟು ಆ ಪ್ರಶ್ನೆಯನ್ನು ಅಲ್ಲಗಳೆದಿದ್ದಾರೆ.

ಆತ್ಮಜ್ಞಾನವು ಸತ್ಯವಾದುದು, ಏಕೆಂದರೆ ಅದು ಸತ್ಯ ವಸ್ತುವನ್ನು ಸಾಕ್ಷಾತ್ಕರಿಸಿಕೊಡುತ್ತದೆ. ಆ ಕಾರಣದಿಂದ ಆತ್ಮ ಜ್ಞಾನವನ್ನು ತಿಳಿಸಿ ಕೊಡುವ ವೇದವೂ ಸತ್ಯವಾಯಿತು. ಆ ವೇದವನ್ನು ಬೋಧಿಸುವ ಗುರುವೂ, ಅದನ್ನು ಶ್ರವಣ ಮಾಡಿ ಆತ್ಮ ಸಾಕ್ಷಾತ್ಕಾರ ಪಡೆಯುವ ಶಿಷ್ಯನೂ, ಎಲ್ಲವೂ ಸತ್ಯವಾದವು. ಈ ರೀತಿ ದ್ವೈತವೇ ಸಿದ್ಧಾಂತ ವಾಯಿತು ಎಂಬ ವಿಷಯವನ್ನು ಅಲ್ಲಗಳೆಯುತ್ತಾ ವೇದ–ಗುರು–ಬೋಧೆ– ಎಲ್ಲಾ ಮಿಥ್ಯವೇ ಮಿಥ್ಯವಾದ ಜ್ಞಾನದಿಂದ ಸತ್ಯ ವಸ್ತುವಿನ ಜ್ಞಾನವಾಗ ಬಹುದು ಎಂದು ಕನಸಿನ ಉದಾಹರಣೆ ಕೊಟ್ಟು ಸ್ಪಷ್ಟಪಡಿಸಿದ್ದಾರೆ.

ಈ ಎರಡು ಅಧ್ಯಾಯಗಳನ್ನೊಳಗೊಂಡ ಈ ಪ್ರಶ್ನೋತ್ತರಿ ನೈಷ್ಕರ್ಮ್ಯಸಿದ್ಧಿಯು ಶ್ರೀ ಗುರುದೇವರ ಕೃಪಾಶೀರ್ವಾದದಿಂದಲೂ ಶ್ರೀ ಶಂಕರಾನಂದ ಟ್ರಸ್ಟ್ (ರಿ.) ಇವರ ಉದಾರಾಶ್ರಯದಿಂದ ಪ್ರಿಂಟಾಗಿ ನಿಮ್ಮೆಲ್ಲರ ಕೈ ಸೇರಿದೆ.

ಶ್ರೀ ಶ್ರೀ ಶ್ರೀ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನ, ಶಾರದ ಪೀಠ ಶೃಂಗೇರಿಯ ಶ್ರೀ ಶ್ರೀ ಶ್ರೀ ಅಭಿನವ ವಿದ್ಯಾತೀರ್ಥ ಮಹಾ ಸ್ವಾಮಿಗಳವರು ಈ ಪುಸ್ತಕವನ್ನು ಪರಾಂಬರಿಸಿ ತಮ್ಮ ಅಮೋಘ ಸಂದೇಶ ವನ್ನು ಆಶೀರ್ವಾದದೊಡನೆ ಅನುಗ್ರಹಿಸಿರುತ್ತಾರೆ. ಪೂಜ್ಯಪಾದರೂ ಶ್ರೋತ್ರೀಯ ಬ್ರಹ್ಮನಿಷ್ಠರೂ, ಅಖಿಲಾಂಧ್ರ ಸಾಧುಪರಿಷತ್ತಿನ ಅಧ್ಯಕ್ಷರೂ, ಶ್ರೀ ಶಂಕರಾನಂದ ಟ್ರಸ್ಟ್ (ರಿ.)ನ ಅಧ್ಯಕ್ಷರೂ ಆದ ಶ್ರೀ ಶ್ರೀ ಶ್ರೀ ರಾಮಕೃಷ್ಣಾನಂದಸ್ವಾಮಿಯವರು ತಮ್ಮ ದಿವ್ಯ ಮಂಗಳಕರವಾದ ಅಭಿ ಪ್ರಾಯವನ್ನು ಅನುಗ್ರಹಿಸಿರುತ್ತಾರೆ. ಇವರಿಗೆ ನನ್ನ ಅನಂತ ವಂದನೆಗಳು ಇವರ ಅನುಗ್ರಹವನ್ನು ನಾನು ಅನಂತ ದೀರ್ಘ ದಂಡ ಪ್ರಣಾಮಗಳೊಡನೆ ಸಿರಸಾವಹಿಸಿ ಅವರ ಆಶೀರ್ವಾದ ಸದಾ ಇರಲೆಂದು ಪ್ರಾರ್ಥಿ ಸುತ್ತೇನೆ.

ಬೆಂಗಳೂರಿನ ಪೂಜ್ಯರೂ, ಪಂಡಿತ ಪ್ರವರ, ನ್ಯಾಯ, ವೇದಾಂತ, ಮೀಮಾಂಸಾ ವಿದ್ವಾನ್ ಎಂ. ಲಕ್ಷ್ಮೀನರಸಿಂಹ ಶಾಸ್ತ್ರಿಗಳವರು ಈ ಪುಸ್ತಕವನ್ನು ಆಮೂಲಾಗ್ರವಾಗಿ ಪರಿಶೀಲಿಸಿ ತಮ್ಮ ಅಭಿಪ್ರಾಯವನ್ನು ದಯದಯಪಾಲಿಸಿದ್ದಾರೆ. ಅವರಿಗೆ ಅತ್ಯಂತ ಚಿರಋಣಿಯಾಗಿದ್ದೇನೆ.

ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಗುರುದೇವ ಪ್ರೆಸ್ ಚಿತ್ರದುರ್ಗ ಇದರ ಮಾಲೀಕರಾದ ಶ್ರೀಮಾನ್ ಚನ್ನವೀರಯ್ಯನವರಿಗೆ ನನ್ನ ಅನಂತ ವಂದನೆಗಳು.

ಆರ್. ಚಿಕ್ಕೇಶ್ವರಾಚಾರ್ಯ
ಅಧ್ಯಾತ್ಮ ಪ್ರಚಾರ ಸಮಿತಿ
ಶ್ರೀ ಶಿವಾನಂದಾಶ್ರಮ
ಉಜ್ಜಂಪುರ.

ಚಿತ್ರದುರ್ಗ
ಮಕರ ಸಂಕ್ರಾಂತಿ, ಶ್ರೀ ಶಕೆ ೧೯೦೦
ಕಾಳಾಯುಕ್ತ ಸಂವತ್ಸರ



|| ಓಂ ||

ನಮೋ ಭಗವತೇ ಶಂಕರಾನಂದಾಯ

# ಒಪ್ಪೋಲೆ

| ಪುಟ | ಸಾಲು | ಇರುವುದು | ಇರಬೇಕಾದುದು |
|---|---|---|---|
| 3 | 2 | ಆಪ್ಯಾತ್ಮಿಕ | ಆಧ್ಯಾತ್ಮಿಕ, |
| | | ಆದಿಬೌತಿಕ ಆದಿದೈವಿಕ, | ಆಧಿಭೌತಿಕ ಆಧಿದೈವಿಕ |
| 3 | 15 | ಮೋಕ್ಷವೆನ್ನುತ್ತಾರೆ | ಮೋಕ್ಷವೆನ್ನುತ್ತದೆ |
| 7 | 6 | ಅಜ್ಞಾನವೇ | ಅಜ್ಞಾನವೇ |
| 10 | 18 | ಪ್ರತ್ಯಾಕ್ಷಾದಿ | ಪ್ರತ್ಯಕ್ಷಾದಿ |
| 11 | 17 | ಗ್ರಾಂಥಾರಂಭದಲ್ಲಿ | ಗ್ರಂಥಾರಂಭದಲ್ಲಿ |
| 15 | 16 | ಒಂದು ಪದಾರ್ಥ ಇತ್ತು. | ಒಂದು ಪದಾರ್ಥ ಇತ್ತು |
| | | | ಎಂದು ಹೇಳುತ್ತದೆ. |
| 15 | 23 | ಸಿದ್ಧಾಂತಿಗಳು | ಸಿದ್ಧಾಂತಿಗಳು |
| 16 | 20 | ಸಿದ್ದವೇ | ಸಿದ್ಧವೇ |
| 17 | 7 | ಸಿದ್ದಾಂತದ | ಸಿದ್ಧಾಂತದ |
| 19 | 24 | ತೋರೆಸಿಕೊಡುತ್ತಾರೆ | ತೋರಿಸಿಕೊಡುತ್ತಾರೆ. |
| 22 | 9 | ಆತ್ಮಜ್ಞಾಸುನವು | ಆತ್ಮಜ್ಞಾನವು |
| 28 | 11 | ಮಿಮಾಂಸಕವರಲ್ಲಿ | ಮೀಮಾಂಸಕರಲ್ಲಿ |
| 28 | 14 | ಅರ್ಧಾಪತ್ತಿ | ಅರ್ಥಾಪತ್ತಿ |
| 30 | 4 | ಭೇದಾಬೇದ | ಭೇದಾಭೇದ |
| | | ಭ್ರಹ್ಮತತ್ತ್ವವನ್ನು | ಬ್ರಹ್ಮತತ್ತ್ವವನ್ನು |
| 30 | 8 | ಧ್ಯಾನವಾದಿತಳಿಂದೂ | ಧ್ಯಾನವಾದಿಗಳಿಂದೂ |
| 31 | 17 | ಶುದ್ದ | ಶುದ್ಧ |

| ಪುಟ | ಸಾಲು | ಇರುವುದು | ಇರಬೇಕಾದುದು |
|---|---|---|---|
| 36 | 13 | ಪ್ರಾರಾಬ್ಧ | ಪ್ರಾರಬ್ಧ |
| 36 | 15 | ನಭೋಕ್ತರಿಕ್ಷೀಯತೇ | ನಭುಕ್ತಂಕ್ಷೀಯತೇ |
| 37 | 7 | ಪಾರಬ್ಧ | ಪ್ರಾರಬ್ಧ |
| 46 | 13 | ಆತ್ಮಜಾನವು | ಆತ್ಮಜ್ಞಾನವು |
| 47 | 6 | ಜ್ಞಾನಾಗ್ನಿ | ಜ್ಞಾನಾಗ್ನಿಃ |
| 52 | 8 | ನಿತ್ಯರ್ಮವನ್ನು | ನಿತ್ಯಕರ್ಮವನ್ನು |
| 54 | 15 | ತೃಪ್ತಸ್ಯ | ತೃಪ್ತಸ್ಯ |
| 56 | 21 | ಸಿದ್ಧಾಂತ | ಸಿದ್ಧಾಂತ |
| 60 | 12 | ಒಬ್ಬರ | ಒಬ್ಬರ |
| 60 | 17 | ಆದುರಿಂದ | ಆದುದರಿಂದ |
| 61 | 16 | ಹೇಳಿದ್ದಾನೆ | ಹೇಳಿದ್ದಾರೆ. |
| 62 | 10 | ವೇದಾಂತ ವಾಕ್ಯಗಳನು | ವೇದಾಂತ ವಾಕ್ಯಗಳನ್ನು |
| 70 | 1-2 | ಆಭಿಪ್ರಾಯ | ಅಭಿಪ್ರಾಯ |
| 75 | 2 | ಈ ರೀರಿಯಿಂದಲೂ | ಈ ರೀತಿಯಿಂದಲೂ |
| 76 | 9 | ಅದುದರಿಂದ | ಆದುದರಿಂದ |
| 79 | 6 | ಫ್ರಾಪ್ತವಾದುದನು | ಪ್ರಾಪ್ತವಾದುದನ್ನು |
| 83 | 1 | ಶಾಸ್ತ್ರದ ಅಗತ್ಯತೆ ಏನಿತ್ತು ? | ಶಾಸ್ತ್ರವನ್ನು ರಚಿಸುವ ಅಗತ್ಯತೆ ಏನಿತ್ತು ! |
| 90 | 21, 22 | ನಿವಾರಣೆಯಾಗುತ್ತದೆ. | ಉಂಟಾಗುತ್ತದೆ. |
| 93 | 18 | ಹೇಳಲ್ಲವಲ್ಲ | ಹೇಳಿಲ್ಲವಲ್ಲ |
| 94 | 8 | ಅಧಿಕಾರಿಯನು | ಅಧಿಕಾರಿಯನ್ನು |
| 94 | 10 | ಪರಿಣಾಮೂಡಲಾರದೊ | ಪರಿಣಾಮ ಮಾಡಲಾರದೋ |
| 105 | 6 | ಮನುಷ್ಯತ್ಚಂ | ಮನುಷ್ಯತ್ವಂ |
| 109 | 8 | ಸ್ವಪವನ್ನು | ಸ್ವಪ್ನವನ್ನು |

| ಪುಟ | ಸಾಲು | ಇರುವುದು | ಇರಬೇಕಾದುದು |
| --- | --- | --- | --- |
| 128 | 21 | ವಿವರಸಿರಿ | ವಿವರಿಸಿರಿ |
| 139 | 7-8 | ಸಿದವಾಗುತ್ತವೆ | ಸಿದ್ಧವಾಗುತ್ತವೆ. |
| 148 | 3 | ನಮ್ಮ ಆತ್ಮನು | ಆತ್ಮನು |
| 148 | 9 | ಹೇಳಿದೆವೆಂದು. | ವೆಂದು ಹೇಳಿದೆ. |
| 152 | 8 | ಆತ್ಮನ ಬುದ್ಧಿಯನ್ನು | ಬುದ್ಧಿಯನ್ನು |
| 152 | 10 | ಆತ್ಮನು | ಆತ್ಮನ |
| 152 ನೇ ಪುಟದಲ್ಲಿ "ಪೂರ್ವಪಕ್ಷಿ"ಯ ಪ್ರಶ್ನೆಯಿದೆ. ಅದಕ್ಕೆ ಉತ್ತರ 150 ನೇ ಪುಟದಲ್ಲಿಯೇ ಬಂದಿದೆ. | | | |
| 152 | 22 | ಭೋಕ್ತೃ | ಭೋಕ್ತೃ |
| 153 | 14 | ಇಲ್ಲದಿರುವುದನ್ನ್ಯ | ಇಲ್ಲದಿರುವುದನ್ನು |
| 158 | 21 | ದುಃಖಂಕ್ಕಿತ | ದುಃಖಕ್ಕಿಂತ |
| 158 | 22, 23 | ದುಃಖಿಯಾಗಲಾರನು | ದುಃಖಿಯಾಗಲಾರನೆಂದು ಹೇಳಿದೆ. ಇದೇ ಸಾಕ್ಷಿಲಕ್ಷಣ |
| 163 | 5 | ಆತನಲ್ಲಿ | ಆತ್ಮನಲ್ಲಿ |
| 163 | 5 | ಬ್ರಾಂತಿಯಿಂದ | ಭ್ರಾಂತಿಯಿಂದ |
| 163 | 7 | ಪಕ್ರಿಯೆಯು | ಪ್ರಕ್ರಿಯೆಯು |
| 164 | 15 | ಹಣ್ಣನ್ನು | ವಸ್ತುವನ್ನು |
| 165 | 21 | ಕನಡಿ | ಕನ್ನಡಿ |
| 172 | 15 | ವಿಷಯನಾಗುತ್ತಾನೆ. | ವಿಷಯನಾಗುತ್ತಾನೆಂದು ಹೇಳಿದ್ದಾರೆ. |
| 179 | 13 | ಅಜ್ಞಾದನ | ಅಜ್ಞಾನದ |
| 181 | 21 | ಜಾತೃವನ್ನಾಗಲೀ | ಜ್ಞಾತೃವನ್ನಾಗಲೀ |
| 191 | 9 | ಗುರುವಿದ | ಗುರುವಿನ |



ಓಂ ನಮೋ ಭಗವತೇ ಶಂಕರಾನಂದಾಯ

# ಕೃತಿ ಸಮರ್ಪಣೆ

ವೇದಾಂತೋದರವರ್ತಿ ಭಾಸ್ವದಮಲಂ ಧ್ವಾಂತಚ್ಛಿದಸ್ಮದ್ಧಿಯೋ
ದಿವ್ಯಂ ಜ್ಞಾನಮತೀಂದ್ರಿಯೇऽಪಿ ವಿಷಯೇ ವ್ಯಾಹನ್ಯತೇ ನಕ್ವಚಿತ್ ।
ಯೋ ನೋ ನ್ಯಾಯಶಲಾಕಯೈವ ನಿಖಿಲಂ ಸಂಸಾರ ಬೀಜಂ ತಮಃ
ಪ್ರೋತ್ಸಾರ್ಯಾ ವಿರಕಾರ್ಷೀದ್ಗುರು ಗುರುಃ ಪೂಜ್ಯಾಯ ತಸ್ಮೈ ನಮಃ ॥

ವೇದಾಂತದ ಅಂತರಾಳದಲ್ಲಿದ್ದು ಪ್ರಜ್ವಲಿಸುತ್ತಿರುವ ನಿರ್ಮಲವಾದ, ನನ್ನ ಅಂತಃಕರಣದ ತಮಸ್ಸನ್ನು ನಿರ್ಮೂಲಮಾಡುವ, ಅತೀಂದ್ರಿಯ ವಿಷಯವಾಗಿದ್ದರೂ ಕೂಡ ಸ್ವಲ್ಪವೂ ತಡೆಯಿಲ್ಲದ ಆ ದಿವ್ಯ ಜ್ಞಾನವನ್ನು ಯಾವ ಮಹಾತ್ಮರು ಉಂಟು ಮಾಡಿದರೋ ಯಾವ ಮಹಾತ್ಮರು ನ್ಯಾಯ ಶಲಾಕೆಯಿಂದಲೇ ಸಂಸಾರದ ಬೀಜವಾದ ಎಲ್ಲಾ ಅಜ್ಞಾನವನ್ನು ನಿರ್ಮೂಲವಾಗಿ ಹೋಗಲಾಡಿಸಿದರೋ ಆ ಗುರುಗಳ ಗುರುವಾದ ಆ ನನ್ನ ಪೂಜ್ಯ ಶ್ರೀ ಶಂಕರಾನಂದ ಗುರುದೇವರ ಪಾದಾರವಿಂದಗಳಿಗೆ ನಮಸ್ಕಾರ ಮಾಡಿ ಈ ಕೃತಿಯನ್ನು ಸಮರ್ಪಿಸುತ್ತೇನೆ.



ನಮೋ ಭಗವತೇ ಶಂಕರಾನಂದಾಯ

# ನೈಷ್ಕರ್ಮ್ಯಸಿದ್ಧಿ

(ಪ್ರಶ್ನೋತ್ತರ)

## ಮೊದಲನೇ ಅಧ್ಯಾಯ

## ಜ್ಞಾನದಿಂದಲೇ ಮೋಕ್ಷವು

### ಭಾಗ ೧

### ಅವತರಣಿಕೆ

ಪ್ರಪಂಚದಲ್ಲಿರುವ ಎಲ್ಲಾ ಪ್ರಾಣಿಗಳೂ ಎಲ್ಲಾ ತರದ ದುಃಖಗಳನ್ನು ನಿವಾರಿಸಿಕೊಳ್ಳಬೇಕೆಂದು ಸ್ವಾಭಾವಿಕವಾಗಿಯೇ ಬಯಸುವುದು ಕಂಡು ಬರುತ್ತದೆ. ಆದುದರಿಂದ ಪ್ರತಿ ಪ್ರಾಣಿಕೋಟಿಯೂ ಆ ದುಃಖ ನಿವಾರಣೆಗಾಗಿಯೇ ಪ್ರಯತ್ನಪಡುವುದೂ ಸ್ವೇಚ್ಛೆಯಿಂದ ನಡೆಯುತ್ತಲೇ ಇರುತ್ತದೆ. ಆದರೂ ಆ ದುಃಖದಿಂದ ತಪ್ಪಿಸಿಕೊಳ್ಳಲಾಗಿಲ್ಲ.

**ಪ್ರ: 1. ಪ್ರತಿಯೊಂದು ಪ್ರಾಣಿಯ ಸರ್ವ ಚಟುವಟಿಕೆಯೂ ದುಃಖನಿವಾರಣೆಯೇ ಆಗಿದೆ ಎಂದ ಮೇಲೆ ಆ ದುಃಖ ಪರಂಪರೆಯಿಂದ ಏಕೆ ತಪ್ಪಿಸಿಕೊಳ್ಳಲಾಗಿಲ್ಲ. ?**

ಉ : ಪ್ರತಿ ಪ್ರಾಣಿಯ ಸರ್ವ ಚಟುವಟಿಕೆಯೂ ದುಃಖ ನಿವಾರಣೆಯೇ ಆದರೂ ದುಃಖಪರಂಪರೆಯಿಂದ ತಪ್ಪಿಸಿಕೊಳ್ಳಲಾಗಿಲ್ಲ. ಅದಕ್ಕೆ ಕಾರಣವೇನೆಂದರೆ, ಆ ದುಃಖನಿವಾರಣೆಗಾಗಿ ಹಿಡಿದಿರುವ ಮಾರ್ಗ ತಪ್ಪಾಗಿದೆ. ಎಣ್ಣೆ ಹಚ್ಚಿಕೊಂಡ ಕೈಗಳನ್ನು ಎಣ್ಣೆಯಿಂದಲೇ ಹೇಗೆ ತೊಳೆದುಕೊಳ್ಳಲಾಗುವುದಿಲ್ಲವೋ ಹಾಗೆಯೇ ದುಃಖನಿವಾರಣೆಗಾಗಿ ಮಾಡುವ ಪ್ರಯತ್ನಗಳೆಲ್ಲಾ ಪುನಃ ದುಃಖ ಕೊಡುವಂತಹವುಗಳೇ ಆಗಿವೆ. ಆದುದರಿಂದ ದುಃಖ ನಿವಾರಣೆಯಾಗಿಲ್ಲ.

**ಪ್ರ : 2. ಈ ದುಃಖಪರಂಪರೆಯಿಂದ ತಪ್ಪಿಸಿಕೊಳ್ಳಲು ಪ್ರತಿ ಪ್ರಾಣಿಯೂ ಇಚ್ಛಿಸಲು ಕಾರಣವೇನು ?**

ಉ : ಯಾವ ಪ್ರಾಣಿಯೂ ದುಃಖವನ್ನು ತನ್ನಲ್ಲಿ ಇಟ್ಟುಕೊಳ್ಳಲು ಇಚ್ಛಿಸುವುದಿಲ್ಲ. ಏಕೆಂದರೆ ಆ ದುಃಖವು ತನ್ನ ಸ್ವಭಾವವಲ್ಲ.

**ಪ್ರ : 3. ತನಗೆ ಸಂಬಂಧವಿಲ್ಲದ-ಇಚ್ಛೆಯೂ ಇಲ್ಲದ ಪ್ರತಿ ಪ್ರಾಣಿಗೂ ತೊಂದರೆ ಕೊಡುವ ಈ ದುಃಖ ಎಲ್ಲಿಂದ ಬಂತು ?**

ಉ : ಈ ದುಃಖವು ಎಲ್ಲಿಂದ ಬಂದಿದೆ—ಇದನ್ನು ಹೇಗೆ ಕಳೆದುಕೊಳ್ಳಬೇಕು—ಎಂಬ ವಿಷಯಗಳ ತಿಳುವಳಿಕೆಗೆ ನಾವು ಶಾಸ್ತ್ರವನ್ನು ಮತ್ತು ದುಃಖನಿವೃತ್ತಿಮಾಡಿಕೊಂಡು ಶಾಶ್ವತ ಸುಖಾನುಭವ ಹೊಂದಿರುವ ಮಹಾತ್ಮರ ಆಶ್ರಯವನ್ನೇ ಪಡೆಯಬೇಕು. ಅಷ್ಟೇ ಅಲ್ಲದೆ ಯಾವ ವೇದಗಳನ್ನೂ ಆಶ್ರಯಿಸಿದರೂ ಆ ವೇದದ ಪರಮ ಪ್ರಯೋಜನವು ಮೋಕ್ಷವೆಂದೂ—ದುಃಖಾಂತವೆಂದೂ ಆರಂಭದಲ್ಲಿಯೇ ಹೇಳಿದೆ.

**ಪ್ರ : 4. ದುಃಖ ಮತ್ತು ದುಃಖನಿವೃತ್ತಿ ವಿಷಯದಲ್ಲಿ ಯಾವ ಯಾವ ಆಚಾರ್ಯರು ಮತ್ತು ಯಾವ ಯಾವ ಶಾಸ್ತ್ರಗಳು ಏನು ಹೇಳುತ್ತವೆ. ?**

ಉ : 1) ಸಾಂಖ್ಯ ಶಾಸ್ತ್ರವು ಮತ್ತು ಅದರ ಕಾರಿಕೆಗಳು ಜಗತ್ತಿನಲ್ಲಿ (೧) ಆದ್ಯಾತ್ಮಿಕ (೨) ಆದಿಭೌತಿಕ (೩) ಆದಿದೈವಿಕ ಎಂಬ ಮೂರುತರದ ದುಃಖಗಳು ಪ್ರತಿಯೊಂದು ಪ್ರಾಣಿಯನ್ನು ತೊಂದರೆಗೆ ಗುರಿಮಾಡಿವೆ. ಆ ಮೂರುತರದ ದುಃಖ ನಿವೃತ್ತಿಯೇ ಸಾಂಖ್ಯ ಶಾಸ್ತ್ರದ ಮುಖ್ಯ ಗುರಿಯಾಗಿದೆ. ಅದನ್ನೇ ಇವರು ಮೋಕ್ಷವೆನ್ನುತ್ತಾರೆ.

2) ಇನ್ನು ಯೋಗ ಶಾಸ್ತ್ರವಾದರೋ ಸಾಂಖ್ಯಮತದಂತೆಯೇ ದುಃಖನಿವಾರಣೆಯ ಉಪಾಯವನ್ನು ಹೇಳಿದೆ.

**“ಸಮಾಧಿ ಭಾವನಾರ್ಥಃ ಕ್ಲೇಶತನೂಕರಣಾರ್ಥಶ್ಚ” ೨ ॥ ೨** ಸಮಾಧಿಯನ್ನು ಹೇಗೆ ಕ್ರಮವಾಗಿ ಮುಟ್ಟಬೇಕೆಂಬುದನ್ನು ತೋರಿಸಿಕೊಟ್ಟು, ಈ ಸಮಾಧಿಯೇ ಜಗತ್ತಿನೊಳಗಿನ ಎಲ್ಲಾ ತರದ ದುಃಖದಿಂದ ಬಿಡುಗಡೆ ಹೊಂದಲು ಶ್ರೇಷ್ಠವಾದ ಮಾರ್ಗವೆಂದೂ, ಆ ಸಮಾಧಿಯಿಂದಲೇ ಕೈವಲ್ಯವು ಪ್ರಾಪ್ತವಾಗುವುದೆಂದೂ ಹೇಳಿದೆ.

3) ಇನ್ನು ವೈಶೇಷಿಕ ಶಾಸ್ತ್ರವು ಆರು ಇಂದ್ರಿಯಗಳು, ಆ ಆರು ಇಂದ್ರಿಯಗಳ ವಿಷಯಗಳು, ಆ ಆರರ ಅನುಭವಗಳು, ಶರೀರ, ಸುಖ, ದುಃಖ ಈ ಇಪ್ಪತ್ತೊಂದು ತರದ ದುಃಖನಾಶವೇ ಮೋಕ್ಷವೆನ್ನುತ್ತಾರೆ.

4) ನ್ಯಾಯಶಾಸ್ತ್ರದ ಮೊದಲನೆ ಸೂತ್ರದಲ್ಲಿಯೇ ಬಂದಿರುವ “ನಿಃಶ್ರೇಯಸ”ವೇ ನ್ಯಾಯಶಾಸ್ತ್ರದ ಅನುಯಾಯಿಗಳಿಗೆ ಶ್ರೇಷ್ಠವಾದುದೆಂದೂ ೨೧ ತರದ ದುಃಖ ನಿವೃತ್ತಿಯೇ ಮೋಕ್ಷವೆಂದೂ ಹೇಳಿದೆ.

5) ಪೂರ್ವಮೀಮಾಂಸಕರು (ಕರ್ಮಿಗಳು) ದುಃಖವನ್ನು ತಪ್ಪಿಸಿಕೊಳ್ಳುವುದಕ್ಕಾಗಿಯೇ ಕರ್ಮವನ್ನು ಅನುಸರಿಸಬೇಕು ಎಂದು ಹೇಳುತ್ತಾರೆ.

6) ಬೌದ್ಧ ಧರ್ಮದ ಅನುಯಾಯಿಗಳಿಗೆ ಆ ಮತಪ್ರವರ್ತಕನಾದ ಬುದ್ಧನು ಜಗತ್ತಿನೊಳಗಿನ ದುಃಖವನ್ನು ನೋಡಿ, ಜನ್ಮ, ಮೃತ್ಯು,ಜರಾ, ವ್ಯಾಧಿ ಈ ದುಃಖಗಳ ಕಾರಣಗಳನ್ನು ಮತ್ತು ಅವುಗಳ ನಾಶವನ್ನು ಮಾಡಬೇಕೆಂದೇ ಗೃಹವನ್ನೂ ಹೆಂಡತಿ ಮಕ್ಕಳನ್ನು ತ್ಯಾಗಮಾಡಿ ಹೊರಟನು. ಬೌದ್ಧ ಧರ್ಮದ ಧ್ಯೇಯವಾದರೂ ‘ನಿರ್ವಾಣ’ ಅಥವಾ ದುಃಖದ ನಿವೃತ್ತಿಯೇ ಆಗಿದೆ.

ಹೀಗೆ ಎಲ್ಲಾ ಶಾಸ್ತ್ರಗಳೂ ಮತ್ತು ಎಲ್ಲಾ ಧರ್ಮಪ್ರವರ್ತಕರೂ ದುಃಖ ನಿವೃತ್ತಿಯನ್ನೇ ಹೇಳಿದ್ದಾರೆ. ಆದರೆ ಈ ದುಃಖಕ್ಕೆಲ್ಲಾ ಮೂಲ ವೇನು ? ಎಂಬುದಕ್ಕೆ ಮಾತ್ರ ಎಲ್ಲಾ ದರ್ಶನಗಳೂ, ಧರ್ಮಗಳೂ ಬೇರೆ ಬೇರೆ ಉತ್ತರಗಳನ್ನು ಕೊಟ್ಟಿವೆ.

**ಪ್ರ : 5. ಹಾಗಾದರೆ ಈ ದುಃಖಕ್ಕೆ ಮೂಲವೇನು ?**

ಉ : ಈ ದುಃಖಕ್ಕೆ ಮೂಲವು ದೇಹವೇ. ಸುಷುಪ್ತ್ಯಾವಸ್ಥೆಯಲ್ಲಿ ದೇಹ ಭಾವ ಇಲ್ಲದೇ ಇರುವುದರಿಂದ ಯಾವ ದುಃಖವೂ ಕಂಡುಬರುವುದಿಲ್ಲ. ಜಾಗ್ರತ್ಸ್ವಪ್ನದಲ್ಲಿ ದೇಹ ಸಂಬಂಧವಿರುವದರಿಂದ ದುಃಖವು ಬಂದು ಗಂಟು ಬೀಳುವುದು. ಆದ್ದರಿಂದ ದೇಹವೇ ದುಃಖದ ಮೂಲ ಕಾರಣವಾಗಿದೆ. ದೇಹ ಭಾವ ಇರುವವರೆಗೂ ದುಃಖವು ತಪ್ಪಿದ್ದಲ್ಲ.

**ಪ್ರ : 6. ಈ ದೇಹಕ್ಕೆ ಕಾರಣವು ಯಾವುದು ?**

ಉ : ಹಿಂದಿನ ಜನ್ಮದಲ್ಲಿ ಮಾಡಿದ ಪಾಪ ಪುಣ್ಯಗಳೇ ಕಾರಣವಾಗಿವೆ.

**ಪ್ರ : 7. ಈ ಪಾಪಪುಣ್ಯಗಳಿಗೆ ಕಾರಣವೇನು ?**

ಉ : ವೇದದಲ್ಲಿ ಹೇಳಿದ ವಿಧಿ, ನಿಷೇಧರೂಪ ಕರ್ಮಗಳೇ ಪಾಪ ಪುಣ್ಯಗಳಿಗೆ ಕಾರಣವಾಗಿವೆ.

ಯಾರು ಈ ವಿಧಿ ನಿಷೇಧರೂಪ ಕರ್ಮತ್ಯಾಗಮಾಡುತ್ತಾರೋ ಅವರಿಗೆ ಪಾಪಪುಣ್ಯದಭಯವಿಲ್ಲ. ಪಾಪಪುಣ್ಯದ ಭಯವಿದ್ದರಲ್ಲವೇ ದೇಹ ಬರುವುದು. ಆದ್ದರಿಂದ ಪಾಪಪುಣ್ಯ ಇಲ್ಲದಿರುವುದರಿಂದ ದೇಹವೂ ಇಲ್ಲ. ದೇಹೋತ್ಪತ್ತಿ ಇಲ್ಲದಂತಾಗಿ ದುಃಖ ಮೂಲವೇ ಅಳಿದು ಹೋಗುವುದೆಂದು ಪೂರ್ವಮೀಮಾಂಸಕರು ಹೇಳುತ್ತಾರೆ.

ಅಂದರೆ ಮೀಮಾಂಸಕರರ ಮತದಂತೆ ಧರ್ಮಾಧರ್ಮ (ವಿಧಿನಿಷೇಧ ರೂಪಕರ್ಮಗಳು) ಪಾಪಪುಣ್ಯ—ದೇಹ ಇದಿಷ್ಟೇ ದುಃಖದ ಮೀಮಾಂಸೆ ಎಂದಂತಾಯಿತು.

**ಪ್ರ : 8. ಉಳಿದ ದಾರ್ಶನಿಕರು ದುಃಖದ ಮೀಮಾಂಸೆಯನ್ನು ಹೇಗೆ ಮಾಡಿದ್ದಾರೆ ?**

ಉ : ಉಳಿದ ದಾರ್ಶನಿಕರು ಇಷ್ಟಕ್ಕೆ ನಿಂತಿಲ್ಲ ಇನ್ನೂ ಮುಂದೆ ಹೋಗಿದ್ದಾರೆ. ಈ ಧರ್ಮಾಧರ್ಮಗಳಿಗೆ ಕಾರಣವೇನು ? ಎಂದು ಪ್ರಶ್ನೆ ಹಾಕುತ್ತಾರೆ.

ಆ ಧರ್ಮಾಧರ್ಮಗಳಿಗೆ ವಿಷಯಗಳಲ್ಲಿರುವ ರಾಗ–ದ್ವೇಷಗಳು ಕಾರಣಗಳು ಎಂದು ಹುಡುಕಿದ್ದಾರೆ.

**ಪ್ರ : 9. ಈ ರಾಗದ್ವೇಷಗಳಿಗೆ ಮೂಲ ಯಾವುದು ?**

ಉ : ಈ ರಾಗದ್ವೇಷಗಳಿಗೆ ದೇಹಾದಿಗಳೇ ನಾನೆಂಬ ತಪ್ಪುತಿಳುವಳಿಕೆಯೇ ಅಂದರೆ ಮಿಥ್ಯಾಜ್ಞಾನವೇ ಮೂಲವೆಂದು ನೈಯಾಯಿಕರು ಉತ್ತರ ಕೊಡುತ್ತಾರೆ.

**ಪ್ರ : 10. ನೈಯಾಯಿಕರ ಮತದಂತೆ ಮೋಕ್ಷ ಯಾವುದು ?**

ಉ : ರಾಗದ್ವೇಷಗಳಿಗೆ ಕಾರಣವಾದ ಮಿಥ್ಯಾಜ್ಞಾನವನ್ನು ಹೊಡೆದುಹಾಕುವುದೇ ಮೋಕ್ಷಪ್ರಾಪ್ತಿಗೆ ಮುಖ್ಯ ಸಾಧನವೆಂಬದು ಅವರ ಅಭಿಪ್ರಾಯ.

**ಪ್ರ : 11. ಈ ಮಿಥ್ಯಾಜ್ಞಾನಕ್ಕೆ ಕಾರಣ ಯಾವುದು ?**

ಉ : ಈ ಮಿಥ್ಯಾಜ್ಞಾನಕ್ಕೆ ಅವಿದ್ಯೆಯೇ ಮೂಲಕಾರಣ. ಆದರೆ ಇಲ್ಲಿ ವೇದಾಂತದ ಅವಿದ್ಯೆಯೇ ಬೇರೆ ಬೌದ್ಧರ ಅವಿದ್ಯೆಯೇ ಬೇರೆ.

ಈ ಮಿಥ್ಯಾಜ್ಞಾನಕ್ಕೆ ಅವಿವೇಕವೇ ಕಾರಣವೆಂದು ಸಾಂಖ್ಯರೂ, ಯೋಗಿಗಳೂ ಹೇಳುತ್ತಾರೆ.

**ಪ್ರ : 12. ಸಾಂಖ್ಯರು ಯೋಗಿಗಳು ಹೇಳುವ ಅವಿವೇಕವೆಂಬ ಪದಕ್ಕೆ ಅರ್ಥವೇನು ?**

ಉ : ಪುರುಷರು ನಿಜವಾಗಿ ಪ್ರಕೃತಿಯಿಂದ ಬೇರೆಯಾಗಿರುವರೆಂದು ತಿಳಿಯದಿರುವುದೇ ಅವಿವೇಕವೆಂದು ಹೇಳುತ್ತಾರೆ. ಈ ಅವಿವೇಕವೇ ದುಃಖಕ್ಕೆ ಮೂಲಕಾರಣವೆಂದು ಸಾಂಖ್ಯರ ಅಭಿಪ್ರಾಯ.

**ಪ್ರ : 13 ಸಾಂಖ್ಯರ ಮೋಕ್ಷ ಯಾವುದು ?**

ಉ : ಪುರುಷನಾದ ತಾನು ಪ್ರಕೃತಿಗಿಂತ ತೀರಾ ಭಿನ್ನನಾಗಿರುವೆನೆಂದೂ, ಸ್ವತಂತ್ರನೆಂದೂ, ತಿಳಿದುಕೊಳ್ಳುವುದೇ "ಕೈವಲ್ಯ"ವೆಂದೂ ಮೋಕ್ಷವೆಂದೂ ಸಾಂಖ್ಯರು ಹೇಳುತ್ತಾರೆ.

**ಪ್ರ : 14. ಸಾಂಖ್ಯರ "ಅವಿವೇಕ"ವನ್ನು ಪಾತಂಜಲ ಯೋಗಿಗಳು ಏನೆಂದು ಕರೆಯುತ್ತಾರೆ ?**

ಉ : **"ತಸ್ಯ ಹೇತು ರವಿದ್ಯಾ"** ಯೋಗ ಸೂತ್ರದ ೨ ನೇ ಅಧ್ಯಾಯದ ೨೪ ನೇ ಸೂತ್ರದಲ್ಲಿ ಆ ಅವಿವೇಕಕ್ಕೆ "ಅವಿದ್ಯೆ" ಎಂದು ಕರೆಯಲ್ಪಟ್ಟಿದೆ.

ಯಾವುದಕ್ಕೆ ನೈಯಾಯಿಕರು, ವೈಶೇಷಿಕರು "ಮಿಥ್ಯಾಜ್ಞಾನ"ವೆನ್ನುತ್ತಾರೆಯೋ ಅದಕ್ಕೆ ಸಾಂಖ್ಯರು 'ಅವಿವೇಕ'ವೆಂದೂ ಯೋಗಿಗಳು 'ಅವಿದ್ಯೆ' ಎಂದೂ ಕರೆಯುತ್ತಾರೆ.

**ಪ್ರ : 15. ವೇದಾಂತಿಗಳ ಸಿದ್ಧಾಂತದಂತೆ ದುಃಖಕ್ಕೆ ಮೂಲ ಕಾರಣ ಯಾವುದು ?**

ಉ : ದುಃಖಕ್ಕೆ ದೇಹವೇ ಮೂಲಕಾರಣ; ಈ ದೇಹಕ್ಕೆ ಹಿಂದೆ ಮಾಡಿದ ಪಾಪಪುಣ್ಯಗಳೇ ಕಾರಣ: ಈ ಪಾಪಪುಣ್ಯಗಳಿಗೆ ವೇದದಲ್ಲಿ ಹೇಳಿರುವ ವಿಧಿ ನಿಷೇಧರೂಪ ಕರ್ಮಗಳೇ ಕಾರಣ: ಈ ವಿಧಿ ನಿಷೇಧರೂಪ ಕರ್ಮಗಳಿಗೆ ರಾಗದ್ವೇಷಗಳೇ ಕಾರಣ; ಈ ರಾಗದ್ವೇಷಗಳಿಗೆ ಹಿತಕರವಾದುದೆಂದೂ ಅಹಿತಕರವಾದುದೆಂದೂ ಕಾಣುತ್ತಿರುವ ನಾಮರೂಪಾತ್ಮಕ ಜಗತ್ತೇ ಕಾರಣ; ಈ ಜಗತ್ತಿಗೆ ಪರಮಾತ್ಮನನ್ನು ಪರಮಾತ್ಮನನ್ನಾಗಿ ನೋಡದೆ ಇರುವ "ಅಧ್ಯಾಸ"ವೇ ಕಾರಣ; ಈ ಅಧ್ಯಾಸಕ್ಕೆ ದ್ವೈತಪ್ರಪಂಚದ ಸತ್ಯತ್ವ ಭ್ರಾಂತಿಯೇ ಕಾರಣ.

**ಪ್ರ : 16. ಉದಾಹರಣೆಯನ್ನು ಕೊಡಿ.**

ಉ : ಹಗ್ಗವನ್ನು ಹಗ್ಗವನ್ನಾಗಿ ನೋಡದೆ ಇರುವ ಅಜ್ಞಾನದಿಂದಲೇ ಸರ್ಪಭ್ರಾಂತಿಯಾಗುವಂತೆ ಕಪ್ಪೆಚಿಪ್ಪನ್ನು ಕಪ್ಪೆ ಚಿಪ್ಪನ್ನಾಗಿ ನೋಡದೆ ಇರುವ ಅಜ್ಞಾನದಿಂದಲೇ ಬೆಳ್ಳಿಯೆಂಬ ಭ್ರಾಂತಿಯಾಗುವಂತೆ

ಸಚ್ಚಿದಾನಂದರೂಪ ಅದ್ವಿತೀಯ ಆತ್ಮನ ಅಜ್ಞಾನವೇ ಈ ದ್ವೈತರೂಪ ಪ್ರಪಂಚಕ್ಕೆ ಕಾರಣವಾಗಿ ಪ್ರಪಂಚವು ಸತ್ಯವೆಂದೂ, ಭ್ರಾಂತಿಯಿಂದ ತೋರುತ್ತದೆ. ಇದಕ್ಕೆಲ್ಲಾ ಅಜ್ಞಾನವೇ ಮಾತೃಸ್ಥಾನ. ಹಾಗಾದರೆ ದುಃಖಕ್ಕೆ ಮೂಲಕಾರಣ ಅಜ್ಞಾನವೆಂದು ವೇದಾಂತಿಗಳು ಸಿದ್ಧಮಾಡಿದ್ದಾರೆ. ಇಷ್ಟು ಆಳವಾಗಿ ಮತ್ತಾರೂ ಹೋಗಿರುವುದಿಲ್ಲ.

ಆದುದರಿಂದ ಆತ್ಮನ ಅಜ್ಞಾನವೇ ಎಲ್ಲಾ ಕೇಡುಗಳ ಆಗರ. ದುಃಖದ ಮೂಲಸ್ಥಾನ.

ಇನ್ನು ಯಾವ ವಿಧವಾದ ವ್ಯತ್ಯಾಸವನ್ನು ಹೊಂದದ ನಿರತಿಶಯ ಸುಖವೇ ಆತ್ಮಸ್ವರೂಪವಾಗಿದೆ. ಹೀಗಿದ್ದರೂ ನಾವು ಸುಖವನ್ನು ವಿಷಯ ವಸ್ತುಗಳಲ್ಲಿ ಅರಸುತ್ತೇವೆ.

**ಪ್ರ : 17. ಆತ್ಮನು ಸುಖಸ್ವರೂಪನೇ ಆದರೆ ಆ ಸುಖವು ಸದಾ ಇರಬೇಕಲ್ಲವೇ ? ನಮ್ಮ ಅನುಭವದಲ್ಲಿ ಹಾಗೆ ಕಾಣುವುದಿಲ್ಲವಲ್ಲ ! ವಿಷಯಸಂಗದಿಂದಲೇ ಸುಖದ ಅನುಭವವಾಗುವುದು ಕಂಡುಬರುತ್ತದೆಯಲ್ಲಾ !**

ಉ : ಹೌದು ಸ್ವತಃ ಕಡಲೇಹಿಟ್ಟಿಗೂ ಸಿಹಿಕೊಡುವ ಬೆಲ್ಲವು ಭ್ರಮೆಯಿಂದ ಒಂದು ಸಾರಿ ಕಡಲೇಹಿಟ್ಟನ್ನೇ ಪ್ರಶ್ನೆಮಾಡಿತಂತೆ –''ಹೇ ಕಡಲೇ ಹಿಟ್ಟೆ, ಎಲ್ಲರೂ ನಿನ್ನನ್ನು ಸಿಹಿ ಎನ್ನುತ್ತಾರೆ. ಆ ಸಿಹಿಯನ್ನು ನನಗೂ ಸ್ವಲ್ಪ ಕೊಡಬಾರದೆ'' ಎಂದಿತಂತೆ-ಹಾಗೆಯೇ ಸದಾ ಸುಖ ಸ್ವರೂಪನಾದ ಆತ್ಮನೇ ತಾನಾಗಿದ್ದರೂ ಆ ಸುಖವನ್ನು ವಿಷಯದಲ್ಲಿ ಅರಸುವುದು ಭ್ರಮೆಯಲ್ಲವೆ !

**ಪ್ರ : 18. ಆತ್ಮನು ಆನಂದ ಸ್ವರೂಪನೆಂಬುದನ್ನು ಹೇಗೆ ತಿಳಿಯಬೇಕು. !**

ಉ : ಅಜ್ಞಾನಿ ಜನಗಳಿಗೆ ವಿಷಯವನ್ನು ಭೋಗಿಸಿ ಅದರಿಂದ ಆನಂದವನ್ನು ಪಡೆಯಬೇಕೆಂಬ ಇಚ್ಛೆಉಂಟಾಗುತ್ತದೆ. ವಿಷಯೇಚ್ಛೆಉಂಟಾದಕೂಡಲೇ ಅಂತಃಕರಣವು ಚಂಚಲವಾಗುತ್ತದೆ. ಚಂಚಲವಾದ ಅಂತಃಕರಣದಲ್ಲಿ ಸ್ವಭಾವತ ಪ್ರತಿಬಿಂಬಿಸುವ ಆತ್ಮನ ಆನಂದದ ಪ್ರತಿಬಿಂಬ ಬೀಳು

ವುದಿಲ್ಲ. ಆಗ ದುಃಖವಾಯಿತು. ಅಂದರೆ ಅಂತಃಕರಣದ ಚಂಚಲತೆಯೇ ದುಃಖವೆಂದು ತಿಳಿಯಬೇಕು. ಸರಿ-ಅವರು ಬೇಡಿದ ವಿಷಯ ದೊರೆಯಿತು, ಆಗ ಅಂತಃಕರಣವು ಶಾಂತವಾಯಿತು. ಶಾಂತವಾದ ಅಂತಃಕರಣದಲ್ಲಿ ಆತ್ಮನ ಆನಂದದ ಪ್ರತಿಬಿಂಬ ಬೀಳುತ್ತದೆ. ಆಗ ಆನಂದವಾಯಿತು–ಎಂದು ಅನ್ನುತ್ತಾರೆ. ಈ ರೀತಿ ಆನಂದ ಬರುವುದು ವಿಷಯದಿಂದ ಎಂದು ಅಜ್ಞಾನಿಗಳು ತಿಳಿದು ಸುಖಕ್ಕಾಗಿ ವಿಷಯಗಳನ್ನೇ ಅವಲಂಬಿಸುತ್ತಾರೆ. ನಿಜವಾಗಿ ನೋಡಿದರೆ ಆತ್ಮನೇ ಆನಂದ ಸ್ವರೂಪನು. ಅಂತಃಕರಣದ ಚಂಚಲತೆಯೇ ದುಃಖ,ಅಂತಃಕರಣದ ನಿಶ್ಚಂಚಲತೆಯೇ ಆನಂದ.

**ಪ್ರ : 19. ಇದಕ್ಕೆ ಒಂದು ಉದಾಹರಣೆಯನ್ನು ಕೊಡಿ.**

ಉ : ಒಂದು ಪಾತ್ರೆಯಲ್ಲಿ ತುಂಬಾ ನೀರಿದೆ. ಅದರಲ್ಲಿ ನಮ್ಮ ಮುಖದ ಪ್ರತಿಬಿಂಬ ತೋರುತ್ತದೆ. ಆ ನೀರಿನಲ್ಲಿ ಒಂದು ಸಣ್ಣ ಕಲ್ಲು ಹಾಕಿದರೆ ನೀರು ಅಲೆ ಅಲೆಯಾಗಿ ನಮ್ಮ ಮುಖದ ಪ್ರತಿ ಬಿಂಬವು ನಷ್ಟವಾಗುತ್ತದೆ. ಹಾಗೆಯೇ ವಿಷಯೇಚ್ಛೆಯೇ ಅಂತಃಕರಣದ ಚಂಚಲತೆಯ ಮೂಲಕ ದುಃಖ ಅನುಭವವಾಗುತ್ತದೆ. ಅಂತಃಕರಣದ ನಿಶ್ಚಂಚಲತೆಯೇ ಸುಖ.

ಈ ರೀತಿ ಆನಂದವು ವಿಷಯಗಳಿಂದ ಬರುವುದಲ್ಲ. ಅದು ನಮ್ಮ ಸ್ವರೂಪವೇ ಆಗಿದೆ.

**ಪ್ರ 20 ಅಂತಹ ಶಾಶ್ವತ ಸುಖವೇ ನಮ್ಮ ಸ್ವರೂಪವಾಗಿದ್ದರೂ ಅದು ನಮಗೆ ಸದಾ ಅನುಭವಕ್ಕೆ ಬರದಿರಲು ಕಾರಣವೇನು?**

ಉ : ಅಂತಹ ಶಾಶ್ವತ ಸುಖವು ನಮ್ಮ ಸ್ವರೂಪವಾಗಿದ್ದರೂ ಅದು ನಮ್ಮ ಅನುಭವಕ್ಕೆ ಬರದಂತೆ ಮಾಡಿರುವುದೂ ಈ ಅಜ್ಞಾನವೆ.

**ಪ್ರ : 21. ಈ ಅಜ್ಞಾನಕ್ಕೆ ಎಷ್ಟು ಶಕ್ತಿಗಳಿವೇ ?**

ಉ : ಈ ಅಜ್ಞಾನಕ್ಕೆ ಆವರಣ–ವಿಕ್ಷೇಪವೆಂಬ ಎರಡು ಶಕ್ತಿಗಳಿವೆ. ಈ ಅಜ್ಞಾನಕ್ಕೆ ಅವಿದ್ಯೆ ಎಂದೂ ಕರೆಯುತ್ತಾರೆ. ಈ ಅಜ್ಞಾನವೇ ಎಲ್ಲಾ ಅನರ್ಥವನ್ನೂ ಉಂಟುಮಾಡುತ್ತದೆ.

**ಪ್ರ : 22. ಅಜ್ಞಾನದ ಆವರಣ ಶಕ್ತಿ ಎಂದರೇನು ?**

ಉ : ಇರುವ ವಸ್ತುವನ್ನು ಮುಚ್ಚಿ ಕಾಣದಂತೆ ಮಾಡುವುದೇ ಅಜ್ಞಾನದ ಆವರಣ ಶಕ್ತಿ.

**ಪ್ರ : 23. ಅಜ್ಞಾನದ ವಿಕ್ಷೇಪ ಶಕ್ತಿ ಎಂದರೇನು ?**

ಉ : ಅದನ್ನು ವಿಪರೀತವಾಗಿ ಕಾಣುವಂತೆ ಮಾಡುವುದೇ ವಿಕ್ಷೇಪ ಶಕ್ತಿ ಆವರಣವಿಲ್ಲದೆ ವಿಕ್ಷೇಪವು ಇರಲಾರದು.

**ಪ್ರ : 24. ಈ ಆವರಣ ಶಕ್ತಿ ಏನುಮಾಡುತ್ತದೆ ?**

ಉ : ನಮ್ಮ ಸ್ವರೂಪ ಭೂತ ಆನಂದರೂಪ ಆತ್ಮನನ್ನು ಮುಚ್ಚಿ ಆತ್ಮನ ಆನಂದ ಸ್ವರೂಪವು ಕಾಣದಂತೆ ಮಾಡಿರುತ್ತದೆ.

**ಪ್ರ : 25. ವಿಕ್ಷೇಪ ಶಕ್ತಿಯಿಂದ ಏನು ಅನರ್ಥ ಉಂಟಾಗಿದೆ?**

ಉ : ಅದಕ್ಕೆ ವಿರುದ್ಧವಾಗಿ ಆತ್ಮನಲ್ಲಿ ಅನೇಕತ್ವ ದುಃಖತ್ವ, ಕರ್ತೃತ್ವತ್ವ, ಭೋಕ್ತೃತ್ವತ್ವ ಮೊದಲಾದವುಗಳು ಇರುವಂತೆ ತೋರಿಸುತ್ತದೆ.

ಎಂದರೆ ಅದ್ವಿತೀಯನೂ, ಆನಂದ ಸ್ವರೂಪನೂ ಆದ ಆತ್ಮನು ಕ್ರೀಯಾಶೀಲನಾದ **ಜೀವನಾಗಿಯೂ,** ಜಡವಾದ **ಜಗತ್ತಾಗಿಯೂ** ಸರ್ವಜ್ಞನಾದ **ಈಶ್ವರನಾಗಿಯೂ** ಕಾಣುವನು. ಆತ್ಮನನ್ನು ಹೀಗೆ ವಿಪರೀತವಾಗಿ ಕಾಣುವಂತೆ ಮಾಡುವುದೇ ಅವಿದ್ಯೆಯ ವಿಕ್ಷೇಪಶಕ್ತಿ.

**ಪ್ರ : 26. ಇಷ್ಟೆಲ್ಲಾ ಅನರ್ಥಕ್ಕೆ ಕಾರಣವಾದ ಅವಿದ್ಯೆಯನ್ನು ಹೇಗೆ ನಿವಾರಿಸಿಕೊಳ್ಳಬೇಕು. ?**

ಅವಿದ್ಯೆಗೆ ವಿರುದ್ಧವಾದದು ವಿದ್ಯೆ ಒಂದೆ. ಅಜ್ಞಾನಕ್ಕೆ ವಿರುದ್ಧವಾದುದು ಜ್ಞಾನ ಒಂದೆ. ಆದ್ದರಿಂದ ಈ ಅಜ್ಞಾನವನ್ನು ಜ್ಞಾನ ಒಂದರಿಂದಲೇ ನಿವಾರಿಸಿಕೊಳ್ಳಬೇಕು.

**ಪ್ರ : 27. ಯಾವ ಜ್ಞಾನದಿಂದ ಅಜ್ಞಾನವನ್ನು ನಿವಾರಿಸಿಕೊಳ್ಳಬೇಕು. ?**

ಉ : ಯಾವುದರ ಅಜ್ಞಾನದಿಂದ ಯಾವುದು ಕಂಡುಬಂದು ಯಾವುದರ ಜ್ಞಾನದಿಂದ ಅದು ನಿವಾರಣೆಯಾಗುತ್ತದೆಯೋ ಅದರ ಜ್ಞಾನದಿಂದಲೇ ಅಜ್ಞಾನ ನಿವಾರಣೆ ಯಾಗಬೇಕಲ್ಲವೇ !

**ಪ್ರ . 28. ಉದಾಹರಣೆಯನ್ನು ಕೊಡಿ —**

ಉ . ಹಗ್ಗದ ಅಜ್ಞಾನದಿಂದ ಸರ್ಪವು ಕಂಡುಬರುತ್ತದೆ ಆ ಸರ್ಪ ನಿವೃತ್ತಿಯು ಹಗ್ಗದ ಜ್ಞಾನದಿಂದಲೇ ಆಗಬೇಕಲ್ಲವೇ !

ಹಾಗೆಯೇ ಅದ್ವಿತೀಯನಾದ, ಆನಂದ ಘನನಾದ ಆತ್ಮನ ಅಜ್ಞಾನ ದಿಂದ ಈ ದ್ವೈತರೂಪ ಪ್ರಪಂಚಕಂಡು ಬರುತ್ತದೆ ಈ ಅನರ್ಥರೂಪ ದ್ವೈತಪ್ರಪಂಚವು ಆತ್ಮಜ್ಞಾನದಿಂದಲ್ಲದೆ ಬೇರೆ ಯಾವುದರಿಂದಲೂ ನಿವಾ ರಣೆಯಾಗುವುದಿಲ್ಲ

ಆದ್ದರಿಂದ ಆತ್ಮಜ್ಞಾನದಿಂದಲೇ ಸರ್ವ ದುಃಖಗಳ ನಿವೃತ್ತಿ-ಆನಂದ ಪ್ರಾಪ್ತಿರೂಪ ಮೋಕ್ಷ ದೊರೆಯುತ್ತದೆ ಎಂಬುದೇ ವೇದಾಂತ ಸಿದ್ಧಾಂತ

**ಪ್ರ : 29 ಹಾಗಾದರೆ ಆತ್ಮಜ್ಞಾನವನ್ನು ಹೇಗೆ ಪಡೆಯ ಬೇಕು ? ಪ್ರತ್ಯಕ್ಷಾದಿ ಪ್ರಮಾಣಗಳ ಆಶ್ರಯ ಪಡೆಯಬೇಕೆ. ?**

ಉ . ಆತ್ಮನು ಪ್ರತ್ಯಕ್ಷಾದಿ ಪ್ರಮಾಣಗಳಿಗೆ ದೊರೆಯಲಾರನು

**ಪ್ರ : 23 ಆತ್ಮನು ಪ್ರತ್ಯಕ್ಷಾದಿಪ್ರಮಾಣಗಳಿಗೆ ಏಕೆ ದೊರೆ ಯಲಾರನು ?**

ಉ . ಪ್ರತ್ಯಕ್ಷಾದಿಪ್ರಮಾಣಗಳೆಲ್ಲಾ ಅಜ್ಞಾನದ ವಿಕ್ಷೇಪಶಕ್ತಿಗೆ ಸಂಬಂಧ ಪಟ್ಟವುಗಳು ಅಜ್ಞಾನವೇ ಪ್ರತ್ಯಕ್ಷಾದಿಪ್ರಮಾಣಗಳಿಗೆ ತಾಯಿ ಅಜ್ಞಾನ ನಿವಾರಣೆಯಾಗದೆ ಆತ್ಮಸಾಕ್ಷಾತ್ಕಾರವಾಗಲಾರದು ಈ ಕಾರಣ ದಿಂದ ತಾಯಿಯಾದ ಅಜ್ಞಾನವನ್ನು ಪ್ರತ್ಯಾಕ್ಷಾದಿಗಳು ನಿವಾರಣೆಮಾಡಿ ಆತ್ಮನನ್ನು ಇದ್ದಕ್ಕಿದ್ದಂತೆ ತೋರಿಸಲಾರವು ಆದ್ದರಿಂದ ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಆತ್ಮನು ಪ್ರಮೇಯನಲ್ಲ

ಮತ್ತು ಪ್ರತ್ಯಕ್ಷಾದಿಗಳು ಪ್ರಮಾಣಗಳಾಗಿ ಆತ್ಮನು ಪ್ರಮೇಯನಾ ದರೆ ಅವನ ಅಪ್ರಮೇಯತ್ವಕ್ಕೆ ಭಂಗಬರುತ್ತದೆ ಮತ್ತು ಪ್ರತ್ಯಕ್ಷಾದಿ ಗಳೂ-ಆತ್ಮನೂ ಸತ್ಯವೆಂದು ತಿಳಿದುಬರುವುದರಿಂದ ಆತ್ಮನ ಅದ್ವಿತೀಯ ತ್ವಕ್ಕೂ ಕುಂದುಂಟಾಗುವುದು. ಆಗ ಆತ್ಮನು ಪರಿಚ್ಛಿನ್ನನೂ-ದುಃಖಿಯೂ ಆಗುವನು ಇದೆಲ್ಲವೂ **"ನೇಹ ನಾನಾಸ್ತಿ ಕಿಂಚನ"** ಎಂಬ ಶ್ರುತಿ

ಪ್ರಮಾಣಕ್ಕೆ ವಿರೋಧವಾಗುವುದು. ಆದುದರಿಂದ ಆತ್ಮನು ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಅಗೋಚರನು. ಇಷ್ಟೇ ಅಲ್ಲ ಅವನು "**ಅಪ್ರಮೇಯನು**" ಎಂಬುದಾಗಿ ಭಗವದ್ಗೀತಾ ೨ ನೇ ಅಧ್ಯಾಯದ ೧೮ ನೇ ಶ್ಲೋಕದಲ್ಲಿ ಭಗವಂತನೂ ಸ್ಪಷ್ಟಪಡಿಸಿದ್ದಾನೆ. ಈ ಎಲ್ಲಾ ಕಾರಣದಿಂದ ಆತ್ಮನು ಯಾವ ಪ್ರಮಾಣಕ್ಕೂ ನಿಲುಕದಂತವನು.

**ಪ್ರ : 31. ಪ್ರತ್ಯಕ್ಷಾದಿ ಪ್ರಮಾಣಗಳಿಂದ ನಿಲುಕದ ಆತ್ಮನನ್ನು ಹೇಗೆ ತಿಳಿಯಬೇಕು ?**

ಉ : ಆತ್ಮನನ್ನು ಮತ್ತಾವುದರಿಂದಲೂ ತಿಳಿಯಲಾಗದು. ಆದುದರಿಂದ ವೇದಾಂತ ಶಾಸ್ತ್ರದೊಳಗಿನ ಬರವಣಿಗೆಗಳಿಂದಲೇ ನಿಜವಾದ ತಿಳಿವು ದೊರಕಬೇಕು. ಅವಿದ್ಯೆಗೆ ವಿದ್ಯೆಯೇ ತಕ್ಕ ಔಷಧಿಯಲ್ಲವೇ - ಇದನ್ನೇ ಈಶಾವಾಸ್ಯ ಉಪನಿಷತ್ತು "**ಅವಿದ್ಯೆಯಾ ಮೃತ್ಯುಂತೀರ್ತ್ವಾ ವಿದ್ಯಯಾ ಅಮೃತಮಶ್ನುತೇ**" ಅವಿದ್ಯೆಯಿಂದ ಮೃತ್ಯುವನ್ನು ವಿದ್ಯೆಯಿಂದ ಅಮೃತವನ್ನು ಪಡೆಯಬೇಕೆಂದು ಹೇಳುತ್ತದೆ.

ಈ ಎಲ್ಲಾ ದೃಷ್ಟಿಯಿಂದ ಶ್ರೀ ಸುರೇಶ್ವರಾಚಾರ್ಯರು ಅವಿದ್ಯೆಯನ್ನು ನಿವಾರಣೆಮಾಡುವ ಈ ವಿದ್ಯಾರೂಪಿ ನೈಷ್ಕರ್ಮಸಿದ್ಧಿಯನ್ನು ಬರೆಯಲು ಉಪಕ್ರಮಿಸುತ್ತಾರೆ.

## ಮಂಗಳಾಚರಣೆ

ಗ್ರಾಂಥಾರಂಭದಲ್ಲಿ ಮಂಗಳಾಚರಣೆ ಮಾಡುವುದು ಶಿಷ್ಟಾಚಾರ ಸಂಪ್ರದಾಯ ಏಕೆಂದರೆ "**ನಿರ್ವಿಘ್ನ ಪರಿಸಮಾಪ್ತೀಕಾಮೋ ಮಂಗಳಮಾಚರೇತ್**" ಆರಂಭಮಾಡಿದ ಕಾರ್ಯವು ನಿರ್ವಿಘ್ನವಾಗಿ ಪರಿಸಮಾಪ್ತಿ ಆಗಲು ಮಾಡುವ ದೈವಕಾರ್ಯವೇ ಮಂಗಳಾಚರಣೆ. ಈ ಶಿಷ್ಟಾಚಾರವನ್ನು ಶ್ರೀ ಸುರೇಶ್ವರಾಚಾರ್ಯರೂ ಅನುಸರಿಸಿದ್ದಾರೆ.

**ಪ್ರ : 32. ಮಂಗಳಾಚರಣೆಯಲ್ಲಿ ಎಷ್ಟು ವಿಧ ?**

ಉ : ಮಂಗಳಾಚರಣೆಯಲ್ಲಿ (೧) ವಸ್ತುನಿರ್ದೇಶರೂಪ ಮಂಗಳಾಚರಣೆ (೨) ನಮಸ್ಕಾರರೂಪ ಮಂಗಳಾಚರಣೆ (೩) ಆಶೀರ್ವಾದರೂಪ ಮಂಗಳಾಚರಣೆ ಎಂಬುದಾಗಿ ಮೂರುವಿಧ.

**ಪ್ರ : 33. ಶ್ರೀ ಸುರೇಶ್ವರಾಚಾರ್ಯರೂ ಯಾವ ಮಂಗಳಾಚರಣೆಯನ್ನು ಮಾಡಿ ತಮ್ಮ ಗ್ರಂಥವನ್ನು ಆರಂಭಮಾಡಿದ್ದಾರೆ ?**

ಉ : ವಸ್ತು ನಿರ್ದೇಶರೂಪ ಮಂಗಳವನ್ನು ಮಾಡಿ ನಂತರ ನಮಸ್ಕಾರರೂಪ ಮಂಗಳವನ್ನೂ ಮಾಡಿದ್ದಾರೆ.

**ಪ್ರ : 34. ವಸ್ತು ನಿರ್ದೇಶರೂಪ ಮಂಗಳವೆಂದರೇನು ?**

ಉ : "ವಸ್ತು" ಎಂಬ ಪದಕ್ಕೆ ತ್ರಿಕಾಲಾಬಾಧಿತವಾದ ಪದಾರ್ಥವೆಂದು ಅರ್ಥವಾಗುತ್ತದೆ. ಅಂತಾದ್ದು ಪರಬ್ರಹ್ಮ ಒಂದೆ. ಆ ಪರಬ್ರಹ್ಮವೇ ನನ್ನಸ್ವರೂಪವೆಂದು ಚಿಂತಿಸಿ ಆರಂಭಮಾಡುವ ಮಂಗಳಾಚರಣೆಗೆ ವಸ್ತು ನಿರ್ದೇಶರೂಪ ಮಂಗಳವೆನ್ನುತ್ತಾರೆ.

**ಪ್ರ : 35. ನಮಸ್ಕಾರರೂಪ ಮಂಗಳವೆಂದರೇನು ?**

ಉ : ನಮಸ್ಕಾರಕ್ಕೆ ಅರ್ಹರು ಗುರುಗಳು ಒಬ್ಬರೇ. ಪರಬ್ರಹ್ಮವು ನನ್ನ ಸ್ವರೂಪ; ಅಂತಹ ನನ್ನ ಸ್ವರೂಪ ಭೂತ ಪರಬ್ರಹ್ಮವನ್ನು ಸಾಕ್ಷಾತ್ಕಾರಮಾಡಿಕೊಟ್ಟ ಗುರುದೇವರಿಗೆ ನಮಸ್ಕಾರಮಾಡಬೇಕು. ಆದ್ದರಿಂದ ಶ್ರೀ ಸುರೇಶ್ವರಾಚಾರ್ಯರು ನಮಸ್ಕಾರರೂಪ ಮಂಗಳಾಚರಣೆಯನ್ನೂ ಮಾಡಿದ್ದಾರೆ. (ಮಂಗಳಾಚರಣೆ ವಿಷಯದಲ್ಲಿ ಇನ್ನೂ ಹೆಚ್ಚಿನ ವಿವರವನ್ನು ಅಪೇಕ್ಷಿಸುವವರು ವಿಚಾರಸಾಗರ ಮೊದಲನೆಭಾಗವನ್ನು ಅಥವಾ"ಮಂಗಳಾಚರಣೆ"ಎಂಬ ಸ್ವತಂತ್ರ ಪುಸ್ತಕದಲ್ಲಾದರೂ ನೋಡಿ ತಿಳಿದುಕೊಳ್ಳಿರಿ.)

## ವಸ್ತು ನಿರ್ದೇಶರೂಪ ಮಂಗಳಾಚರಣೆ

**ಖಾನಿಲಾಗ್ನ್ಯಬ್ಧರಿತ್ರ್ಯಂತಂಸ್ರಕ್ಫಣೀ ವೋದ್ಗತಂಯತಃ। ಧ್ವಾಂತಚ್ಛಿದೇ ನಮಸ್ತಸ್ಮೈ ಹರಯೇ ಬುದ್ಧಿ ಸಾಕ್ಷಿಣೇ ॥** ಯಾವ ಪಂಚಮಹಾಭೂತಗಳಿಂದ ರಚಿತವಾಗಿರುವ ವಿಶ್ವವೆಲ್ಲವೂ ಹೂವಿನಹಾರದ ಮೇಲೆ ತೋರುವ ಸರ್ಪದಂತೆ ಭಾಸವಾಗುತ್ತಿರುವುದೋ, ಯಾವನು ಬುದ್ಧಿ ಸಾಕ್ಷಿಯೋ ಮತ್ತುಯಾವನು ಅಜ್ಞಾನವೆಂಬ ಕತ್ತಲೆಯನ್ನು ನಿವಾರಿಸುತ್ತಾನೋ ಅಂತಹ ಹರನಿಗೆ ನಮಸ್ಕಾರವು.

**ಪ್ರ : 36. ವಿಶ್ವವೆಲ್ಲವೂ ಪಂಚಮಹಾಭೂತಗಳಿಂದ ರಚಿತವಾಗಿದೆ ಎನ್ನುತ್ತೀರಿ ಆ ಪಂಚಭೂತಗಳಾವುವು ?**

ಉ : ಆಕಾಶ, ವಾಯು, ಅಗ್ನಿ, ಜಲ ಮತ್ತು ಪೃಥ್ವಿ ಇವೇ ಆ ಪಂಚಭೂತಗಳು.

**ಪ್ರ : 37. ಈ ಪಂಚಭೂತಗಳಿಂದಲೇ ವಿಶ್ವವು ರಚಿತವಾಗಿದೆ ಎನ್ನಲು ಆಧಾರವೇನು ? ಮತ್ತು ಅನುಭವವೇನು ?**

ಉ : ಐದು ಜ್ಞಾನೇಂದ್ರಿಯಗಳಿಂದ ಮತ್ತು ಅವುಗಳ ಸ್ವತಂತ್ರ ವಾದ ಐದು ವಿಷಯಗಳಿಂದ ಈ ವಿಶ್ವವು ಭಾಸವಾಗುವದರಿಂದ ಈ ವಿಶ್ವವು ಪಂಚಭೂತಗಳಿಂದ ರಚಿತವಾಗಿದೆ ಎನ್ನುತ್ತಾರೆ. ತೈತ್ತಿರೀಯೋಪನಿಷತ್ತು ಮತ್ತು ಐತರೇಯೋಪನಿಷತ್ತುಗಳೇ ಇದಕ್ಕೆ ಪ್ರಮಾಣಗಳು.

ಇನ್ನು ಅತಿ ಪುರಾತನವಾದ ಛಾಂದೋಗ್ಯ ಉಪನಿಷತ್ತಿನಲ್ಲಿ ಜಗತ್ತಿನ ಸೃಷ್ಟಿಕ್ರಮವು ಅಗ್ನಿ ಜಲ ಪೃಥ್ವಿ ಈ ಮೂರೇ ಮೂಲದ್ರವ್ಯಗಳಿಂದ ಆಗಿದೆ ಎಂದು ಹೇಳುತ್ತದೆ.

**ಪ್ರ : 38. ಶೃತಿಗಳಲ್ಲೇ ಈ ರೀತಿ ಭಿನ್ನಾಭಿಪ್ರಾಯಗಳು ಕಂಡುಬಂದರೆ ನಾವು ಯಾವುದನ್ನು ಸರಿ ಎಂದು ಗ್ರಹಿಸಬೇಕು ?**

ಉ : ನಿಜವಾಗಿ ನೋಡಿದರೆ ಈ ಜಗತ್ತು ಹುಟ್ಟುವುದೂ ಇಲ್ಲ- ಇರುವುದೂ ಇಲ್ಲ–ಲಯವಾಗುವುದೂ ಇಲ್ಲ. ಇದಕ್ಕೆ "ಅಜಾತ"ವಾದವೆಂದು ಕರೆಯುತ್ತಾರೆ. ಆದರೆ ಈ 'ಅಜಾತ'ವಾದವು ಸಾಮಾನ್ಯ ಜನತೆಗೆ ತಿಳಿಯು ಲಾರದು. ಅಂತಹ ಸಾಮಾನ್ಯ ಜನರನ್ನು ಅವರು ತಿಳಿದುಕೊಂಡಿರುವ ಈ ಜಗತ್ತಿನ ಮೂಲಕವಾಗಿಯೇ ಆತ್ಮಸಾಕ್ಷಾತ್ಕಾರದತ್ತ ತೆಗೆದುಕೊಂಡು ಹೋಗಬೇಕು. ಅದಕ್ಕೋಸ್ಕರವಾಗಿ ಈ ಜಗತ್ತಿನ ಸೃಷ್ಟಿಯನ್ನು ಉಪನಿಷ ತ್ತುಗಳು ಕಲ್ಪನೆಮಾಡಿ ಹೇಳುತ್ತವೆ. ಪಂಚೀಕರಣವಾಗಲೀ–ತ್ರಿವೃತ್ಕರಣ ವಾಗಲೀ ಸುಳ್ಳು. ಆರಂಭದಲ್ಲಿ ಅವುಗಳನ್ನು ಕಲ್ಪಿಸಿ ಅಂತ್ಯದಲ್ಲಿ ಅವುಗಳನ್ನು ಮಿಥ್ಯವೆಂದು ತೋರಿಸುವುದೇ ವೇದಾಂತದ ಒಂದು ವೈಶಿಷ್ಟ್ಯ. ಇದನ್ನು **"ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ"** ಅಂದರೆ ಇಲ್ಲದ ಜಗತ್ತನ್ನು ಪಂಚಭೂತಗಳೋ–ಮೂರು ಭೂತಗಳಿಂದಲೋ ಸೃಷ್ಟಿಸಿ ನಂತರ ಮಿಥ್ಯಾ ಎಂದು ತೋರಿಸುತ್ತಾರೆ. ಈ ರೀತಿ ಕಾಣುವ ಜಗತ್ತಿನ

ಮೂಲಕ ಕಾಣದೆ ಇರುವ ತನ್ನ ಸ್ವರೂಪ ಪರಿಚಯಮಾಡಿಕೊಡುವ ಪದ್ಧತಿಗೆ ವೇದಾಂತಪಾರಿಭಾಷೆಯಲ್ಲಿ ತಟಸ್ಥ ಲಕ್ಷಣವೆಂದೂ ಕರೆಯುತ್ತಾರೆ.

**ಪ್ರ : 39 ಉದಾಹರಣೆಯಿಂದ ವಿವರಿಸಿರಿ.**

ಉ. ಒಂದು ಸಾರಿ ಒಬ್ಬ ರಾಜನ ಮೆರವಣಿಗೆ ಬೀದಿಯಲ್ಲಿ ಒರುತ್ತಿತ್ತು ರಾಜನು ಪ್ರಜಾವತ್ಸಲನು ಪ್ರಜೆಗಳೆಲ್ಲರೂ ಗೌರವಾರ್ಥವಾಗಿ ಪುಷ್ಪ ನಹಾರ ಹಾಕುವುದು-ಕೆಲವರು ಆರತಿ ಬೆಳಗುವುದು, ಕೆಲವರು ಫಲವಸ್ತು ಅರ್ಪಿಸುವುದು ನಡೆಯುತ್ತಿತ್ತು ಒಬ್ಬ ವೃದ್ಧನ ಅಂಗಡಿಯವನು ಮಹಾರಾಜರ ಮೆರವಣಿಗೆ ತನ್ನ ಅಂಗಡಿ ಮುಂದೆ ಬಂದಕೂಡಲೇ ಬಿರಿಸಿನಕಡ್ಡಿಯಿಂದ ಬೆಂಕಿಕಿಡಿಗಳನ್ನು ಹೊರಡಿಸುವಂತೆ ಮಾಡಿದ್ದಾನೆ ಆ ಬೆಂಕಿಕಿಡಿಗಳು ಒಂದು ಆನೆಯ ಸೊಂಡಿಲಿನಿಂದ ಬರುವಂತೆಮಾಡಿದ್ದಾನೆ ಒಬ್ಬ ಉತ್ಸವನೋಡುವವನು ಈ ಆನೆಯನ್ನು ನೋಡಿದ ಏನಯ್ಯ-ಈ ಆನೆ ಸೊಂಡಿಲಿಗೆ ಸರಿಯಾಗಿ ಕಿವಿಯಿಲ್ಲ-ತಲೆಯಿಲ್ಲ-ಕಾಲಿಗೆ ಸರಿಯಾಗಿ ಗೊರಸು ಯಿಲ್ಲ-ಬಾಲಸರಿಯಾಗಿಲ್ಲವೆಂದು ಆಕ್ಷೇಪವೆತ್ತಿದ ಆಗ ಆ ಅಂಗಡಿಕಾರ ಅಯ್ಯ ಇದು ಸುಡುವ ಆನೆ ಹೇಗಿದ್ದರೇನಂತೆ ಬಿರಿಸಿನಕಿಡಿಗಳು ಬಂದರಾಯಿತು ಎಂದನು ಹಾಗೆಯೇ ಈ ವಿಶ್ವವನ್ನು ಹೇಗೇ ಹೇಳಲಿ, ತ್ರಿವೃತ್ಕರಣದಿಂದಲೇ ಹೇಳಲಿ ಪಂಚೀಕರಣದಿಂದಲೇ ಹೇಳಲಿ ಕೊನೆಗೆ ಮಿಥ್ಯೆ ಎಂದೂ, ಇಲ್ಲವೇ ಇಲ್ಲವೆಂದು ಹೇಳಿಸಿಕೊಳ್ಳುವುದರಿಂದ ಹೇಗಿದ್ದರೇನು ? ಹೇಗೆ ವರ್ಣನೆಮಾಡಿದರೇನು ? ಇದಕ್ಕೆ ಇರುವಿಕೆಯೇ ಇಲ್ಲ. ಹಗ್ಗದಲ್ಲಿ ಭ್ರಾಂತಿಯಿಂದ ತೋರಿದ ಸರ್ಪದಂತೆ ಇದು ಭಾಸವಾಗುತ್ತದೆ. ಇದನ್ನೇ ಶಂಕರ ಭಗವತ್ಪಾದರು ತಮ್ಮ ಪ್ರಾತಃಸ್ಮರಣಸ್ತೋತ್ರದಲ್ಲಿ "ರಜ್ವಾಂಭುಜಂಗಮ ಇವಪ್ರತಿಭಾಸಿತಂವೈ" ಎಂದು ಹೇಳಿದ್ದಾರೆ ಇರುವುದು ಹಗ್ಗ, ಇರುವಂತೆ ತೋರುವುದು ಸರ್ಪ, ಹಾಗೆಯೇ, ಇರುವುದು ಅದ್ವಿತೀಯವಾದ ಆತ್ಮ, ಆತ್ಮನ ಇರುವಿಕೆಯಿಂದ ಇರುವಂತೆ ತೋರುವುದು ಈ ವಿಶ್ವ ನಿಜವಾಗಿ ನೋಡಿದರೆ ಈ ವಿಶ್ವಕ್ಕೆ ಇರುವಿಕೆಯೇ ಇಲ್ಲ ಇದೇ ಅಜಾತವಾದ-ಇದನ್ನೇ ವೇದಾಂತಿಗಳು ವಿವರ್ತವಾದವೆಂದೂ ಕರೆಯುತ್ತಾರೆ

**ಪ್ರ : 40 ಈ ಜಗತ್ತು ಉತ್ಪನ್ನವಾಯಿತು ಎಂದರೆ ಬರುವ ದೋಷವೇನು ?**

ಉ : ಉತ್ಪನ್ನವಾಯಿತು, ಎಂದರೆ ಇದನ್ನು ಹುಟ್ಟಿಸಿದವರಾರು? ಮತ್ತು ಏನನ್ನು ತೆಗೆದುಕೊಂಡು ಹುಟ್ಟಿಸಿದ ? ಯಾವಾಗ ಹುಟ್ಟಿತು ? ಏಕೆ ಹುಟ್ಟಿತು ? ಹುಟ್ಟಿಸಿದವನು ಇದನ್ನು ಹುಟ್ಟಿಸಲು ಕಾರಣವೇನು ? ಇಂಬಿವೇ ಮೊದಲಾದ ಪ್ರಶ್ನೆಗಳು ಉದ್ಭವಿಸುತ್ತವೆ. ಈ ಪ್ರಶ್ನೆಗಳಿಗೆ ಸರಿಯಾದ, ತರ್ಕಕ್ಕೆ ನಿಲ್ಲುವ ಉತ್ತರಗಳು ಎಂದೂ ದೊರೆಯಲಾರವು.

**ಪ್ರ : 41. "ಈಶ್ವರನು ಈ ವಿಶ್ವವನ್ನು ಹುಟ್ಟಿಸಿದನು"ಎಂಬಲ್ಲಿ ಬರುವ ದೋಷವೇನು ?**

ಉ : ಈಶ್ವರನು ಈ ಜಗತ್ತನ್ನು ಹುಟ್ಟಿಸಬೇಕಾದರೆ ಏನನ್ನು ತೆಗೆದುಕೊಂಡು ಈ ಜಗತ್ತನ್ನು ಹುಟ್ಟಿಸಿದಾ ? ಕುಂಬಾರನಿಗೆ ಮಡಿಕೆ ಮಾಡಲು ಮಣ್ಣು–ಚಕ್ರ–ಕೊಡತಿ ಇವೆಲ್ಲಾ ಬೇಕಲ್ಲವೆ ! ಅವಕ್ಕೆ ಕ್ರಮವಾಗಿ ಉಪಾದಾನ – ನಿಮಿತ್ತ–ಕಾರ್ಯ ಕಾರಣಗಳೆಂದು ಕರೆಯುತ್ತಾರೆ. ಇವೆಲ್ಲಾ ಸಾಮಾಗ್ರಿಗಳಿಂದ ಆ ಈಶ್ವರನು ಈ ಜಗತ್ತನ್ನು ಮಾಡಿದನೆ? ಛಾಂದೋಗ್ಯ ಉಪನಿಷತ್ತಿನಲ್ಲಿ **"ಸದೇವಸೌಮ್ಯೇದಮಗ್ರಮಾಸೀತ್ ಏಕಮೇವಾದ್ವಿತೀಯಂಬ್ರಹ್ಮ"** ಈ ನಾಮರೂಪಾತ್ಮಕ ಪದಾರ್ಥಗಳು ಕಾಣುವುದಕ್ಕೆ ಮುಂಚೆ"ಸತ್"ರೂಪದಲ್ಲಿ ಸಜಾತೀಯ, ವಿಜಾತೀಯ-ಸ್ವಗತಭೇದ ಶೂನ್ಯವಾದ ಒಂದೇ ಒಂದು ಪದಾರ್ಥ ಇತ್ತು. ಆ ಒಂದು ಪದಾರ್ಥ ತನಗೆ ಭಿನ್ನವಾದ ಯಾವ ಪದಾರ್ಥ ತೆಗೆದುಕೊಂಡು ಈ ಜಗತ್ತನ್ನು ಹುಟ್ಟಿಸಿತು !

ಮತ್ತು ಯಾವುದಾದರೊಂದು ಪದಾರ್ಥತೆಗೆದುಕೊಂಡು ಕುಂಬಾರನಂತೆ ಈ ಜಗತ್ತನ್ನು ಮಾಡಬೇಕಾದರೆ ಕುಂಬಾರನಿಗೆ ಬೇಕಾದ ಉಪಾದಾನ–ನಿಮಿತ್ತ-ಕಾರ್ಯ ಕಾರಣಗಳ ಅಗತ್ಯತೆ ಕಂಡುಬಂತು–ಆಗಲೂ ತನಗಿಂತ ಭಿನ್ನ ಪದಾರ್ಥಗಳು ಬೇಕಾದವು. ಉಪನಿಷತ್ತು ತನಗಿಂತ ಭಿನ್ನ ಪದಾರ್ಥಯಾವುದೂ ಇಲ್ಲವೆಂದು ಸ್ಪಷ್ಟವಾಗಿಯೇ ಹೇಳುತ್ತದೆ. ಈ ರೀತಿ ಜಗತ್ತಿನ ಸೃಷ್ಟಿಸಿದ್ಧವಾಗುವುದೇ ಇಲ್ಲ. ಆದ್ದರಿಂದ ಸಿದ್ಧಾಂತಿಗಳು ವಿವರ್ತವಾದವನ್ನೇ ಹೇಳುತ್ತಾರ.

**ಪ್ರ : 42. ಸಿದ್ಧಾಂತಿಗಳಲ್ಲದ ಬೇರೆಯವರು ಈ ಸೃಷ್ಟಿಯ ವಿಷಯದಲ್ಲಿ ಏನನ್ನು ಹೇಳುತ್ತಾರೆ. ?**

ಉ : ೧) ಮೀಮಾಂಸಕ ಮೊದಲಾದವರು ಈ ಜಗತ್ತು ಎಂದಿನಿಂದಲೂ ಹೀಗೆಯೇ ಇರುವುದೆಂದೂ, ಅದಕ್ಕೆ ಸೃಷ್ಟಿಯಾಗಲೀ, ಪ್ರಲಯವಾಗಲೀ ಇಲ್ಲವೇ ಇಲ್ಲವೆಂದೂ ಹೇಳುತ್ತಾರೆ.

೨) ವೈಶೇಷಿಕರು ಮೂಲಭೂತವಾದ ಪರಮಾಣುಗಳಿಂದಲೇ ಜಗತ್ತು ಹುಟ್ಟುವುದೆಂದು ಹೇಳುತ್ತಾರೆ. **ಉದಾ :** ದಾರದ ಎಳೆಗಳಿಂದ ಹುಟ್ಟುವ ವಸ್ತ್ರ. ಇಲ್ಲಿ ದಾರದ ಎಳೆಗಳೇ ಬೇರೆ–ವಸ್ತ್ರವೇ ಬೇರೆ ಎಂಬುದೇ ಅವರ ಅಭಿಮತ. ಹೀಗೆ ಒಂದು ವಸ್ತುವಿನಿಂದ ಬೇರೊಂದು ವಸ್ತು ಹುಟ್ಟುತ್ತದೆ ಎಂದು ಹೇಳುತ್ತಾರೆ. ಹಾಗೆಯೇ ಈ ಜಗತ್ತು ಹುಟ್ಟಿದೆ ಎನ್ನುತ್ತಾರೆ. ಇವರು ಮಾಡುವ ವಾದಕ್ಕೆ **"ಆರಂಭವಾದ"** ವೆಂದುಹೆಸರು.

೩) ಇನ್ನು ಮಹಾಭೂತಗಳ ಸಂಘಾತ ಅಥವಾ ಕೂಡುವಿಕೆಯಿಂದಲೇ ಜಗತ್ತಾಗಿದೆ ಎಂದು ಬೌದ್ಧರು,ಚಾರ್ವಾಕ ಮೊದಲಾದವರು ಹೇಳುತ್ತಾರೆ. ಇವರು ಮಾಡುವ ಸಿದ್ಧಾಂತಕ್ಕೆ**"ಸಂಘಾತ"**ವಾದವೆಂದು ಹೆಸರು.

೪) ಪ್ರಕೃತಿಯು ಸ್ವತಂತ್ರ ಅದು ಪರಿಣಾಮವಾಗಿ ಜಗತ್ತಾಗಿದೆ ಎಂದು ಸಾಂಖ್ಯ ಮೊದಲಾದವರ ಅಭಿಪ್ರಾಯ. ಇವರು ಮಾಡುವ ವಾದಕ್ಕೆ **"ಪರಿಣಾಮವಾದ"**ವೆಂದು ಕರೆಯುತ್ತಾರೆ. **ಉದಾ :** ಹಾಲು ಪರಿಣಾಮ ಹೊಂದಿ ಮೊಸರಾದಂತೆ - ಪ್ರಕೃತಿ ಪರಿಣಾಮ ಹೊಂದಿ ಪ್ರಪಂಚವಾಗಿದೆ ಎನ್ನುತ್ತಾರೆ.

ಈ ಮೇಲ್ಕಂಡ ಎಲ್ಲಾವಾದಗಳೂ,ಛಾಂದೋಗ್ಯ ಉಪನಿಷತ್ತಿನ ವಾಕ್ಯದಂತೆ "ಆರಂಭದಲ್ಲಿ ಮೊದಲು ಒಂದೇ ಒಂದು ಸದ್ವಸ್ತು ಇತ್ತು" ಎಂಬ ಮಾತಿನಿಂದ ಯಾವಮಾತೂ ಸಿದ್ಧವೇ ಆಗುವುದಿಲ್ಲ. ಆಗ ಪ್ರಕೃತಿಯಾಗಲಿ ಪರಮಾಣುಗಳಾಗಲಿ ಎಲ್ಲಿತ್ತು ? ಈ ಪ್ರಶ್ನೆಗೆ ಉತ್ತರ ನಿಂತು ಹೋಗುತ್ತದೆ.

**ಪ್ರ : 43. ಪರಮಾತ್ಮನು ಅಂದರೆ ಆ ಸದ್ವಸ್ತುವು "ಏಕೋಹಂಬಹುಶ್ಯಾಂ" ಎಂದು ಸಂಕಲ್ಪಮಾಡಿದ್ದರಿಂದ ಜಗತ್ತು ಸೃಷ್ಟಿಯಾಗಿದೆ ಎನ್ನಬಹುದಲ್ಲ?**

ಉ : ಸಂಕಲ್ಪಮಾಡುವುದಾವುದು ? ಮನಸ್ಸು. ಆ ಸತ್ ಪದಾರ್ಥವು ಸಂಕಲ್ಪಮಾಡಲು ಅದಕ್ಕೆ ಮನಸ್ಸು ಇದ್ದಂತಾಯಿತು. ಎಲ್ಲಿ ಮನಸ್ಸಿರುತ್ತದೆಯೋ ಅದೇ ಮನುಷ್ಯ "ಮನ ಏವಮನುಷ್ಯಾಣಾಂ" ಹಾಗಾದರೆ ಆ ಸದ್ವಸ್ತುವನ್ನು ಮನುಷ್ಯ ಎನ್ನುತ್ತೀರೋ ? ಇಲ್ಲ. ಹಾಗಾದರೆ ಮನಸ್ಸಿಲ್ಲದೆ ಹೇಗೆ ಸಂಕಲ್ಪಮಾಡಿತು ? ಮತ್ತು ಅದಕ್ಕೆ ಸಂಕಲ್ಪಮಾಡಿ ಜಗತ್ತನ್ನು ಸೃಷ್ಟಿಮಾಡುವ ಆಗತ್ಯತೆ, ಇಚ್ಛೆಯಾದರೂ ಏಕೆಬೇಕಿತ್ತು ? ಈ ಎಲ್ಲಾ ಮಾತುಗಳೂ ಸಿದ್ಧಾಂತದ ಎದುರಿಗೆ ನಿಲ್ಲಲಾರವು. ಆದ್ದರಿಂದ ಈ ಜಗತ್ತು ಸೃಷ್ಟಿಯೇ ಆಗಿಲ್ಲ–ಹಾಗೂ ಇಲ್ಲವೇ ಇಲ್ಲ. ಇರುವ ಪರಮಾತ್ಮನನ್ನು ಅರ್ಥಾತ್ ಇರುವ ತನ್ನನ್ನು ತಾನು ತಿಳಿಯದ ತಪ್ಪಿನಿಂದ-ಅಜ್ಞಾನದಿಂದ ಈ ಜಗತ್ತು ಕಾಣುತ್ತದೆ. ಅಂದರೆ ಈ ಜಗತ್ತು ಕಾಣಲು ತಾನೇ ಆಧಾರ–ಈ ಜಗತ್ತು ಬಾಳಲು ತಾನೇ ಆಶ್ರಯ-ಅಧಿಷ್ಠಾನ. ಇದೇ ವಿವರ್ತವಾದ ; ಇದೇ ವೇದಾಂತಿಗಳಿಗೆ ಸಮ್ಮತವಾದ ಮತ.

ಆರಂಭದಲ್ಲಿ ಈ ಜಗತ್ತನ್ನು ಸೃಷ್ಟಿಸಿ, ಕಲ್ಪನೆಮಾಡಿ ವೈಶೇಷಿಕರ ಆರಂಭವಾದವನ್ನು ಮುಂದೆ ಮಾಡಿಕೊಂಡು, ನಂತರ ಸಾಂಖ್ಯರ ಪರಿಣಾಮವಾದವನ್ನು ಹೇಳಿ, ನಂತರ ಈ ಜಗತ್ತು ಮಿಥ್ಯವೆಂದು ವಿವರ್ತವಾದವನ್ನೇ ಹೇಳುತ್ತಾರೆ. ಏಕೆಂದರೆ ಒಂದೇ ಸಾರಿ ವಿವರ್ತವಾದವು ತಿಳಿಯಲಾರದು ಎಂದು ಆರಂಭದಲ್ಲಿ ತಿಳಿಸಿಕೊಡಲು ಪರಿಣಾಮವಾದದಿಂದ ಪ್ರಾರಂಭಮಾಡಿ ವಿವರ್ತವಾದವನ್ನು ಸಿದ್ಧಾಂತಿಗಳು ಹೇಳಿದ್ದಾರೆ.

ಶ್ರೀ ಸುರೇಶ್ವರಾಚಾರ್ಯರು "ಪಂಚಭೌತಿಕರೂಪದಿಂದ ತೋರುತ್ತಿರುವ ಈ ಜಗತ್ತು" ಎಂದು ಹೇಳಿದ್ದಾರೆ. ಈ ಪಂಚಭೌತಿಕ ಜಗತ್ತಾದರೂ ಆತ್ಮನ ಪರಿಣಾಮವಲ್ಲ. ಹಗ್ಗದಲ್ಲಿ ಭ್ರಮೆಯಿಂದ ತೋರಿಬರುವ ಸರ್ಪವು ಹೇಗೋ, ಹಾಗೇ ಆತ್ಮನ ಮೇಲೆ ಪಂಚಭೌತಿಕ ಜಗತ್ತು ತೋರುವುದೆಂದು ಸ್ಪಷ್ಟಪಡಿಸಿದ್ದಾರೆ. ಆದ್ದರಿಂದ ಜಗತ್ತಿನ ಸೃಷ್ಟಿ ನಿಜವಾದುದಲ್ಲವೆಂದೂ ಅಜಾತವಾದವೇ ಸಿದ್ಧಾಂತಿಗಳಿಗೆ ಸಮ್ಮತವಾದುದು. ಇಲ್ಲಿ ಅಜ್ಞಾನಿ ಜನಗಳಿಗೆ ಜಗತ್ತು ಕಾಣುವುದೆಂಬ ಕಾರಣದಿಂದ ಅದರ ಉತ್ಪತ್ತಿಯನ್ನು ಮಂದಮತಿಗಳಿಗಾಗಿ ಹೇಳಿಕೊಡಬೇಕಾಗುವುದು. ಆದುದರಿಂದ

ಆತ್ಮವೇ ಸದ್ವಸ್ತುವು, ಆ ಸದ್ವಸ್ತುವು ಅಜ್ಞಾನಿಗಳ ಅಜ್ಞಾನದಿಂದ ಜಗತ್ತಾಗಿ ತೋರುತ್ತದೆ ಎಂದು ವಿವರ್ತವಾದಿಗಳು ಹೇಳುತ್ತಾರೆ.

ಆತ್ಮನನ್ನು ಆತ್ಮನನ್ನಾಗಿ ತಿಳಿಯದಿರುವ ಅಜ್ಞಾನದಿಂದ ಆತ್ಮನೇ ಜಗತ್ತಾಗಿ ಕಾಣುತ್ತಾನೆ ಮತ್ತು ಆ ಆತ್ಮನೇ ಕಲ್ಪಿತ ಬುದ್ಧಿಗೂ ಸಾಕ್ಷಿಯಾಗಿದ್ದಾನೆ - ಮತ್ತು ಆ ಆತ್ಮನೇ ನಾನೆಂಬ ತಿಳುವಳಿಕೆಯಿಂದ ಜಗತ್ಸಂಬಂಧ ಅಜ್ಞಾನ ನಿವಾರಣೆಯಾಗುತ್ತದೆ ಅಂತಹ ಅಜ್ಞಾನ ನಿವಾರಣೆಮಾಡುವ ಆತ್ಮಸ್ವರೂಪ ಹರನಿಗೆ ಆರಂಭದಲ್ಲಿ ನಮಸ್ಕರಿಸುತ್ತಾರೆ "ಆ ಹರನೇ ತಾನು" ಎಂಬುದೇ ಅವರ ಮಂಗಳಾಚರಣೆಯ ಮೂಲ ಉದ್ದೇಶ ಅಂದರೆ ಸುರೇಶ್ವರರು "ತಮ್ಮ" ಮಂಗಳಾಚರಣೆಯನ್ನೇ ಮಾಡಿಕೊಂಡರು ಇದಕ್ಕೆ ನಿರ್ಗುಣ ಪರಬ್ರಹ್ಮವಸ್ತು ನಿರ್ದೇಶರೂಪ ಮಂಗಳಾಚರಣೆ ಎನ್ನುತ್ತಾರೆ

## ನಮಸ್ಕಾರರೂಪ ಮಂಗಳಾಚರಣೆ

**ಪ್ರ : 44 ನಮಸ್ಕಾರವನ್ನು ಯಾರಿಗೆ ಮಾಡಬೇಕು ?**

ಉ ನಿಜವಾಗಿ ನಮಸ್ಕಾರಕ್ಕೆ ಅರ್ಹರು ಗುರುಗಳೊಬ್ಬರೇ, ದೇವರಲ್ಲ–ದೇವರು ಅದೃಷ್ಟ ಫಲಕೊಡಬಲ್ಲ-ಗುರುಗಳು ಅದೃಷ್ಟ ಫಲವನ್ನೂ ದೃಷ್ಟಫಲವನ್ನೂ ಕೊಡಬಲ್ಲರು

**ಪ್ರ : 45 ಗುರುಗಳಿಗೆ ಏಕೆ ನಮಸ್ಕರಿಸಬೇಕು ?**

ಉ ಮಳೆಯಿಂದ ಬಿದ್ದ ನೀರು ಪುನಃ ತನ್ನ ಸ್ವರೂಪವೇ ಆದ ಸಮುದ್ರವನ್ನು ನೇರಬೇಕಾದರೆ ಯಾವುದಾದರೊಂದು ಸಮುದ್ರವನ್ನು ಸೇರುವ ಜೀವನದಿಯ ಸಂಗಮಾಡಲೇ ಬೇಕಲ್ಲವೆ ! ಅದರಂತೆ ಪರಮಾತ್ಮನಿಂದ ಬಂದ ಈ ಜೀವನು ಪುನಃ ತನ್ನ ಸ್ವರೂಪವೇ ಆದ ಪರಮಾತ್ಮನನ್ನು ನೇರಲು ನದಿರೂಪ ಗುರುಪರಂಪರೆಯನ್ನು ನೇರಲೇಬೇಕು. ಯಾರೇ ಆಗಲಿ ಎಲ್ಲಾ ಶಾಸ್ತ್ರಗಳನ್ನು ಬಲ್ಲ ಪಂಡಿತನಾಗಿರಲಿ, ಸತ್ ಸಂಪ್ರದಾಯ ಪೂರ್ವಕವಾಗಿ ಅರಿತುಕೊಂಡವನಾಗಿರದಿದ್ದರೆ, ಅವನು ಮೂರ್ಖನ ಹಾಗೆ ಉಪೇಕ್ಷಣೀಯನು ಇದೇ ವಿಷಯವನ್ನು ಗೀತಾ ೧೩ ನೇ ಅಧ್ಯಾಯದ ೨ ನೇ ಶ್ಲೋಕದ ಶಂಕರಭಾಷ್ಯದಲ್ಲಿ **"ಶಾಸ್ತ್ರಾರ್ಥ ಸಂಪ್ರದಾಯರಹಿತತ್ವಾತ್ ಶ್ರುತಹಾನಿಮ್ ಅಶ್ರುತ ಕಲ್ಪನಾಂಚ ಕುರ್ವನ್‌ತಸ್ಮಾತ್ ಅಸಂ**

**ಪ್ರದಾಯವಿತ್ ಸರ್ವಶಾಸ್ತ್ರವಿದಪಿ ಮೂರ್ಖವದೇವ ಉಪೇಕ್ಷಣೀಯಃ ॥** ಶಾಸ್ತ್ರಕ್ಕೆ ಅರ್ಥವನ್ನು ತಿಳಿದುಕೊಳ್ಳುವ ಸಂಪ್ರದಾಯವೇ ಇಲ್ಲದ್ದರಿಂದ ಅಂದರೆ ಗುರುಮುಖೇಣ ಅಧ್ಯಯನ ಸಾಗದೆ ಇರುವುದರಿಂದ 'ಶ್ರುತಹಾನಿ' ಎಂದರೆ ಹೇಳಿರುವುದನ್ನು ಬಿಡುವುದು, ಮತ್ತು ಹೇಳದೆ ಇರುವುದನ್ನು ಕಲ್ಪಿಸುವುದು ಅಂದರೆ ಅನುಭವಿಗಳಿಂದ (ಗುರು ಮುಖೇಣ) ಶಾಸ್ತ್ರಾರ್ಥವನ್ನು ಪಡೆದರೆ ಸಂಪ್ರದಾಯವನ್ನು ಬಲ್ಲವನಾಗುವನು. ಗುರುಮುಖೇಣ ಶಾಸ್ತ್ರಾರ್ಥವನ್ನು ಶ್ರುತಿತಾತ್ಪರ್ಯವನ್ನು ತಿಳಿಯದವನು ಅಂದರೆ ಅಶಾಸ್ತ್ರಸಂಪ್ರದಾಯದವನು ತಾನೂ ಮೂಢನಾಗಿ ಮಿಕ್ಕವರನ್ನು ಮರುಳುಗೊಳಿಸುವನು. ಆದ್ದರಿಂದ ಸಂಪ್ರದಾಯದ ಮೂಲಕ ಶಾಸ್ತ್ರಾರ್ಥವನ್ನು ತಿಳಿಯದವನು ಸರ್ವಶಾಸ್ತ್ರಾರ್ಥಗಳನ್ನು ಬಲ್ಲವನಾಗಿದ್ದರೂ ಅವನನ್ನು ಮೂರ್ಖನಂತೆ ಉಪೇಕ್ಷಣೆಮಾಡಬೇಕು ಎಂಬುದಾಗಿ ಹೇಳಿದ್ದಾರೆ. ಮತ್ತು ಮುಂಡಕೋಪನಿಷತ್ತಿನ ೧-೨-೧೨ ನೇ ಮಂತ್ರದ ಭಾಷ್ಯದಲ್ಲಿಯೂ ಸಹ ಶಂಕರರು "ಶಾಸ್ತ್ರಜ್ಞನಾಗಿದ್ದರೂ ಕೂಡ-ಸ್ವತಂತ್ರವಾಗಿ ಗುರುವಿಲ್ಲದೆ ಬ್ರಹ್ಮಜ್ಞಾನವನ್ನು ಮಾಡಿಕೊಳ್ಳುವ ಯತ್ನ ಮಾಡಬಾರದು" ಎಂದು ಹೇಳಿದ್ದಾರೆ. ಭಗವದ್ಗೀತೆಯ 4 ನೇ ಅಧ್ಯಾಯದ 34 ನೇ ಶ್ಲೋಕದಲ್ಲಿ ಭಗವಂತನು "**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ । ಉಪದೇಕ್ಷ್ಯಂತಿತೇಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥** ಶ್ರೋತ್ರಿಯ ಬ್ರಹ್ಮನಿಷ್ಠರಾದಗುರುಗಳುಮಾತ್ರ ಶ್ರುತಿತಾತ್ಪರ್ಯವನ್ನು ಉಪದೇಶ ಮಾಡಬಲ್ಲರು. ಅವರನ್ನು ಆಶ್ರಯಿಸಿ ಸೇವೆಮಾಡಿ ವಿನಯದಿಂದ ಪ್ರಶ್ನೆಮಾಡಿ ಅದನ್ನು ತಿಳಿದುಕೋ" ಎಂಬುದಾಗಿ ಹೇಳಿದ್ದಾನೆ.

ಆದ್ದರಿಂದ ಸಂಪ್ರದಾಯವೆಂದರೆ ಗುರುಪರಂಪರೆ. ಆ ಗುರು ಪರಂಪರೆಯು, ಆ ತಮ್ಮ ಸಂಪ್ರದಾಯವು ವೇದದಲ್ಲಿ ಹೇಳಿದಂತೆ ಸತ್ ಗುರು ಪರಂಪರೆಯಿಂದಲೇ ಬಂದಿರುವುದೆಂಬುದನ್ನು ಶ್ರೀ ಸುರೇಶ್ವರಾಚಾರ್ಯರು ತೋರಿಸಿಕೊಡುತ್ತಾರೆ. ಏಕೆಂದರೆ ಗುರು ಪರಂಪರೆಯೂ ಅನೇಕ ಇವೆ (೧) ಶ್ರುತಿ ತಾತ್ಪರ್ಯಕ್ಕೆ ವಿರುದ್ಧಾರ್ಥವನ್ನು ಬೋಧಿಸುವ ಸಂಪ್ರದಾಯವಾಗಿರಬಾರದು; (೨) ಮೊದಲೇ ನಮಗೆ ತಿಳಿದಿರುವ ವಿಷಯವನ್ನು ಬೋಧಿಸುವ ಸಂಪ್ರದಾಯವಾಗಿರಬಾರದು (೩) ಅದು ಅಸಂಸ್ಕೃತವಾಗಿ

ಸಾಮಾನ್ಯ ಜನರೂ ಅಸಹ್ಯಪಡುವಂತಹ ಆಚರಣೆ ಇರುವ ಸಂಪ್ರದಾಯ ವಾಗಿರಬಾರದು. (೪) ಎಲ್ಲೆಲ್ಲಿಯೂ ಎಲ್ಲಾಕಡೆಯೂ ಪ್ರಚಾರಮಾಡಿದರೂ ಅದು ಪುಟಕಿಟ್ಟ ಬಂಗಾರದಂತೆ ಪ್ರಕಾಶಮಾನವಾಗಬೇಕು. (೫) ಯಾರೂಕೇಳಬಾರದು, ರಹಸ್ಯವೆಂದು ಕೆಲವರಿಗೆ ಮಾತ್ರ 4 ಗೋಡೆಮಧ್ಯದಲ್ಲಿ ಹೇಳುವ ಅನಿಷ್ಟವಾದ ಹೀನಾಯವಾದ ಸಂಪ್ರದಾಯವಾಗಿರ ಬಾರದು. (೬) ಒಟ್ಟಿಗೆ ಅದು ಶ್ರುತಿ ಸಮ್ಮತವಾಗಿದ್ದು ದುಃಖನಿವೃತ್ತಿ ಆನಂದ ಪ್ರಾಪ್ತಿ ಮಾಡಿಕೊಡುವ ಸಂಪ್ರದಾಯ ವಾಗಿರಬೇಕು.

ಯಾರೇ ಆಗಲಿ ತನ್ನ ಜನ್ಮಸಾರ್ಥಕ ಮಾಡಿಕೊಳ್ಳಬೇಕೆಂದು ಬಯಸುವವನು ಉತ್ತಮ ಸಂಪ್ರದಾಯದಲ್ಲಿ ಸೇರಿ ಮಾಂಸಮಯ ಶರೀರವನ್ನು ಮಂತ್ರಮಯ ಮಾಡಿಕೊಂಡು ಶಾಸ್ತ್ರಾರ್ಥವನ್ನು ಶ್ರವಣಮಾಡಿ - ಮನನ ಮಾಡಿ–ನಿದಿಧ್ಯಾಸಮಾಡಿ 'ತತ್ತ್ವಮಸಿ' ಮಹಾವಾಕ್ಯವನ್ನು ಶ್ರೀ ಗುರುವಿನ ಶ್ರೀ ಮುಖದಿಂದ ಕೇಳಿ ತನ್ನ ಶ್ರೋತ್ರಕ್ಕೆ ಸಂಬಂಧಪಡಿಸಿಕೊಂಡ ಕೂಡಲೇ ಆತ್ಮ ಸಾಕ್ಷಾತ್ಕಾರ ಪಡೆದು ಮುಕ್ತನಾಗಬೇಕು. ಇದೇ ಉತ್ತಮ ಗುರು ಪರಂಪರೆಯ ಲಕ್ಷಣ.

ಶ್ರೀ ಸುರೇಶ್ವರಾಚಾರ್ಯರು ತಮ್ಮ ಉತ್ತಮವಾದ ಗುರು ಪರಂಪರೆಯನ್ನು ಸ್ಮರಿಸಿ ಶ್ರೀ ಗುರುವಿನ ಶ್ರೇಷ್ಟಗುಣಗಳನ್ನು ವರ್ಣಿಸಿ ಅವರ ಪಾದ ಕಮಲಗಳಲ್ಲಿ ನಮಸ್ಕಾರರೂಪ ಮಂಗಳಾಚರಣೆಯನ್ನು ಮಾಡುತ್ತಾರೆ.

ಸರ್ವ ಸದ್ಗುಣಗಳು ಶ್ರೇಷ್ಟರಲ್ಲಿಯೇ ನೆಲಸಿರುತ್ತವೆ. ಆ ಎಲ್ಲಾ ಸದ್ಗುಣಗಳು ಯಾರಾದರೂ ಅತಿಶ್ರೇಷ್ಠರಿದ್ದಾರೆನೋ ಎಂದು ಎಲ್ಲಾಕಡೆ ತಿರುಗಿ ಹುಡುಕಿ ನಮ್ಮ ಗುರುವಿಗಿಂತಲೂ ಶ್ರೇಷ್ಠರಾದವರು ಯಾರೂ ಸಿಕ್ಕದೇ ಇದ್ದುದರಿಂದ ನಮ್ಮ ಗುರುದೇವರಲ್ಲಿಗೇ ಬಂದು ನೆಲಸಿ ನಿಂತವೋ; ಮತ್ತು ಯಾವ ನನ್ನ ಸದ್ಗುರುವು ಅನಾದಿಕಾಲದಿಂದ ಗಂಟುಬಿದ್ದಿದ್ದ ಚಿಜ್ಜಡ ಗ್ರಂಥಿ (ಅಜ್ಞಾನ)ವನ್ನು ಒಂದೇ ಸಾರಿಗೆ ಕತ್ತರಿಸಿಬಿಟ್ಟನೋ ಅಂತಹ ಶ್ರೇಷ್ಠರಲ್ಲಿ ಶ್ರೇಷ್ಠವಾದ ನನ್ನ ಶಂಕರ ಸದ್ಗುರುವಿಗೆ ನಮಸ್ಕಾರವು"

# ಅನುಬಂಧ ಚತುಷ್ಟಯ

**ಪ್ರ : 46. ಅನುಬಂಧ ವೆಂದರೇನು ?**

ಉ : ಅನುಬಂಧ ವೆಂದರೆ ಅನುಸರಿಸುವುದು.

**ಪ್ರ : 47. ಅನುಬಂಧ ಚತುಷ್ಟಯಗಳು ಯಾವುವು ?**

ಉ : 1) ವಿಷಯ 2) ಸಂಬಂಧ 3) ಪ್ರಯೋಜನ ಮತ್ತು ಅಧಿಕಾರಿ ಇವೇ ಅನುಬಂಧ ಚತುಷ್ಟಯಗಳು.

ವೇದಾಂತ ಗ್ರಂಥಗಳ ಪ್ರಾರಂಭದಲ್ಲಿ ಈ ನಾಲ್ಕನ್ನು ಹೇಳಿಕೊಡುವ ವಾಡಿಕೆ ಇದೆ. ಇದಕ್ಕೆ ಅನುಬಂಧ ಚತುಷ್ಟಯವೆಂದು ಹೆಸರು.

**ಪ್ರ : 48. ಅನುಬಂಧ ಚತುಷ್ಟಯದಲ್ಲಿ ಏನು ಹೇಳಿದ್ದಾರೆ ?**

ಉ : ಈ ನಾಲ್ಕು ಅಂಗಗಳಿಂದ ಗ್ರಂಥಕರ್ತೃವಿನ ಉದ್ದೇಶ, ಅದನ್ನು ಅವನು ಯಾರಿಗಾಗಿ ಬರೆದಿದ್ದಾನೆ. ಅದನ್ನು ಯಾವ ಯೋಗ್ಯತೆ ಯವರು ಓದಬೇಕು, ಅದನ್ನು ಓದುವುದರಿಂದ ಆಗುವ ಲಾಭವೇನು ? ಎಂಬಿವೇ ಮೊದಲಾದ ವಿವರಗಳು ತಿಳಿಸಿ ಹೇಳಲ್ಪಡುತ್ತವೆ. ಈಗಿನ ಕಾಲದ ಪ್ರಸ್ತಾವನೆ, ಮುನ್ನುಡಿ, ನಿವೇದನೆಗೆ ಬದಲಾಗಿ ಪ್ರಾಚೀನ ಕಾಲದಲ್ಲಿ ಅನು ಬಂಧ ಚತುಷ್ಟಯ ರೂಪದಲ್ಲಿ ಬರೆಯುತ್ತಿದ್ದರು.

ಈಗಲೂ ವ್ಯವಹಾರದಲ್ಲೂ ಅನುಬಂಧಗಳಿರುತ್ತವೆ. ೧) ಅಧಿಕಾರಿ:- ಊಟಕ್ಕೆ ಅಧಿಕಾರಿ ಯಾರು ? ಹಸಿದವನು. ೨) ವಿಷಯ :- ಊಟವೇ ವಿಷಯ. ೩) ಸಂಬಂಧ : ಊಟಕ್ಕೆ ಬಡಿಸುವುದು, ಊಟ ಮಾಡುವುದೇ ಸಂಬಂಧ. ೪) ಪ್ರಯೋಜನ : ಹೊಟ್ಟೆ ತುಂಬುವುದೇ ಪ್ರಯೋಜನ.

ಹಾಗೆಯೇ ವೇದಾಂತ ಗ್ರಂಥಗಳ ಅನುಬಂಧ ಚತುಷ್ಟಯವೂ ಇರು ತ್ತದೆ.

೧) **ಅಧಿಕಾರಿ :** ಸಾಧನ ಚತುಷ್ಟಯ ಸಂಪನ್ನನಾದವನೇ ಅಧಿ ಕಾರಿಯು

೨) **ವಿಷಯ :** ಬ್ರಹ್ಮ ಮತ್ತು ಪ್ರತ್ಯಗಾತ್ಮರ ಸ್ವರೂಪವನ್ನು ವಿವರಿಸಿ, ಅವೆರಡೂ ಒಂದೇ ಎಂದು ತೋರಿಸುವುದೇ ಈ ಗ್ರಂಥದ ವಿಷಯ.

೩) **ಸಂಬಂಧ :** ಬ್ರಹ್ಮ-ಆತ್ಮರ ಏಕತ್ವಜ್ಞಾನವನ್ನು ಬೋಧಿಸುವ ಗ್ರಂಥಕ್ಕೂ ಜಿಜ್ಞಾಸುವಿಗೂ ಇರುವ ಬೋಧ್ಯ ಬೋಧಕ ಭಾವಸಂಬಂಧವೇ ಈ ಗ್ರಂಥಕ್ಕೂ ಜಿಜ್ಞಾಸುವಿಗೂ ಇರುವ ಸಂಬಂಧ.

೪) ಸರ್ವ ದುಃಖಗಳ ಆತ್ಯಾಂತಿಕ ನಿವೃತ್ತಿ ಪರಮಾನಂದ ಪ್ರಾಪ್ತಿ ರೂಪ ಮೋಕ್ಷವೇ ಪ್ರಯೋಜನ.

## ನೈಷ್ಕರ್ಮ್ಯಸಿದ್ಧಿಯ ಅನುಬಂಧಗಳು

"ಆತ್ಮಜ್ಞಾನವೇ ನಿಜವಾದ ಸಂಸಾರ ಅರ್ಥಾತ್ ಅನರ್ಥ ನಿವೃತ್ತಿಯು. ಆತ್ಮಜ್ಞಾನವು ವೇದಾಂತದ ಹೊಟ್ಟೆಯಲ್ಲಿ ಮುಚ್ಚಿಕೊಂಡಿದ್ದರೂ ಅದನ್ನು ಇಲ್ಲಿಯವರೆಗೆ ಅನೇಕ ಜನರು ಪ್ರಕಾಶ ಪಡಿಸಿದ್ದರೂ, ಶ್ರೀಗುರುವಿನ ಆಜ್ಞೆಯಾಗಿರುವುದರಿಂದ ನಾನೂ ಆ ಆತ್ಮಜ್ಞಾನವನ್ನೇ ಈ ನೈಷ್ಕರ್ಮ್ಯಸಿದ್ಧಿಯಲ್ಲಿ ಬಿಚ್ಚಿ ಹೇಳುತ್ತೇನೆ". ಇದೇ ಈ ನೈಷ್ಕರ್ಮ್ಯಸಿದ್ಧಿಗೆ-ವಿಷಯ.

ಯಾವುದು ಸತ್ಯವೆಂದು ನಿಶ್ಚಯವಾದರೆ ಮಾತ್ರ ಈ ದೃಶ್ಯವೂ, ಅನಾತ್ಮವೂ ಆದ ಜಗತ್ತು ಸಿದ್ಧವಾಗುತ್ತದೆಯೋ, ಯಾವುದು ಸಿದ್ಧವಾಗದೆ ಹೋದರೆ ಇದಂ ರೂಪದಲ್ಲಿ ಕಾಣುವ ಈ ದೃಶ್ಯ ರೂಪವಾದ ಜಗತ್ತು ಸಿದ್ಧವಾಗುವುದೇ ಇಲ್ಲವೋ, ಯಾವುದು ಸರ್ವಕ್ಕೂ ಸಾಕ್ಷಿಯಾಗಿರುವುದೋ ಅಂತಹ ವಸ್ತುವಿನ ಅಂದರೆ ಕೂಟಸ್ಥ ಸಾಕ್ಷಿ ಆತ್ಮನ ನಿಜವಾದ ಭಾವವು ಈ ಗ್ರಂಥದಲ್ಲಿ ವರ್ಣಿಸಲ್ಪಟ್ಟಿದೆ.

**ಪೂರ್ವ ಪಕ್ಷಿ :** ಆತ್ಮಜ್ಞಾನವನ್ನು ನಿಮ್ಮ ಗುರುವು ಹೇಳಿಕೊಟ್ಟಿರುವನೋ ? ಇಲ್ಲವೋ ? ಹೇಳಿದ್ದಾನೆಂದು ತಿಳಿದರೆ ಸರಿಯಾಗಿ ಹೇಳಿರುವನೋ ? ತಪ್ಪಾಗಿ ಹೇಳಿರುವನೋ ? ಸರಿಯಾಗಿ ಹೇಳಿದ್ದರೆ ನೀವು ಪುನಃ ಅದನ್ನೇ ಹೇಳುವ ಅಗತ್ಯತೆಯಾದರೂ ಏನಿದೆ ? ಆದರೂ ಈ ಗ್ರಂಥ ಬರೆಯಲು ಪ್ರಾರಂಭ ಮಾಡಿದ್ದೀರಿ. ಎಂದ ಮೇಲೆ ನಿಮ್ಮ ಗುರುಗಳು ಆತ್ಮಜ್ಞಾನವನ್ನು ಸರಿಯಾಗಿ ಹೇಳಿರಲಾರರು ? ಆತ್ಮಜ್ಞಾನವನ್ನು ಸರಿಯಾಗಿ

ಹೇಳದ ಗುರುವು ಗುರುವೆಂದು ಹೇಗೆ ಹೇಳಿಸಿಕೊಂಡಾನು ? ಮತ್ತು ಗುರುವಾಗಲಿಕ್ಕೇ ಅನರ್ಹನಾದವನಿಂದ ಪ್ರಾಪ್ತಿ ಮಾಡಿಕೊಂಡ ನಿಮ್ಮ ಜ್ಞಾನವಾದರೂ ಸರಿಯಾಗಿಯೇ ಇದೆ ಎಂದು ಹೇಗೆ ನಿರ್ಣಯಮಾಡಿಕೊಳ್ಳಲಿ. ?

**ಸಮಾಧಾನ :** ನಮ್ಮ ಗುರುವು ಆತ್ಮಜ್ಞಾನಿಯೇ, ಅವರು ಎಲ್ಲವನ್ನೂ ಹೇಳಿಬಿಟ್ಟಿದ್ದಾರೆ. ಮತ್ತೂ ನನ್ನ ಅಜ್ಞಾನವನ್ನೂ ನಾಶಮಾಡಿದ್ದಾರೆ. ನಿಮ್ಮ ಆಕ್ಷೇಪಣೆಯಿಂದ ನಮ್ಮ ಗುರುಗಳ ಮಹತ್ವವೇನೂ ಕಡಿಮೆಯಾಗುವುದಿಲ್ಲ. ಆದರಿಂದ ಅವರ ಮಹತ್ವ ಮತ್ತಷ್ಟು ಹೆಚ್ಚಾಗುತ್ತದೆ.

ನಮ್ಮ ಗುರುಗಳು ವೇದಾಂತಗಳನ್ನೆಲ್ಲಾ ಪೂರ್ಣವಾಗಿ ಹೇಳಿಬಿಟ್ಟಿರುವರು. ಅಶಕ್ತನಾದ ನಾನು ಆ ಬಗ್ಗೆ ಹೆಚ್ಚಿನದನ್ನೇನೂ ಹೇಳಲಾರೆ. ಅವರು ಸಾವಿರಾರು ಕಿರಣಗಳುಳ್ಳ ಸೂರ್ಯರು. ಅವರ ಕಿರಣ ಎಲ್ಲೆಲ್ಲಿಯೂ ವ್ಯಾಪಿಸಿದೆ. ನಾನಾದರೋ ಬಡ ದೀಪದ ಹುಳು. ಅದುಏನನ್ನು ಬೆಳಗೀತು !

**ಪ್ರ: 49. ನಿಮ್ಮ ಮಾತಿನಂತೆ ವೇದಾಂತ ಸಿದ್ಧಾಂತವನ್ನೇಲ್ಲಾ ನಿಮ್ಮ ಗುರುಗಳೇ ಪೂರ್ಣ ಹೇಳಿಬಿಟ್ಟಿದ್ದಾರೆ ಎಂದ ಮೇಲೆ ನೀವು ಪುನಃ ಅದನ್ನೇ ಹೇಳುವ ಅಗತ್ಯತೆಯಾದರೂ ಏನಿದೆ ? ಹಾಗಾದಲ್ಲಿ ಈ ನಿಮ್ಮ ಪುಸ್ತಕವು ಕೀರ್ತಿ ಪ್ರತಿಷ್ಠೆಗಳ ಆಸೆಯಿಂದ ಬರೆಯಲ್ಪಟ್ಟಿರಬೇಕು ! ಈ ರೀತಿ ಯಾವುದೋ ಕಾಮನೆ ಇಟ್ಟುಕೊಂಡು ಬರೆಯಲ್ಪಟ್ಟಿರುವ ನಿಮ್ಮ ಈ ಪುಸ್ತಕವು ಮಹತ್ವಪೂರ್ಣವಾದುದಾಗಲಾರದು.**

ಉ : ಈ ರೀತಿ ಕೀರ್ತಿ ಪ್ರತಿಷ್ಠೆಗಳಿಗಾಗಿ-ಹಣ ಇತ್ಯಾದಿ ಗಳಿಸುವುದಕ್ಕಾಗಿ, ಮಾನ ಮರ್ಯಾದೆಗಳಿಗಾಗಿ ಈ ಗ್ರಂಥವನ್ನು ಬರೆದಿರುವುದಿಲ್ಲ. ಬ್ರಹ್ಮ ಜ್ಞಾನಿಗಳೆಂಬ ಒರೆಗಲ್ಲಿಗೆ ತಿಕ್ಕಿ ನಮ್ಮ ಆತ್ಮಜ್ಞಾನವು ಚನ್ನಾಗಿ ತಿಳಿಯಾಗಬೇಕೆಂಬ ಉದ್ದೇಶದಿಂದ ಅದರ ಸತ್ಯಾಸತ್ಯತೆಯ ನಿರ್ಣಯವು ಬ್ರಹ್ಮಜ್ಞಾನಿಗಳಿಂದ ನಿರ್ಣಯವಾಗಲೆಂದೂ, ನನ್ನ ಜ್ಞಾನವು ಸಟಿಯೋ ದಿಟವೋ ಎಂಬುದನ್ನು ಬ್ರಹ್ಮಜ್ಞಾನಿಗಳಿಂದ ತಿಳಿದುಕೊಳ್ಳುವುದಕ್ಕಾಗಿ ನಾನೀ ಪರೀಕ್ಷೆಯನ್ನು ಕೊಡುತ್ತಿರುತ್ತೇನೆಯೇ ವಿನಃ ಬೇರೆ ಯಾವ ಉದ್ದೇಶವೂ ಇಲ್ಲ.

**ಪ್ರ : 50. ಈ ಗ್ರಂಥ ಅಧ್ಯಯನದಿಂದ ಪ್ರಯೋಜನವೇನು?**

ಉ : (೧) ಸಂಸಾರ ವೆಂಬುದೇ ಅನರ್ಥವು. (೨) ಅದ್ವಿತೀಯ ಆತ್ಮತತ್ತ್ವದ ಅಜ್ಞಾನವೇ ಅದರ ಕಾರಣ ಅಂದರೆ ಸಂಸಾರದ ಬೀಜವು, ಅದನ್ನೇ ಅವಿದ್ಯೆ ಎಂದು ಕರೆಯುತ್ತಾರೆ. ಚಿದ್ರೂಪನಾದ ಆತ್ಮನೇ ಅದಕ್ಕೆ ಆಶ್ರಯನು. (೩) ಸರ್ವ ಅನರ್ಥಗಳ ನಿವೃತ್ತಿ ಅಂದರೆ ಸಂಸಾರಕ್ಕೆ ಕಾರಣವಾದ ಅಜ್ಞಾನದ ನಿವೃತ್ತಿ ಮತ್ತು ಪರಮಾನಂದ ಪ್ರಾಪ್ತಿರೂಪ ಪರಮಪುರುಷಾರ್ಥವಾದ ಮೋಕ್ಷವೇ ಇದರ ಪ್ರಯೋಜನ. (೪) ಆ ಪರಮಪುರುಷಾರ್ಥವು ವೇದಾಂತ ವಾಕ್ಯಗಳಿಂದಲೇ ಹುಟ್ಟುವುದು. ಅದೇ ನಿಜವಾದಜ್ಞಾನ. ಚನ್ನಾಗಿ ಜೋಡಿಸಿದ ಕಟ್ಟಿಗೆಗಳನ್ನು ಬೆಂಕಿಯು ಯಾವ ರೀತಿ ಸುಟ್ಟು ಬೂದಿ ಮಾಡಬಲ್ಲದೋ ಹಾಗೆಯೇ ಈ ಜ್ಞಾನಾಗ್ನಿಯು ಮೋಹ-ತಪ್ಪುತಿಳುವಳಿಕೆ-ಅಜ್ಞಾನವನ್ನು ಸುಟ್ಟು ಬೂದಿ ಮಾಡುತ್ತದೆ.

**ಪ್ರ : 51. ಜ್ಞಾನಾಗ್ನಿಯು ಅಜ್ಞಾನವನ್ನು ಹೇಗೆ ಸುಡುತ್ತದೆ? ಕರ್ಮದಿಂದ ಅದನ್ನು ಸುಡಲಾಗುವುದಿಲ್ಲವೇ ?**

ಉ : ಕಾರ್ಯವು ತನ್ನ ಕಾರಣವನ್ನು ಯಾವ ರೀತಿಯಿಂದಲೂ ಭಂಗಮಾಡಲಾರದು. ಕಾರ್ಯವಾದ ಮೇಜು ತನ್ನ ಕಾರಣವಾದ ಮರವನ್ನು ಸುಡಬಲ್ಲದೇ ! ಕಾರ್ಯವಾದ ಗಡಿಗೆಯು ತನ್ನ ಕಾರಣವಾದ ಮಣ್ಣನ್ನು ಸುಡಬಲ್ಲದೆ ? ಕಾರ್ಯವಾದ ಆಭರಣವು ತನ್ನ ಕಾರಣವಾದ ಬಂಗಾರವನ್ನು ನಾಶಮಾಡಬಲ್ಲದೆ ! ಹಾಗೆಯೇ ಕಾರ್ಯವಾದ ಕರ್ಮವು ತನ್ನ ಕಾರಣವಾದ ಅಜ್ಞಾನವನ್ನು ಸುಡಲಾರದು. ಕರ್ಮವೂ ಕಾರ್ಯವೇ ಅದಕ್ಕೂ ಅಜ್ಞಾನವೇ ಕಾರಣ. ಎಣ್ಣೆಯನ್ನು ಎಣ್ಣೆಯಿಂದ ನಿವಾರಿಸಿ ಕೊಳ್ಳಲಾಗುವುದಿಲ್ಲ. ಅದಕ್ಕೆ ವೈರಿಯಾದ ಸೀಗೇಪುಡಿಯಿಂದಲೇ ನಿವಾರಿಸಿ ಕೊಳ್ಳಬೇಕು.

ಆದ್ದರಿಂದ ಸರ್ವಕ್ಕೂ ಕಾರಣವಾದ ಅಜ್ಞಾನವನ್ನು ಅದಕ್ಕೆ ವೈರಿಯಾದ ಜ್ಞಾನಮಾತ್ರ ಸುಟ್ಟು ಬೂದಿ ಮಾಡಬಲ್ಲದು. ಇದನ್ನೇ ಭಗವಂತನು ಗೀತಾ ೪ ನೇ ಅಧ್ಯಾಯದ ೩೭ ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾನೆ.

**ಯಥೈಧಾಂಸಿ ಸಮಿದ್ಧೋಽಗ್ನಿಃ**
**ಭಸ್ಮಸಾತ್ ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ**
**ಭಸ್ಮಸಾತ್ಕುರುತೇ ತಥಾ ॥**

ಧಗ ಧಗನೆ ಉರಿಯುತ್ತಿರುವ ಅಗ್ನಿಯು ಕಟ್ಟಿಗೆಗಳನ್ನು ಬೂದಿ ಮಾಡುವಂತೆ ಅರ್ಜುನಾ ! ಜ್ಞಾನವೆಂಬ ಅಗ್ನಿಯು ಕರ್ಮಗಳೆಲ್ಲವನ್ನೂ ಸುಟ್ಟು ಬೂದಿ ಮಾಡುವುದು. ಇದೇ ಈ ಗ್ರಂಥಕ್ಕೆ ಪ್ರಯೋಜನ.

**ಪ್ರ : 52. ಈ ನಿಮ್ಮ ಗ್ರಂಥಕ್ಕೆ ಅಧಿಕಾರಿ ಯಾರು ?**

ಉ : ಸಾಧನ ಚತುಷ್ಟಯ ಸಂಪನ್ನನೇ ಅಧಿಕಾರಿ. (ಹೆಚ್ಚಿನ ವಿವರಗಳನ್ನು ವಿಚಾರಸಾಗರ ಮೊದಲನೆ ಭಾಗ ನೋಡಿ.)

**ಪ್ರ : 53. ಸಂಬಂಧವೇನು ?**

ಉ : ಬ್ರಹ್ಮಾತ್ಮ ಏಕತ್ವಜ್ಞಾನವೇ ವಿಷಯವಾಗಿದ್ದು ಅದನ್ನು ಈ ಗ್ರಂಥ ಬೋಧಿಸುವುದೇ ಸಂಬಂಧ.

## ಭಾಗ ೨

**ಪ್ರ. 54. ತಾವು ಜ್ಞಾನದಿಂದಲೇ ಮೋಕ್ಷವೆಂದು ತಮ್ಮ ಅನುಬಂಧ ಚತುಷ್ಟಯದಲ್ಲಿ ತಿಳಿಸಿದಿರಿ. ತಮ್ಮ ಈ ಸಿದ್ಧಾಂತವನ್ನು ಎಲ್ಲರೂ ಒಪ್ಪುವರೇ ? ಹೇಗೆ ?**

ಉ : ಜ್ಞಾನದಿಂದಲೇ ಮೋಕ್ಷ "**ಜ್ಞಾನಾದೇವತು ಕೈವಲ್ಯಂ**" ಎಂಬುದು ನಮ್ಮ ಸಿದ್ಧಾಂತ. ಆದರೆ ಎಷ್ಟೋ ಜನರಿಗೆ ಇದು ಸಮ್ಮತವಿಲ್ಲ.

**ಪ್ರ : 55. ನಿಮ್ಮ ಸಿದ್ಧಾಂತದ ಎದುರಾಳಿಗಳು ಯಾರು ?**

ಉ : ನಮ್ಮ ಸಿದ್ಧಾಂತದ ಎದುರಾಳಿಗಳು ಮುಖ್ಯವಾಗಿ ೧) ಮೀಮಾಂಸಕರು ೨) ವೇದಾಂತಿಗಳು.

**ಪ್ರ : 56. ಮೀಮಾಂಸಕರು ಯಾರು ?**

ಉ : ವೇದ ಮತವನ್ನು ಅನುಸರಿಸಿರುವ ಆಸ್ತಿಕ ಷಡ್ದರ್ಶನಗಳಲ್ಲಿ ಪೂರ್ವ ಮೀಮಾಂಸೆಯೂ ಒಂದು ಸ್ವತಂತ್ರವಾದ ದರ್ಶನ. ಇದನ್ನು ಬರೀ ಮೀಮಾಂಸೆ ಎಂದು ಕರೆಯುತ್ತಾರೆ.

ಮೀಮಾಂಸೆ ಎಂದರೆ ಚರ್ಚೆ ಎಂದು ಅರ್ಥ. ಪ್ರಾಚೀನಕಾಲದಲ್ಲಿ ಪಂಡಿತರು ಯಜ್ಞಕ್ಕೆ ಸಂಬಂಧಪಟ್ಟ ವಿಷಯಗಳನ್ನು ಚರ್ಚಿಸುತ್ತಿದ್ದರು. ವೇದಗಳಲ್ಲಿ ನಾಲ್ಕು ಭಾಗಗಳಿವೆ. ೧. ಮಂತ್ರ ೨. ಬ್ರಾಹ್ಮಣ ೩. ಆರಣ್ಯಕ ೪. ಉಪನಿಷತ್ತುಗಳೇ ಆ ನಾಲ್ಕು ಭಾಗಗಳು.

೧) ಮಂತ್ರಗಳೆಂದರೆ ಸ್ತೋತ್ರಗಳು ೨) ಬ್ರಾಹ್ಮಣಗಳೆಂದರೆ ಯಜ್ಞವಿಷಯಗಳನ್ನೊಳಗೊಂಡ ಭಾಗಗಳು. ೩) ಆರಣ್ಯಕಗಳೆಂದರೆ ಯಜ್ಞ ಯಾಗಾದಿಗಳ ಮಹತ್ವ, ಅರ್ಥ ಮೊದಲಾದುವುಗಳ ವಿಚಾರ ತಿಳಿಸುವವು ಗಳು. ೪) ಉಪನಿಷತ್ತುಗಳನ್ನು ವೇದಾಂತಗಳೆಂದೂ, ಬ್ರಹ್ಮ ಮತ್ತು ಆತ್ಮರ ವಿಷಯ ಚರ್ಚಿಸುವ ಜ್ಞಾನಕಾಂಡವೆಂದೂ ಕರೆಯುತ್ತಾರೆ.

ಈ ನಾಲ್ಕು ಭಾಗಗಳಲ್ಲಿ ಸಂಹಿತಾ ಭಾಗ ಅಂದರೆ ಮಂತ್ರ ಭಾಗ ದಲ್ಲಿ ಯಾವ ಯಾವ ಯಜ್ಞಕ್ಕೆ ಯಾವ ಯಾವ ಮಂತ್ರಗಳನ್ನು ಉಪ ಯೋಗಿಸಬೇಕು ಎಂಬ ಯಜ್ಞಕ್ಕೆ ಉಪಯುಕ್ತವಾದ ಮಂತ್ರಗಳಿರುತ್ತವೆ. ಇನ್ನು ಎರಡನೇ ಭಾಗವಾದ ಬ್ರಾಹ್ಮಣ ಭಾಗದಲ್ಲಿ ಯಜ್ಞಗಳನ್ನು ನೆರ ವೇರಿಸುವರೀತಿ, ನೀತಿ, ಪದ್ಧತಿಗಳು ವಿವರಿಸಲ್ಪಟ್ಟಿರುತ್ತವೆ. ಆದರೆ ಎಲ್ಲಿ, ಯಾವ ಯಾವ ಯಜ್ಞದಲ್ಲಿ, ಯಜ್ಞ ಭಾಗಗಳಲ್ಲಿ ಯಾವ ಯಾವ ಮಂತ್ರ ಗಳನ್ನು ಉಪಯೋಗಿಸಬೇಕು, ಯಜ್ಞದ ಕ್ರಮ ಹೇಗೆ ? ಎಂಬ ವಿಷಯ ಗಳಲ್ಲಿ ಭಿನ್ನಾಭಿಪ್ರಾಯಗಳು ಬಂದಾಗ ಆಗಿನ ಯಜ್ಞದೀಕ್ಷಿತರು ಒಂದುಕಡೆ ಕಲೆತು ವಿರೋಧವನ್ನು ತೆಗೆದುಹಾಕಲು ಚರ್ಚಿಸುತ್ತಿದ್ದರು. ಆ ವಿರೋ ಧಗಳನ್ನು ತೆಗೆದುಹಾಕಿ ಏಕವಾಕ್ಯತೆ ಮಾಡುವುದೇ ಮೀಮಾಂಸ ದರ್ಶ ನದ ಆವಶ್ಯಕತೆ ಎಂಬುದಾಗಿ ಕಂಡುಬರುತ್ತದೆ.

ಬೇರೆ ಬೇರೆ ಬ್ರಾಹ್ಮಣಗಳಲ್ಲಿ ಬೇರೆ ಬೇರೆ ಯಜ್ಞಗಳ ಬಗ್ಗೆ ಬೇರೆ ಬೇರೆ ವರ್ಣನೆಗಳು ಸಿಕ್ಕುತ್ತವೆ. ಮತ್ತು ಯಾವ ಯಾವ ಯಜ್ಞಗಳನ್ನು, ಯಾಗಾದಿ ಕರ್ಮಗಳನ್ನು ಯಾರು ಯಾರು ಮಾಡಬೇಕೆಂಬ ಬಗ್ಗೆ ತೊಡಕು

ಗಳು ಬಂದಾಗ ಅವುಗಳನ್ನು ಚರ್ಚಿಸಿ ನಿರ್ಣಯಿಸಿ ಇಟ್ಟಿರುವುದೇ ಪೂರ್ವ ಮೀಮಾಂಸಾಶಾಸ್ತ್ರವು ಇದರಲ್ಲಿ ತರ್ಕವೇ ಮುಖ್ಯವಾಗಿರುತ್ತದೆ. ಇದು ವೇದ ವಾಕ್ಯಗಳಲ್ಲಿರುವ (ಬ್ರಾಹ್ಮಣ ಸಂಹಿತೆಗಳಲ್ಲಿರುವ) ವಿರೋಧಾಭಾಸಗಳನ್ನು ತೆಗೆದುಹಾಕುವ ಮಹತ್ವದ ಕೆಲಸವನ್ನು ಮಾಡಿದ್ದರಿಂದ ಇದೂ ಒಂದು ಸ್ವತಂತ್ರ ದರ್ಶನವಾಗಿದೆ.

ಸಾರಾಂಶವೇನೆಂದರೆ ವೇದದೊಳಗಿನ ಕರ್ಮಕಾಂಡ ಮತ್ತು ಉಪಾಸನಾಕಾಂಡವನ್ನು ನಿರೀಕ್ಷಿಸಿ ಅವುಗಳಲ್ಲಿ ಕ್ರಮರಹಿತವಾಗಿ ಹೇಳಿದುದನ್ನೆಲ್ಲಾ ಕ್ರಮಪಡಿಸಿ, ಅವುಗಳಲ್ಲಿರುವ ವಿರೋಧ ಭಾಗವನ್ನೆಲ್ಲಾ ಸಮನ್ವಯಮಾಡಿ ತೋರಿಸುತ್ತದೆ. ಇದಕ್ಕಾಗಿಯೇ ಮೀಮಾಂಸ ಶಾಸ್ತ್ರವೆಂದು ಹೆಸರುಬಂದಿತು. ಮೀಮಾಂಸೆ ಎಂದರೆ ಪರೀಕ್ಷೆ ಅಥವಾ ವಿಚಾರ. ವೇದಗಳ ಸಮನ್ವಯಾರ್ಥದ ವಿಚಾರಕ್ಕೆ ಮೀಮಾಂಸೆಯೆಂದು ಹೆಸರು.

ಇವುಗಳಲ್ಲಿ ಮಂತ್ರ (ಸಂಹಿತಾ) ಭಾಗ, ಬ್ರಾಹ್ಮಣ ಭಾಗದಲ್ಲಿರುವ ವಿರೋಧಭಾಗವನ್ನು ಸಮನ್ವಯಮಾಡಿ ಹೇಳಿರುವುದು ಪೂರ್ವ ಮೀಮಾಂಸೆಯೆಂದು, ಆರಣ್ಯಕ ಮತ್ತು ಮುಖ್ಯವಾಗಿ ಜ್ಞಾನವೇ ಪ್ರತಿಪಾದಿತವಾಗಿರುವ ಉಪನಿಷತ್ತುಗಳಲ್ಲಿ ಬರುವ ವಿರೋಧ ಭಾಗಗಳನ್ನು ಸಮನ್ವಯಮಾಡಲು ಅಸ್ತಿತ್ವದಲ್ಲಿ ಬಂದ ಮೀಮಾಂಸೆಗೆ ಉತ್ತರ ಮೀಮಾಂಸೆ ಎಂದೂ ಕರೆದಿದ್ದಾರೆ.

ಪೂರ್ವ ಮೀಮಾಂಸೆಯ ಸೂತ್ರಗಳನ್ನು ಜೈಮಿನಿ ಮುನಿಗಳು ಸಂಗ್ರಹಿಸಿದ್ದಾರೆ. ಉತ್ತರ ಮೀಮಾಂಸೆಯ ಸೂತ್ರಗಳನ್ನು ಸ್ವತಃ ವೇದವ್ಯಾಸರೇ ಸಂಗ್ರಹಿಸಿದ್ದಾರೆ.

ಈ ಪೂರ್ವ ಮೀಮಾಂಸೆಗೆ ಕರ್ಮಕಾಂಡವೆಂದೂ ದ್ವಾದಶಾಧ್ಯಾಯಿ ಎಂದೂ ಬರೀ ಮೀಮಾಂಸೆ ಎಂದೂ ಪರ್ಯಾಯ ಹೆಸರುಗಳಿವೆ. ಉತ್ತರ ಮೀಮಾಂಸೆಗೆ ವೇದಾಂತ ಸೂತ್ರಗಳೆಂದೂ, ಬ್ರಹ್ಮಸೂತ್ರಗಳೆಂದೂ, ಶಾರೀರಕ ಸೂತ್ರಗಳೆಂದೂ ಬೇರೆ ಬೇರೆ ಪರ್ಯಾಯ ಹೆಸರುಗಳಿರುತ್ತವೆ.

**ಪ್ರ : 57. ಈ ಪೂರ್ವ ಮೀಮಾಂಸೆಯ ಪರಂಪರೆಯನ್ನು ತಿಳಿಸಿರಿ.**

ಉ ಪೂರ್ವ ಮೀಮಾಂಸೆಗೆ ಒಂದು ನಿಶ್ಚಿತರೂಪವನ್ನು ಕೊಟ್ಟ ವರು ಜೈಮಿನಿ ಮಹರ್ಷಿಗಳು ಇವರ ನಂತರ ಭರ್ತೃಮಿತ್ರ, ಭವದಾಸ, ಹರಿ ಮತ್ತು ಉಪವರ್ಷರೆಂಬವರು ಮೀಮಾಂಸಕರಾದರು ಇವರ ನಂತರ ಶಬರ ಸ್ವಾಮಿಗಳು ಮೀಮಾಂಸಕ್ಕೆ ಪ್ರಸಿದ್ಧ ಭಾಷ್ಯ ಬರೆದವರು ಆ ಮೇಲೆ ಈ ದರ್ಶನದಲ್ಲಿ ಪ್ರಸಿದ್ಧರಾದವರೆಂದರೆ ಪ್ರಭಾಕರ ಮತ್ತು ಕುಮಾರಿಲಭಟ್ಟರು ಇವರಿಬ್ಬರಲ್ಲಿ ಕೆಲವು ಮಹತ್ವದ ತಾತ್ವಿಕಭೇದಗಳು ಕಂಡು ಬರುವುದರಿಂದ ಮೀಮಾಂಸಕರಲ್ಲಿ ಎರಡು ಒಳಶಾಖೆಗಳಾದವು ಕುಮಾರಿಲನ ಅನುಯಾಯಿಗಳಿಗೆ ಭಾಟ್ಟರೆಂದೂ, ಅವನ ಮತಕ್ಕೆ ಭಾಟ್ಟಮತವೆಂದೂ, ಪ್ರಭಾಕರನ ಮತಕ್ಕೆ ಪ್ರಾಭಾಕರ ಮತನೆಂದೂ ಹೆಸರುಂಟು

**ಪ್ರ : 58 ಮೀಮಾಂಸಕರ ಮುಖ್ಯ ಸಿದ್ಧಾಂತವೇನು ?**

ಉ ಮೀಮಾಂಸಕವರಲ್ಲಿ ಭಾಟ್ಟ ಮತವೆಂದೂ ಪ್ರಾಭಾಕರ ಮತವೆಂದೂ ಎರಡು ಪಂಗಡಗಳಿವೆ ಎಂದು ಹಿಂದೆಯೇ ತಿಳಿದಿದ್ದೀರಿ ಇವುಗಳಲ್ಲ ಪ್ರಾಭಾಕರ ಮತದವರು ಪ್ರತ್ಯಕ್ಷ, ಅನುಮಾನ, ಶಬ್ದ, ಉಪಮಾನ ಮತ್ತು ಅರ್ಥಾಪತ್ತಿ ಪ್ರಮಾಣಗಳನ್ನು ಒಪ್ಪಿದ್ದಾರೆ ಭಾಟ್ಟ ಮತದವರು ಅನುಪಲಬ್ಧಿ ಪ್ರಮಾಣವನ್ನು ಸ್ವೀಕರಿಸಿದ್ದಾರೆ.

ವೇದಗಳು ನಿತ್ಯವಾಗಿರುತ್ತವೆ. ಅವು ಅಪೌರುಷೇಯ. ಆದುದರಿಂದ ಅವುಸ್ವತಃ ಪ್ರಮಾಣವಾಗಿವೆ. ಯಜ್ಞಯಾಗಾದಿಗಳೇ ಮನುಷ್ಯನಿಗೆ ವಿಹಿತವಾಗಿವೆ. ಅವುಗಳನ್ನು ಮಾಡುತ್ತಾ ಮನುಷ್ಯನು ತನ್ನ ಆಯುಷ್ಯವೆಲ್ಲವನ್ನು ಕಳೆಯತಕ್ಕದ್ದು ಎಂಬುದೇ ಅವರ ಸಿದ್ಧಾಂತ ಕುಮಾರಿಲನು ಕರ್ಮ ಮತ್ತು ಉಪಾಸನೆಗಳೆರಡನ್ನೂ ಅನುಸರಿಸಬೇಕೆನ್ನುತ್ತಾನೆ

ಇವರು ಸ್ವರ್ಗದದಾರಿಯನ್ನು ತೋರಿಸುವುದರಲ್ಲಿ ಸಾರ್ಥಕತೆ ಹೊಂದಿದ್ದಾರೆ. ಆತ್ಯಾಂತಿಕ ಬಿಡುಗಡೆಯ ಪ್ರಶ್ನೆಯನ್ನು ಇವರು ಎತ್ತಿಕೊಂಡಿಲ್ಲ ಜೀವಕ್ಕೆ ಮುಕ್ತಿಯಾದ ವಿನಃ ಅದು ಸಂಸಾರ ಚಕ್ರದಲ್ಲಿ ಹೊರಳಾಡುತ್ತಲೇ ಇರಬೇಕಾಗುವುದು. ಮತ್ತು ಧರ್ಮಾಧರ್ಮಗಳಿಂದ ಬಿಡುಗಡೆ ಹೊಂದಿದರೆ ಮಾತ್ರ ಜೀವಾತ್ಮನಿಗೆ ಮೋಕ್ಷವಾಗುತ್ತದೆ ಈ ಧರ್ಮಾಧರ್ಮಗಳನ್ನು ತಪ್ಪಿಸಿಕೊಳ್ಳಬೇಕಾದರೆ ವಿಹಿತ ಪ್ರತಿಸಿದ್ಧ

ಕರ್ಮಗಳೆರಡರ ಫಲಗಳಿಂದಲೂ ಬಿಡುಗಡೆ ಹೊಂದಬೇಕು. ಮತ್ತು ವೇದವೆಲ್ಲಾ ಕರ್ಮವನ್ನೇ ವರ್ಣಿಸುವುದೆಂದು ಇವರ ಅಭಿಪ್ರಾಯ. ಆರಣ್ಯಕ ಮತ್ತು ಉಪನಿಷತ್ತುಗಳನ್ನು ಸಹ ಕರ್ಮಕ್ಕೆ ಅಧೀನ ವಾಗುವಂತೆಯೇ ಅರ್ಥಮಾಡಬೇಕೆಂದು ಮೀಮಾಂಸಕರ ಸಿದ್ಧಾಂತ.

**ಪ್ರ. 59. ಈ ಮೀಮಾಂಸಕರಲ್ಲಿ ಎಷ್ಟು ಪಂಗಡಗಳಿವೆ ?**

ಉ : ಮೀಮಾಂಸಕರಲ್ಲಿ ಮುಖ್ಯವಾಗಿ ಎರಡು ಪಂಗಡಗಳಿವೆ. ೧) ಪ್ರಾಭಾಕರರೆಂದೂ ೨) ಭಾಟ್ಟರೆಂದೂ ಎರಡು ಪಂಗಡಗಳಿವೆ.

**ಪ್ರ : 60. ಪ್ರಾಭಾಕರರ ಮತದ ತತ್ವವೇನು ?**

ಉ : ವೇದವೆಲ್ಲಾ ಕರ್ಮಪರವಾಗಿದೆ. ನಿತ್ಯ ನೈಮಿತ್ತಿಕ ಕರ್ಮಗಳ ಅನುಷ್ಠಾನ, ಕಾಮ್ಯ ಮತ್ತು ನಿಷಿದ್ಧ ಕರ್ಮಗಳ ತ್ಯಾಗವೇ ಮೋಕ್ಷಕ್ಕೆ ಅವಶ್ಯಕಗಳು. ಮತ್ತು ವೇದಾಂತಗಳಲ್ಲಿ ನಿತ್ಯಸಿದ್ಧ ಬ್ರಹ್ಮಜ್ಞಾನವೇ ಹೇಳಲ್ಪಟ್ಟಿಲ್ಲವೆಂದು ಇವರು ಹೇಳುತ್ತಾರೆ. ಈ ಪಕ್ಷದವರು ಕೇವಲ ಕರ್ಮವಾದಿಗಳು. ವೇದಗಳಲ್ಲಿ ಆತ್ಮಜ್ಞಾನವೇ ಇಲ್ಲವೆಂದೂ ಬರೀ ಕರ್ಮಗಳಿಂದಲೇ ಮುಕ್ತಿಯಾಗುವುದೆಂದೂ ಇವರ ಹೇಳಿಕೆ ಇವರನ್ನೇ ಪ್ರಾಭಾಕರರೆಂದು ಕರೆಯುತ್ತಾರೆ.

**ಪ್ರ. 61. ಭಾಟ್ಟರ ಮತ ತತ್ತ್ವವೇನು ?**

ಉ : ಈ ಭಾಟ್ಟ ಮತದವರು ಸಮುಚ್ಚಯವಾದಿಗಳು, ಏಕೆಂದರೆ ವೇದಗಳ ಕೊನೇಭಾಗವಾದ ವೇದಾಂತಗಳಲ್ಲಿ ನಿತ್ಯ ಸಿದ್ಧವಾದ ಆತ್ಮಜ್ಞಾನವನ್ನು ಹೇಳಿರುವುದೇನೋ ಸರಿ; ಆದರೆ ಬರೀ ಜ್ಞಾನದಿಂದಲೇ ಮುಕ್ತಿಯಾಗಲಾರದು; ಅದರ ಜೊತೆಗೆ ಕರ್ಮವೂ ಅತ್ಯಾವಶ್ಯಕವೇ ಎಂದು ಅವರು ಹೇಳುತ್ತಾರೆ.

**ಪ್ರ : 62. 55 ನೇ ಪ್ರಶ್ನೆಗೆ ಉತ್ತರವಾಗಿ ಸಿದ್ಧಾಂತವನ್ನು ಮೀಮಾಂಸಕರು ಮತ್ತು ವೇದಾಂತಿಗಳು ವಿರೋಧಿಸುತ್ತಾರೆಂದು ಹೇಳಿದ್ದಿರಿ. ಇಲ್ಲಿಯವರೆಗೆ ಮೀಮಾಂಸಕರ ವಿಷಯ ತಿಳಿಯಿತು. ಇನ್ನು ವೇದಾಂತಿಗಳ ವಿಷಯವನ್ನು ತಿಳಿಸಿರಿ.**

ಉ : ವೇದಾಂತಿಗಳಲ್ಲಿ ಮುಖ್ಯವಾಗಿ ಎರಡು ಪಕ್ಷಗಳನ್ನು ಮಾಡಬಹುದು.

೧) ಅದ್ವೈತಾತ್ಮ ತತ್ತ್ವವನ್ನು ಒಪ್ಪುವವರದು ಒಂದು ಪಕ್ಷ. ೨) ಭೇದಾಭೇದ ಬ್ರಹ್ಮತತ್ತ್ವವನ್ನು ಒಪ್ಪುವವರದು ಇನ್ನೊಂದು ಪಕ್ಷ.

**ಪ್ರ. 63. ಅದ್ವೈತಾತ್ಮ ತತ್ತ್ವವನ್ನು ಒಪ್ಪುವವರ ಮತದ ಸಾರಾಂಶವೇನು ?**

ಈ ಅದ್ವೈತಾತ್ಮ ತತ್ತ್ವ ಒಪ್ಪುವವರನ್ನು ಪ್ರಸಂಖ್ಯಾನ ಅಥವಾ ಧ್ಯಾನವಾದಿತಳೆಂದೂ ಕರೆಯುತ್ತಾರೆ. ಇವರು "ಬ್ರಹ್ಮಸಾಕ್ಷಾತ್ಕಾರಕ್ಕೆ ಧ್ಯಾನವು ಆವಶ್ಯಕ; ಮತ್ತು ಬ್ರಹ್ಮಸಾಕ್ಷಾತ್ಕಾರವಾಗುವವರೆಗೆ ಮಾತ್ರ ಕರ್ಮಗಳನ್ನು ಮಾಡಿಯೇತೀರಬೇಕು" ಎಂದು ಹೇಳುತ್ತಾರೆ.

**ಪ್ರ. 64. ಈ ಧ್ಯಾನವಾದಿಗಳಲ್ಲಿ ಇರುವ ಒಳಭೇದಗಳು ಯಾವುವು. ?**

ಉ : ಈ ಧ್ಯಾನವಾದಿಗಳಲ್ಲಿ ೧) ಬ್ರಹ್ಮದತ್ತನ ಪಕ್ಷವೆಂದೂ ೨) ಮಂಡನರ ಪಕ್ಷವೆಂದೂ ಎರಡು ಪಕ್ಷಗಳಿವೆ.

**ಪ್ರ. 65. ಬ್ರಹ್ಮದತ್ತನ ಮುಖ್ಯ ಅಭಿಪ್ರಾಯವೇನು ?**

ಉ : ಕರ್ಮಕಾಂಡದ ವಾಕ್ಯಗಳಂತೆ ಉಪನಿಷತ್ತಿನ ವಾಕ್ಯಗಳೂ ಸಹ ವಿಧಿಯನ್ನೇ ಹೇಳುತ್ತವೆ; ಆದರೆ ಈ ವಿಧಿಯು ಕರ್ಮಗಳಿಗೆ ಸಂಬಂಧಿಸಿದ ವಿಧಿಯಲ್ಲ; ಇದು ಧ್ಯಾನಕ್ಕೆ ಸಂಬಂಧಿಸಿದ ವಿಧಿ. ಈ ಧ್ಯಾನಕ್ಕೆ ಉಪಾಸನೆ, ಭಾವನೆ, ಪ್ರಸಂಖ್ಯಾನವೆಂಬ ಬೇರೆ ಬೇರೆ ಹೆಸರುಗಳಿವೆ. ಬೃಹದಾರಣ್ಯಕ ಉಪನಿಷತ್ತಿನ ೧-೪-೭ ರಲ್ಲಿ **"ನಯೋsತ ಏಕೈಕಮುಪಾಸತೇ"** ಆತ್ಮನೆಂದೇ ಉಪಾಸನೆ ಮಾಡಬೇಕು ಎಂಬ ಮೊದಲಾದ ವಾಕ್ಯಗಳೇ ಉಪನಿಷತ್ತುಗಳ ಮುಖ್ಯ ಸಿದ್ಧಾಂತವನ್ನು ಹೇಳಿಕೊಡುವವೆಂದು ತಿಳಿಯಬೇಕು. ಮತ್ತು "ತತ್ತ್ವಮಸಿ" ಮೊದಲಾದ ವಾಕ್ಯಗಳು ಮಹಾವಾಕ್ಯಗಳಾಗಿರದೆ ಉಪಾಸನೆಯನ್ನು ವಿಧಿಸುವ ವಾಕ್ಯಗಳಿಗೆ ಅಧೀನವಾಗಿ ಉಪಾಸನೆಗೆ ವಿಷಯ ಯಾವುದೆಂಬುದನ್ನು ಮಾತ್ರ ತೋರಿಸುತ್ತವೆ.

ಸಾರಾಂಶವೇನೆಂದರೆ 'ತತ್ತ್ವಮಸಿ' ಮಹಾವಾಕ್ಯವನ್ನು ಕೇಳಿದೊಡನೆಯೇ ಯಾರಿಗೂ ಮೋಕ್ಷವಾಗುವುದಿಲ್ಲ. ಆ ವಾಕ್ಯಗಳನ್ನು ಧ್ಯಾನಮಾಡುವುದರಿಂದಲೇ ಮೋಕ್ಷವಾಗುವುದು. ಆ ವಾಕ್ಯಗಳಿಂದ ಹುಟ್ಟುವ ಬ್ರಹ್ಮಜ್ಞಾನವು ಪರೋಕ್ಷವಾಗಿರುವುದು; ಆ ವಾಕ್ಯಗಳನ್ನು ಕೇಳಿದ ಮೇಲೆ ಧ್ಯಾನಮಾಡಿದರೆ ಮರಣದ ನಂತರ ಬ್ರಹ್ಮದೊಡನೆ ಐಕ್ಯತ್ವವನ್ನು ಹೊಂದಬಹುದು. ಈ ರೀತಿ ಬ್ರಹ್ಮಸಾಕ್ಷಾತ್ಕಾರವಾಗುವವರೆಗೆ ಅವಿದ್ಯೆಯು ಇದ್ದೇ ಇರುತ್ತದೆ, ಆದುದರಿಂದ ಮನುಷ್ಯನು ಬ್ರಹ್ಮಸಾಕ್ಷಾತ್ಕಾರವಾಗುವವರೆಗೆ ವರ್ಣಾಶ್ರಮ ವಿಹಿತ ಕರ್ಮಗಳನ್ನೂ, ಉಪಾಸನೆಯನ್ನು ಮಾಡುತ್ತಲೇ ಇರಬೇಕು.

ಸಾರಾಂಶವೇನೆಂದರೆ ವೇದಾಂತ ವಾಕ್ಯ ಜನ್ಯಜ್ಞಾನ ಒಂದರಿಂದಲೇ ಮೋಕ್ಷವಾಗಲಾರದು; ಅದಕ್ಕೆ ಕರ್ಮ ಮತ್ತು ಉಪಾಸನೆಯ ಸಹಾಯವೂ ಅವಶ್ಯಕವಾಗಿರುತ್ತದೆ.

## ಪ್ರ: 66. ಮಂಡನನ ಮುಖ್ಯ ಅಭಿಪ್ರಾಯವೇನು ?

ಉ : ಮಂಡನನೂ ಸಹ ಬ್ರಹ್ಮದತ್ತನ ಅಭಿಪ್ರಾಯವನ್ನೇ ಸಮರ್ಥಿಸುತ್ತಾನೆ. ಆದರೆ ಸಾಕ್ಷಾತ್ ಉಪಾಸನೆಯಿಂದಲೇ ಮೋಕ್ಷವಾಗುವುದೆಂದು ಹೇಳುವ ಬ್ರಹ್ಮದತ್ತನ ಪಕ್ಷವು ಒಪ್ಪಿಗೆ ಇಲ್ಲ. ಉಪಾಸನೆಯ ಬಲದಿಂದಲೇ ಮುಂದೆ ಮತ್ತೊಂದು ಶುದ್ಧ ಜ್ಞಾನಉಂಟಾಗಿ ಅದರಿಂದ ಮೋಕ್ಷವಾಗುವುದೆಂದು ಮಂಡನರ ಅಭಿಪ್ರಾಯವಿದೆ.

ಶಬ್ದ ಪ್ರಮಾಣದಿಂದ ಸಾಕ್ಷಾತ್ ಜ್ಞಾನವು ಎಂದೂ ಹುಟ್ಟಲಾರದು. ಅದರಂತೆ ತತ್ತ್ವಮಸಿ ಮಹಾವಾಕ್ಯಗಳಿಂದ ಹುಟ್ಟುವ ಜ್ಞಾನವು ಪರೋಕ್ಷವಾಗಿರುತ್ತದೆ ಆದರೆ ಬ್ರಹ್ಮವು ಪರೋಕ್ಷವಲ್ಲ. ಈ ರೀತಿ ಪರೋಕ್ಷಜ್ಞಾನವಾದ ಮೇಲೆ ಧ್ಯಾನವನ್ನು ಮಾಡಬೇಕು. ಆದರಿಂದ ಅದ್ವಿತೀಯ ಬ್ರಹ್ಮನ ಸಾಕ್ಷಾತ್ಕಾರ ಜ್ಞಾನವುಂಟಾಗಿ ಮೋಕ್ಷ ಪ್ರಾಪ್ತಿಯಾಗುತ್ತದೆ. ಇಂತಹ ಸಾಕ್ಷಾತ್ಕಾರ ಜ್ಞಾನವುಂಟಾಗುವವರೆಗೂ ಅವಿದ್ಯೆಯು ಇದ್ದೇ ಇರುತ್ತದೆ. ಆದುದರಿಂದ ಅಲ್ಲಿಯ ವರೆಗೆ ಕರ್ಮಗಳನ್ನು ಮಾಡಲೇಬೇಕು.

ಇದರಿಂದ ಮಹಾವಾಕ್ಯಜನ್ಯಜ್ಞಾನದ ಜೊತೆಗೆ ಉಪಾಸನೆ ಮತ್ತು ಕರ್ಮವೂ ಮೋಕ್ಷವಾಗುವುದಕ್ಕೆ ಬೇಕೇ ಬೇಕೆಂಬುದು ಮಂಡನನ ಅಭಿಪ್ರಾಯ.

**ಪ್ರ: 67. 62 ನೇ ಪ್ರಶ್ನೆಗೆ ಉತ್ತರವಾಗಿ ವೇದಾಂತಿಗಳಲ್ಲಿ ಅದ್ವೈತಾತ್ಮ ತತ್ತ್ವವನ್ನು ಒಪ್ಪುವವರ ಒಂದು ಪಕ್ಷ, ಭೇದಾಭೇದ ಬ್ರಹ್ಮ ತತ್ತ್ವವನ್ನು ಒಪ್ಪುವವರ ಒಂದುಪಕ್ಷ ಹೀಗೆ ಎರಡು ಪಕ್ಷಗಳಿವೆ ಎಂದು ಹೇಳಿ ಇಲ್ಲಿಯುವರೆಗೆ ಅದ್ವೈತಾತ್ಮ ತತ್ತ್ವವನ್ನು ಒಪ್ಪುವವರ ಪಕ್ಷವನ್ನು ವಿವರಿಸಿದಿರಿ, ಈಗ ಭೇದಾಭೇದ ಬ್ರಹ್ಮ ತತ್ತ್ವವನ್ನು ಒಪ್ಪುವವರ ಪಕ್ಷದ ವಿಷಯ ತಿಳಿಸಿರಿ.**

ಉ : ಈ ಭೇದಾಭೇದ ಬ್ರಹ್ಮತತ್ತ್ವವನ್ನು ಒಪ್ಪುವವರೂ ಸಮುಚ್ಚಯವಾದಿಗಳು. ಇದು ಭೇದಾಭೇದವಾದವೆಂದೂ, ದ್ವೈತಾದ್ವೈತವಾದವೆಂದೂ, ಅನೇಕಾಂತವಾದವೆಂದೂ ಕರೆಯಲ್ಪಡುತ್ತದೆ ಶ್ರೀ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತವು ಈ ಪಕ್ಷವನ್ನೇ ಆಧಾರವಾಗಿಟ್ಟುಕೊಂಡಿರುವುದು.

ಈ ಮತದ ಮೂಲ ಉತ್ಪಾದಕರು ಭರ್ತೃಪ್ರಪಂಚರೆಂದು ಪ್ರಚಲಿತವಿದೆ. ಭರ್ತೃಪ್ರಪಂಚರೂ ಶಂಕರಾಚಾರ್ಯರಂತೆ ಅದ್ವೈತವನ್ನು ಒಪ್ಪಿದರೂ ಅದು ಶಂಕರಾಚಾರ್ಯರಂತೆ ಕೇವಲಾದ್ವೈತವಾಗಿಲ್ಲ. ಅದು ದ್ವೈತವನ್ನೊಳಗೊಂಡ ಅದ್ವೈತವಾಗಿರುತ್ತದೆ. ಭರ್ತೃಪ್ರಪಂಚರ ಬ್ರಹ್ಮವನ್ನು ಸಗುಣಬ್ರಹ್ಮನಿಗೆ ಅಂದರೆ ಮಾಯೋಪಾದಿಕ ಈಶ್ವರನಿಗೆ ಹೋಲಿಸಬಹುದು.

ಒಂದು ಗಿಡಕ್ಕೆ ಹಲವು ಟೊಂಗೆಗಳೂ, ರೆಂಬೆಗಳೂ, ಎಲೆ ಹೂ ಕಾಯಿಗಳೂ ಇರುತ್ತವೆ. ಗಿಡವೆಂಬ ಒಂದೇ ದೃಷ್ಟಿಯಿಂದ ನೋಡಿದರೆ ಅವೆಲ್ಲಕೂಡಿ ಒಂದೇ ವಸ್ತುವಾಗುವುವು. ಟೊಂಗೆ-ರೆಂಬೆ ಹೂ-ಕಾಯಿಗಳೆಂಬ ದೃಷ್ಟಿಯಿಂದ ನೋಡಿದರೆ ಅನೇಕವಾಗಿ ತೋರುತ್ತವೆ. ಆದುದರಿಂದ ಏಕತ್ವವೂ ಸತ್ಯವೇ ಅನೇಕತ್ವವೂ ಸತ್ಯವೇ-ಅಂದರೆ ಭೇದವೂ ಸತ್ಯವೇ ಅಭೇದವೂ ಸತ್ಯವೇ.

ಹೀಗೆಯೆ ಸಮುದ್ರವು ನೀರು, ಬುರುಗು, ತೆರೆ, ಗುಳ್ಳೆ ಮೊದಲಾದವುಗಳ ರೂಪದಿಂದ ಭಾಸವಾಗುತ್ತದೆ. ಸಮುದ್ರವೆಂಬ ದೃಷ್ಟಿಯಿಂದ ಅವೆಲ್ಲಾ ಏಕವೆಂದೂ ನೀರು, ಬುರುಗು, ತೆರೆ, ಗುಳ್ಳೆ ಮೊದಲಾದವುಗಳ ದೃಷ್ಟಿಯಿಂದ ಅನೇಕವಾಗಿ ಕಾಣುವುದು.

ಹಾಗೆಯೇ ಮಣ್ಣೆಂಬ ದೃಷ್ಟಿಯಿಂದ ಏಕತೆಯೂ, ಗಡಿಗೆ, ಕುಡಿಕೆ, ದೀಪ ಮೊದಲಾದವುಗಳ ದೃಷ್ಟಿಯಿಂದ ಅನೇಕತೆಯೂ ಇರುತ್ತವೆ. ಹಾಗೆಯೇ ಬ್ರಹ್ಮನೂ ಕೂಡ ಒಂದು ರೀತಿಯಿಂದ ಏಕವಾಗಿಯೂ, ಮತ್ತೊಂದು ರೀತಿಯಿಂದ ಅನೇಕವಾಗಿಯೂ ಇರುತ್ತಾನೆಂದು ಹೇಳುತ್ತಾರೆ.

**ಉದಾ :–** ಜೀವ ಜಗತ್ತುಗಳು ಬ್ರಹ್ಮನ ದೇಹವೆಂದೂ (ಇದು ಶ್ರೀ ರಾಮಾನುಜರಮತ) ಕಲ್ಪಿಸಿದರೆ, ಬ್ರಹ್ಮನೊಬ್ಬನೇ ತನ್ನ ಶರೀರದಿಂದ ಸಹಿತನಾಗಿ ಇರುವನೆಂಬ ದೃಷ್ಟಿಯಿಂದ ಏಕತ್ವವು ನಿಜವಾಗುವುದು. ಜೀವ ಜಗತ್ತು, ಈಶ್ವರನೆಂಬ ದೃಷ್ಟಿಯಿಂದ ನಾನತ್ವವು ನಿಜವಾಗುವುದು. ಮತ್ತು ಹೀಗೆ ತಿಳಿಯುವುದರಿಂದ ಕರ್ಮಕಾಂಡಕ್ಕೂ ಅವಕಾಶವನ್ನು ಮಾಡಿಕೊಟ್ಟಂತಾಗುವುದು; ಜ್ಞಾನಕಾಂಡಕ್ಕೂ ಅವಕಾಶವನ್ನು ಮಾಡಿಕೊಟ್ಟಂತಾಗುವುದು. ಲೌಕಿಕ, ವೈದಿಕ ವ್ಯವಹಾರಗಳಿಗೆ ಭೇದವು ಅವಶ್ಯಕ. ಬ್ರಹ್ಮನ ಅನೇಕತ್ವಕಲ್ಪನೆಯಿಂದ ಈ ಭೇದಕ್ಕೆ ಆಧಾರವನ್ನು ಕೊಟ್ಟಂತಾಗುತ್ತದೆ. ಆದರೆ ಮೋಕ್ಷಕ್ಕೆ ಏಕತ್ತ್ವದ ಜ್ಞಾನವೂ ಅವಶ್ಯಕವು. ಅದೂ ಈ ಭೇದಾಭೇದ ಪಕ್ಷದಲ್ಲಿದೆ. ಇದರಿಂದ ಮೋಕ್ಷ ಶಾಸ್ತ್ರಕ್ಕೂ ಅವಕಾಶಮಾಡಿಕೊಟ್ಟಂತಾಗುವುದು. ಈ ರೀತಿಯಿಂದ ಈ ಪಕ್ಷವನ್ನು ಒಪ್ಪುವುದು ಎಲ್ಲಾ ರೀತಿಯಿಂದಲೂ ಸಮಂಜಸವಾಗುವುದೆಂದು ಈ ಭೇದಾಭೇದ ಪಕ್ಷದವರು ಹೇಳುತ್ತಾರೆ.

ಭರ್ತೃಪ್ರಪಂಚರ ದೃಷ್ಟಿಯಿಂದ ಭೇದವೂ ಸತ್ಯವಾಗಿರುತ್ತದೆ. ಆದುದರಿಂದ ಕೊನೆಯವರೆಗೂ ಕರ್ಮವನ್ನು ಮಾಡುತ್ತಲೇ ಇರಬೇಕಾಗುವುದು. ಬರೀ ಕರ್ಮವನ್ನೇ ಮಾಡಿದರೆ ದ್ವೈತ ಒಂದೇ ಸತ್ಯವಾಗುವುದೆಂದು ತಿಳಿದಂತಾಗುತ್ತದೆ. ಆದುದರಿಂದ ಬ್ರಹ್ಮನ ಏಕತ್ವ ಜ್ಞಾನವೂ ಮೋಕ್ಷಕ್ಕೆ ಅವಶ್ಯಕವು. ಆದರೆ ಬರೀ ಜ್ಞಾನ ಒಂದೇ ಆದರೂ ಸಾಲದು. ಈ

ರೀತಿ ಜ್ಞಾನ ಕರ್ಮಗಳೆರಡೂ ಮೋಕ್ಷಕ್ಕೆ ಸಮಪ್ರಧಾನವಾಗಿಯೇ ಅವಶ್ಯಕಗಳೆಂದು ಸಿದ್ಧಮಾಡುತ್ತಾರೆ.

ಇಲ್ಲಿಯವರೆ ಭೇದಾಭೇದ ಬ್ರಹ್ಮತತ್ವವನ್ನೊಪ್ಪುವವರ (ಶ್ರೀ ರಾಮಾನುಜರ) ತತ್ವವನ್ನು ಹೇಳಲಾಗಿದೆ.

ಹೀಗೆ ಸಿದ್ಧಾಂತಮತವನ್ನು ಮೀಮಾಂಸಕರು ಮತ್ತು ವೇದಾಂತಿಗಳು ವಿರೋಧಿಸುತ್ತಾರೆ. 55 ನೇ ಪ್ರಶ್ನೆಗೆ ಇಲ್ಲಿಯವರೆಗೆ ಉತ್ತರವನ್ನು ಕೊಡಲಾಗಿದೆ.

## ಭಾಟ್ಟರ ಆಕ್ಷೇಪಣೆಗಳು

**ಸುಲಭವಾದ ಕರ್ಮದಿಂದಲೇ ಮೋಕ್ಷವು ಸಿಕ್ಕುವುದಾದರೆ ಕಠಿಣ ಮಾರ್ಗವಾದ ಜ್ಞಾನದ ಗೊಂದಲವಾದರೂ ಏಕೆ?** ಎಂಬುದೇ ಅವರ ಆಕ್ಷೇಪ.

**ಪ್ರ : 68. ಕರ್ಮದಿಂದ ಹೇಗೆ ಮೋಕ್ಷ ಸಿಕ್ಕುತ್ತದೆ. ?**

ಉ : ವೇದದಲ್ಲಿ ವಿಹಿತ ಕರ್ಮ ನಿಷಿದ್ಧ ಕರ್ಮಗಳು ಹೇಳಲ್ಪಟ್ಟಿವೆ. ವಿಹಿತ ಕರ್ಮಗಳಲ್ಲಿ 1) ಕಾಮ್ಯಕರ್ಮ, 2) ನಿತ್ಯಕರ್ಮ 3) ನೈಮಿತ್ತಿಕ ಕರ್ಮ 4) ಪ್ರಾಯಶ್ಚಿತ್ತ ಕರ್ಮವೆಂದು ನಾಲ್ಕು ವಿಧಗಳಿವೆ.

ಇವುಗಳಲ್ಲಿ ಕಾಮ್ಯ ಕರ್ಮಗಳನ್ನು ಮಾಡಬಾರದು. ನಿಷಿದ್ಧ ಕರ್ಮಗಳನ್ನು ಮಾಡಬಾರದು. ನಿತ್ಯ ನೈಮಿತ್ತಿಕ ಕರ್ಮಗಳನ್ನು ವೇದದಲ್ಲಿ ಹೇಳಿದಂತೆ ಸರಿಯಾಗಿ ಮಾಡುತ್ತಾ ಹೋಗಬೇಕು.

**ಪ್ರ : 69. ಕಾಮ್ಯ ಕರ್ಮಗಳೆಂದರೇನು ?**

ಉ : ವೇದದಲ್ಲಿ,ಯಾರಿಗೆ ಯಾವ ಯಾವ ಇಚ್ಛೆ ಇರುತ್ತದೆಯೋ ಆಯಾಯ ಇಚ್ಛೆಯನ್ನು ಪ್ರಾಪ್ತಿಮಾಡಿಕೊಳ್ಳುವುದಕ್ಕಾಗಿ ಅವರವರಿಗೆ ಹೇಳಿರುವ ಕರ್ಮಗಳು ಕಾಮ್ಯಕರ್ಮಗಳೆಂದು ಕರೆಸಿಕೊಂಡಿವೆ.

**ಉದಾ :–** ಗಂಡು ಮಗುವನ್ನು ಬಯಸುವವನು ಪುತ್ರ ಕಾಮೇಷ್ಟಿ ಯಾಗವನ್ನು ಮಾಡಬೇಕು; ಸ್ವರ್ಗದ ಅಪೇಕ್ಷೆಯಿರುವವರೇ ಜ್ಯೋತಿಷ್ಟೋ

ಮ:ಯಾಗವನ್ನು ಮಾಡಬೇಕು. ಇವೆಲ್ಲಾ ಕಾಮ್ಯ ಕರ್ಮಗಳು. ಭಗವದ್ಗೀತೆಯಲ್ಲಿ ಭಗವಂತನು ಸಂನ್ಯಾಸವನ್ನು ಹೇಳುವ ೧೮ ನೇ ಅಧ್ಯಾಯದ ೧ ನೇ ಶ್ಲೋಕದಲ್ಲಿ **"ಕಾಮ್ಯಾನಾಂ ಕರ್ಮಣಾಂನ್ಯಾಸಂ ಸಂನ್ಯಾಸಂ ಕವಯೋವಿದುಃ"** ಅರ್ಜುನಾ ! ಸ್ವರ್ಗಾದಿಫಲಗಳನ್ನು ಕೊಡುವ ಕಾಮ್ಯ ಕರ್ಮಗಳನ್ನು ತ್ಯಜಿಸುವುದಕ್ಕೆ ಸಂನ್ಯಾಸವೆಂದು ಪಂಡಿತರು ಹೇಳುತ್ತಾರೆ'' ಎಂದು ಹೇಳಿದ್ದಾನೆ. ಮತ್ತು ೯ ನೇ ಅಧ್ಯಾಯದ ೨೦ ಮತ್ತು ೨೧ ನೇ ಶ್ಲೋಕದಲ್ಲಿಯೂ ಸ್ವರ್ಗ ಪ್ರಾಪ್ತಿಗೋಸ್ಕರವಾಗಿ ಮಾಡುವ ಕಾಮ್ಯ ಕರ್ಮಗಳನ್ನೂ, ಸ್ವರ್ಗಪ್ರಾಪ್ತಿಯನ್ನೂ-ಆ ಕಾಮುದಾಸರನ್ನು ಅಲ್ಲಗಳೆದಿದ್ದಾನೆ.

ಅಂದರೆ ಇಂತಿಂತಹ ಕರ್ಮಕ್ಕೆ ಇಂತಿಂತಹ ವಿಶಿಷ್ಟಫಲವೆಂದು ನಿರ್ಧರಿಸಿದ ಕರ್ಮಗಳೇ ಕಾಮ್ಯ ಕರ್ಮಗಳು. ಇಂತಹ ಕಾಮ್ಯ ಕರ್ಮಗಳನ್ನು ಮಾಡಬಾರದು. ಎಂದು ಈ ಭಾಟ್ಟ ಮತದವರು ಹೇಳುತ್ತಾರೆ.

## ಪ್ರ : 70. ನಿಷಿದ್ಧ ಕರ್ಮವೆಂದರೇನು ?

ಉ : ವೇದವು ಯಾವುದನ್ನು ಮಾಡಬಾರದೆಂದು ಹೇಳಿದೆಯೋ, ಯಾವುದನ್ನು ಮಾಡುವುದರಿಂದ ನರಕ ಮೊದಲಾದ ಕೆಟ್ಟ ಫಲಗಳನ್ನು ಭೋಗಿಸಬೇಕಾಗುತ್ತದೆಯೋ ಅದು ನಿಷಿದ್ಧ ಕರ್ಮ. **ಉದಾ:–** ಅಭಕ್ಷ್ಯ ಭೋಜನ-ಸುರಪಾನ, ಸತ್ಯವಂತರ ಹಿಂಸೆ. ಪರಸ್ತ್ರೀ ಪರಪುರುಷರಕೂಟ ಇತ್ಯಾದಿಗಳು.

## ಪ್ರ : 71. ನಿತ್ಯಕರ್ಮ ವೆಂದರೇನು ?

ಉ : ಯಾವ ಕರ್ಮಗಳನ್ನು ಮಾಡದೆ ಇರುವುದರಿಂದ ಪ್ರತ್ಯವಾಯವೆಂದರೆ ಪಾಪ ಬರುವುದೋ, ಮಾಡುವುದರಿಂದ ಪುಣ್ಯ ಬರುವುದಿಲ್ಲವೋ ಅಂತಹ ಶಿವಪೂಜೆ, ಸಂಧ್ಯಾವಂದನಾ, ಪಂಚಮಹಾಯಜ್ಞ ಮೊದಲಾದವುಗಳು ನಿತ್ಯಕರ್ಮಗಳು.

## ಪ್ರ : 72. ನೈಮಿತ್ತಿಕ ಕರ್ಮಗಳೆಂದರೇನು ?

ಉ : ಏನಾದರೊಂದು ನಿಮಿತ್ತದಿಂದ ಮಾಡಬೇಕೆಂದು ಹೇಳಿರುವ ಕರ್ಮಗಳು 'ನೈಮಿತ್ತಿಕ' ಕರ್ಮಗಳು. **ಉದಾ :-** ಮಗು ಹುಟ್ಟಿದಾಗ

ಮಾಡುವ ಜಾತೇಷ್ಟಿಗಳು-ಇಲ್ಲಿ ಪುತ್ರ ಜನ್ಮವೇ ನಿಮಿತ್ತ; ಜಾತೇಷ್ಟಿಯೇ ನೈಮಿತ್ತಿಕ ಕರ್ಮವು. "ಜಾತೇಷ್ಟಿ" ಎಂಬುದು ಒಂದು ವಿಶಿಷ್ಟ ಯಜ್ಞದ ಹೆಸರು.

ಇಲ್ಲಿಯವರೆಗೆ ಕಾಮ್ಯಕರ್ಮವೆಂದರೇನು, ನಿಷಿದ್ಧ ಕರ್ಮವೆಂದರೇನು ? ನಿತ್ಯ ನೈಮಿತ್ತಿಕ ಕರ್ಮಗಳೆಂದರೇನೆಂದು ತಿಳಿದಿರಿ.

ಇವುಗಳಲ್ಲಿ ಕಾಮ್ಯ ಕರ್ಮಗಳನ್ನು ಮಾಡಬಾರದು. ಆಗ ಕಾಮ್ಯ ಕರ್ಮಗಳ ಫಲವಾದ ಸ್ವರ್ಗ, ದೇವತ್ವ ಮೊದಲಾದವು ಬರುವುದೇ ಇಲ್ಲ. ನಿಷಿದ್ಧಕರ್ಮಗಳನ್ನು ಬಿಟ್ಟುಬಿಡಬೇಕು-ನಿಷಿದ್ಧಕರ್ಮಗಳನ್ನು ಬಿಡುವುದರಿಂದ ನಿಷಿದ್ಧಕರ್ಮಗಳ ಫಲಗಳಾದ ನರಕಪ್ರಾಪ್ತಿ, ಕೀಳುಜನ್ಮ ಇತ್ಯಾದಿಗಳು ಬರಲಾರವು. ಇನ್ನು ನಿತ್ಯ ನೈಮಿತ್ತಿಕ ಕರ್ಮಗಳನ್ನು ವೇದದಲ್ಲಿ ಹೇಳಿದಂತೆ ಮಾಡುತ್ತಾಹೋದಲ್ಲಿ ಪುಣ್ಯವೂ ಬರುವುದಿಲ್ಲ ಪಾಪವೂ ಬರುವುದಿಲ್ಲ.

ಇನ್ನು ಪ್ರಾರಾಬ್ಧಕರ್ಮಗಳಂತೂ ಜ್ಞಾನಿಗಳಿಗೆ ಇರುವಂತೆ ಕರ್ಮಿಗಳಿಗೂ ಇರುವುದರಿಂದ ಅವುಗಳನ್ನು ಉಪಭೋಗಿಸಿಯೇ ತೀರಿಸಬೇಕು. ಇವು **"ನಭೋಕ್ತಂಕ್ಷೀಯತೇಕರ್ಮ"** ಭೋಗಿಸದೆ ಇವು ನಾಶವಾಗಲಾರವು.

**ಪ್ರ : 73. ಪ್ರಾರಬ್ಧ ಕರ್ಮ ಎಂದರೇನು ?**

ಸಾಮಾನ್ಯವಾಗಿ ಪ್ರಾರಬ್ಧಕರ್ಮವೆಂದರೆ ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮಗಳ ಫಲವನ್ನು ಈ ವರ್ತಮಾನ ಜನ್ಮದಲ್ಲಿ ಅನುಭವಿಸುವುದನ್ನೇ ಪ್ರಾರಬ್ಧವೆಂದು ಕರೆಯುತ್ತಾರೆ.

ಆದರೆ 'ಪ್ರಾರಬ್ಧ' ಎಂಬ ಪದದ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳುವುದೇ ಒಳ್ಳೆಯದು. 'ಪ್ರಾರಬ್ಧ' ಪದದಲ್ಲಿ ಪ್ರ+ಆರಬ್ಧವೆಂಬ ಎರಡು ಅವಯವಗಳಿವೆ. "ತೀವ್ರತೆಯಿಂದ ಪ್ರಾರಂಭವಾದದ್ದು" ಎಂದು ಅದರ ಅರ್ಥ; ಎಂದರೆ ಯಾವ ಕರ್ಮಗಳ ಫಲವನ್ನು ಅನುಭವಿಸಲು ನಾವು ಪ್ರಾರಂಭಮಾಡಿರುವೆವೋ ಆ ಕರ್ಮಗಳೆಂದು ಈ ಶಬ್ದದ ಅರ್ಥವಾಗುವುದು.

ಈ ಪ್ರಾರಬ್ಧ ಕರ್ಮದ ವಿಷಯದಲ್ಲಿ ಎರಡು ಪಕ್ಷಗಳಿವೆ. ೧) ಹಿಂದಿನ ಜನ್ಮದಲ್ಲಿ ಮಾಡಿದ ಎಲ್ಲಾ ಕರ್ಮಗಳ ಒಟ್ಟು ಫಲದಿಂದಲೇ ಈ ಜನ್ಮ ಬಂದಿದೆ. ಎಂಬುದು ಒಂದು ಪಕ್ಷ ಈ ಪಕ್ಷದವರ ಅಭಿಪ್ರಾಯದಂತೆ ಸಂಚಿತ ಕರ್ಮವೆಂಬುದು ಇಲ್ಲವೇ ಇಲ್ಲ. ಇವರ ಪಕ್ಷಕ್ಕೆ "ಐಕಭವಿಕ" ಪಕ್ಷವೆಂದು ಹೆಸರು ಒಂದು ಜನ್ಮದಲ್ಲಿ ಮಾಡಿದ ಎಲ್ಲಾ ಕರ್ಮದ ಫಲವನ್ನು ಮುಂದಿನ ಜನ್ಮದಲ್ಲಿ ಭೋಗಿಸಿ ಮುಗಿಸಲೇಬೇಕು. ಇದು ಈ ಪಕ್ಷದವರ ಅಭಿಪ್ರಾಯ. "ಐಕಭವಿಕ" ಎಂಬ ಶಬ್ದದ ಅರ್ಥವಾದರೂ ಪ್ರಾರಬ್ಧ ಎಂಬ ಮಾತಿನ ಅರ್ಥವನ್ನೇ ತೋರಿಸುವಂತಿದೆ. ಇದು ಬಹು ಜನರಿಗೆ ಸಮ್ಮತವಿಲ್ಲ.

೨) ಹೆಚ್ಚು ರೂಢಿಯೊಳಗಿರುವ ಇನ್ನೊಂದು ಪಕ್ಷದಂತೆ ಪ್ರಾರಬ್ಧ ಕರ್ಮ ಬೇರೆ, ಸಂಚಿತ ಕರ್ಮ ಬೇರೆ. ಒಬ್ಬ ಮನುಷ್ಯ ಈ ಜನ್ಮದಲ್ಲಿ ಬೇರೆ ಬೇರೆ ಕರ್ಮಗಳನ್ನು ಮಾಡುತ್ತಾನಲ್ಲವೆ! ಆ ಎಲ್ಲಾ ಕರ್ಮದ ಫಲವೆಲ್ಲಾ ಒಂದೇ ಆಗಿರುವುದಿಲ್ಲ. ಆದುದರಿಂದ ಈ ಜನ್ಮದಲ್ಲಿ ಮಾಡಿದ ಎಲ್ಲಾ ಕರ್ಮದ ಫಲವನ್ನು ಮುಂದಿನ ಒಂದೇ ಜನ್ಮದಲ್ಲಿ ಭೋಗಿಸಿ ಮುಗಿಸಲಾಗುವುದಿಲ್ಲ.

**ಉದಾ :–** ಒಬ್ಬನು ಈ ಜನ್ಮದಲ್ಲಿ ಅನೇಕ ಕರ್ಮಗಳನ್ನು ಮಾಡಿದ್ದಾನೆ. ಅವುಗಳಲ್ಲಿ, ಒಂದು ಕರ್ಮದ ಫಲಕ್ಕೆ ಕತ್ತೆಯಾಗಿ ತಿರುಗುವ ಫಲವಿರುವುದೆಂದು ತಿಳಿಯಿರಿ. ಮತ್ತೊಂದು ಕರ್ಮದ ಫಲಕ್ಕೆ ರಾಜನಾಗಿ ಸಿಂಹಾಸನದ ಮೇಲೆ ಅಟ್ಟಹಾಸದಿಂದ ಮೆರೆಯುವ ಫಲವಿರುವುದೆಂದು ತಿಳಿಯಿರಿ; ಇನ್ನೊಂದು ಕರ್ಮದ ಫಲಕ್ಕೆ ವೈರಾಗ್ಯವಂತನಾಗಿ ಆತ್ಮಜ್ಞಾನವನ್ನು ಪಡೆಯಲು ಪ್ರಯತ್ನಪಡುವ ಫಲ ಇರುವುದೆಂದು ತಿಳಿಯಿರಿ. ಈಗ ಮುಂದಿನ ಒಂದೇ ಜನ್ಮದಲ್ಲಿ ಕತ್ತೆಯಾಗಿ, ರಾಜನಾಗಿ, ವೈರಾಗ್ಯವಂತನಾಗಿ ಎಲ್ಲಾ ಕರ್ಮದ ಫಲವನ್ನು ಭೋಗಿಸಿ ಮುಗಿಸಲಾರ. ಕತ್ತೆಯಾಗಿ ಹುಟ್ಟಿ ಆ ಕರ್ಮದ ಫಲ ಭೋಗಿಸಿ ಮುಗಿಸಿದರೆ ರಾಜನಾಗುವ, ಜಿಜ್ಞಾಸುವಾಗುವ ಕರ್ಮ ಫಲಗಳೆಲ್ಲಾ ಹಾಗೆಯೇ ಉಳಿಯುತ್ತವೆ. ಹೀಗೆ ಯಾವ ಕರ್ಮದ ಫಲಗಳು ಉಳಿಯುತ್ತಾ ಹೋಗುವವೋ ಅವೇ ಸಂಚಿತ ಕರ್ಮ

ಗಳು. ಸಂಸಾರವು ಅನಾದಿಯಾದುದರಿಂದ ಸಂಚಿತ ಕರ್ಮಗಳೂ ಅನಂತಂ ಗಳೇ, ಇಂತಹ ಸಂಚಿತ ಕರ್ಮಗಳರಾಶಿ ಬೇಕಾದಷ್ಟು ಬಿದ್ದಿದೆ. ಅವುಗಳಲ್ಲಿ ಯಾವ ಕರ್ಮಗಳ ಫಲಗಳು ಮುಂದೆ ಇದ್ದು ಫಲೋನ್ಮುಖವಾಗಿವೆಯೋ ಆ ಸಂಬಂಧವಾದ ಯೋನಿಯಲ್ಲಿ ಜನ್ಮವಾಗುವುದು. ಹಾಗೆ ಈಗಿನ ಜನ್ಮವನ್ನು ತಂದುಕೊಡುವ ಸಂಚಿತ ಕರ್ಮಗಳ ರಾಶಿಯಲ್ಲಿ ಯಾವ ವಿಶಿಷ್ಟಕರ್ಮಗಳ ಫಲವನ್ನು ಭೋಗಿಸಬೇಕಾಗಿದೆಯೋ ಅಂತಹ ಕರ್ಮಗಳೇ ಪ್ರಾರಬ್ಧಕರ್ಮಗಳು ಎಂದು ಎರಡನೇ ಪಕ್ಷದವರು ಹೇಳುತ್ತಾರೆ. ಆ ಪ್ರಾರಬ್ಧ ಕರ್ಮಗಳನ್ನು ಭೋಗಿಸುತ್ತಾ ಈ ಜನ್ಮದಲ್ಲಿ ಮತ್ತೆ ಅನೇಕ ಕರ್ಮಗಳನ್ನು ಮಾಡುತ್ತಾ ಹೋಗುವುದು. ಅವೆಲ್ಲಾ ಸಂಚಿತ ಕರ್ಮದ ರಾಶಿಗೆ ಬೀಳುತ್ತಾ ಇರುತ್ತವೆ.

ಇಂತಹ ಪ್ರಾರಬ್ಧ ಕರ್ಮಗಳು ಜ್ಞಾನಿಗಳಿಗೆ ಇರುವಂತೆ ನಮಗೂ ಇರುತ್ತವೆ. ಇವುಗಳನ್ನು ಅವರು ಭೋಗಿಸಿ ಮುಗಿಸಿದಂತೆಯೇ ನಾವೂ ಭೋಗಿಸಿ ಮುಗಿಸುತ್ತೇವೆ.

ಮತ್ತು ಸಂಸಾರವೆಲ್ಲವೂ ಕಾಮ್ಯ ಮತ್ತು ನಿಷಿದ್ಧ ಕರ್ಮಗಳ ಫಲವೇ ಆಗಿರುವುದರಿಂದ, ಅವೆರಡನ್ನು ಮಾಡದೆ ಬಿಟ್ಟರೆ ಅವುಗಳಿಂದ ತಪ್ಪಿಸಿಕೊಂಡಂತಾಗುತ್ತದೆ. ಆಗ ಎಲ್ಲಾ ಅನರ್ಥವೂ ತಾನಾಗಿಯೇ ಕಡಿದುಹೋಗುತ್ತದೆ.

ಮತ್ತು ನಿತ್ಯ ನೈಮಿತ್ತಿಕ ಕರ್ಮಗಳನ್ನು ವೇದದಲ್ಲಿ ಹೇಳಿದಂತೆ ತಪ್ಪದೆ ಮಾಡುತ್ತಾಹೋದಲ್ಲಿ ಜನ್ಮವನ್ನು ಕೊಡುವ ಪಾಪವಾಗಲೀ, ಪುಣ್ಯವಾಗಲೀ ಬಂದು ಗಂಟುಬೀಳುವುದೇ ಇಲ್ಲ.

ಈ ರೀತಿ ಆತ್ಮಜ್ಞಾನವು ವೇದದಲ್ಲಿ ಹೇಳಿದೆ ಎಂದು ಇಟ್ಟುಕೊಂಡರೂ ಮೋಕ್ಷಕ್ಕಾಗಿ ಕರ್ಮಮಾಡದೆ ಬೇರೆಗತಿಯೇಯಿಲ್ಲವೆಂದು ಸಿದ್ಧವಾಗುತ್ತದೆ. ಆದುದರಿಂದ ಮುಮುಕ್ಷುವು ಮೋಕ್ಷ ಪಡೆಯಬೇಕಾದಲ್ಲಿ ಜ್ಞಾನದ ಗೊಂದಲಕ್ಕೆ ಹೋಗದೆ ಕರ್ಮಗಳಲ್ಲಿಯೇ ರತನಾಗತಕ್ಕದ್ದು.

ಇಲ್ಲಿಯವರೆಗೆ ಭಾಟ್ಟಮತದವರ ಮತವನ್ನೊಪ್ಪಿ ಹೇಳಿದ್ದಾಯಿತು. ಇದು ಭಾಟ್ಟಮತದವರ ಮೋಕ್ಷದ ಕಲ್ಪನೆ.

# ಪ್ರಭಾಕರ ಮತದ ಮಂಡನೆ

**ಪ್ರ : 74. ಪ್ರಾಭಾಕರರ ಮತದಂತೆ ಮೋಕ್ಷವು ಹೇಗೆ ಬರುತ್ತದೆ ?**

ಉ : 1)ಆತ್ಮಜ್ಞಾನವನ್ನು ವೇದದಲ್ಲಿ ಎಲ್ಲಿಯೂ ಹೇಳಿಯೇ ಇಲ್ಲ. 2) ಶ್ರುತಿ ಮತ್ತು ಸ್ಮೃತಿಗಳು ಒಂದೇ ಅಭಿಪ್ರಾಯದಿಂದ ಕರ್ಮವನ್ನು ಮಾಡಬೇಕೆಂದು ಹೇಳುತ್ತವೆ. ಆದ್ದರಿಂದ ಕರ್ಮವೇ ಮೋಕ್ಷಕ್ಕೆ ಸಾಧನ. 3) ಶ್ರುತಿ ಮತ್ತು ಸ್ಮೃತಿಗಳಲ್ಲಿ ಆತ್ಮಜ್ಞಾನವನ್ನು ಮಾಡಿಕೊಂಡೇತೀರಬೇಕೆಂದು ಯಾವ ವಿಧಿಯೂ ಸಿಕ್ಕಲಿಲ್ಲ. **"ಆತ್ಮಾವಾಅರೆದ್ರಷ್ಟವ್ಯಃ"** ಇವು ಕರ್ಮಕ್ಕೆ ಬೇಕಾದ ಕರ್ತೃವಾದ ಆತ್ಮನನ್ನು ತಿಳಿಸುತ್ತವೆ. ಮೋಕ್ಷಸಾಧನವನ್ನು ತಿಳಿಸುವುದಿಲ್ಲ. 4) ವೇದಧರ್ಮವನ್ನು ಬಲ್ಲ ಜೈಮುನಿಯು ಕರ್ಮವನ್ನೇ ಮಾಡಬೇಕೆಂದು ಹೇಳಿದ್ದಾನೆ; ವೇದವೆಲ್ಲಾ ಕರ್ಮಪರವಾಗಿರುವುದರಿಂದ ಕರ್ಮವನ್ನು ಬಿಟ್ಟು ಉಳಿದದ್ದನ್ನು (ಅಂದರೆ ಜ್ಞಾನ ಭಾಗವನ್ನು )ಹೇಳುವ ಭಾಗವೆಲ್ಲ ನಿಷ್ಪ್ರಯೋಜಕವುಎಂದು ಜೈಮುನಿಯು ಪೂರ್ವ ಮೀಮಾಂಸ ಶಾಸ್ತ್ರದಲ್ಲಿ ಹೇಳಿದ್ದಾನೆ.

5) ಕರ್ಮವನ್ನೇ ಮಾಡಬೇಕೆಂದು ವೇದಭಾಗವೇ ಹೇಳಿದೆಯಲ್ಲಾ **–ಉದಾ :-** ಈಶಾವಾಸ್ಯೋಪನಿಷತ್ತಿನ ೨ ನೇ ಮಂತ್ರದಲ್ಲಿ **"ಕುರ್ವನ್ನೇವೇಹ ಕರ್ಮಾಣಿಜಿಜೀವಿಷೇಚ್ಛತಂಸಮಾಃ ।** ಈ ಲೋಕದಲ್ಲಿ ಕರ್ಮಗಳನ್ನು ಮಾಡುತ್ತಲೇ ತನ್ನ ಆಯುಷ್ಯದ ನೂರುವರ್ಷಗಳನ್ನು ಕಳೆಯಲಿಚ್ಛಿಸಬೇಕೆಂದು ಈ ವೇದಮಂತ್ರವೇ ಹೇಳಿರುವುದರಿಂದ ಮುಮುಕ್ಷುವಿನ ಆಯುಷ್ಯವೆಲ್ಲವೂ ಸಂಪೂರ್ಣವಾಗಿ ಕರ್ಮಾನುಷ್ಠಾನದಲ್ಲಿಯೇ ಕಳೆದು ಹೋಗಬೇಕೆಂದು ವೇದಾಂತದ ಅಭಿಪ್ರಾಯವಾದಂತಾಯಿತು.

6) ಬ್ರಹ್ಮಜ್ಞಾನವಾಗಬೇಕಾದರೆ ವೇದಾಂತ ವಾಕ್ಯಗಳೇ ಪ್ರಮಾಣವೆಂದು ಜ್ಞಾನಿಯೂ ಒಪ್ಪಿಕೊಳ್ಳುತ್ತಾನೆ. ಆ ವೇದಾಂತ ವಾಕ್ಯಗಳೊಳಗೆ ಕ್ರಿಯಾಪದವೇ ಮುಖ್ಯವಾಗಿರುವುದರಿಂದ ಕ್ರಿಯಾಪದದ ವಿನಹ ವಾಕ್ಯದೊಳಗಿನ ಬೇರೆ ಬೇರೆ ಪದಗಳು ಕೂಡುವುದೇ ಇಲ್ಲ. ಪದಗಳಿಲ್ಲದೆ

ಯಾವ ವಾಕ್ಯವೂ ಪೂರ್ಣವಾದ ಅರ್ಥವನ್ನು ಕೊಡಲಾರದು. ಆದುದರಿಂದ ಜ್ಞಾನವೇ ಕರ್ತವ್ಯವೆಂದು ಹೇಳುವ ವೇದ ವಾಕ್ಯಗಳೇ ಇಲ್ಲವೆಂದಾಯಿತು. (ಕ್ರಿಯಾ ಪದವಿರುವ ವಾಕ್ಯಕ್ಕೆ ಕರ್ಮದಲ್ಲಿಯೇ ತಾತ್ಪರ್ಯ).

7) ಒಂದು ಪಕ್ಷ ಜ್ಞಾನದಿಂದ ಮುಕ್ತಿ ಎಂದು ಒಪ್ಪಿಕೊಂಡರೂ ಕರ್ಮವು ಮೋಕ್ಷಕ್ಕೆ ಮುಖ್ಯ ಸಾಧನವಾಗಿ ಜ್ಞಾನವು ಅದರ ಒಂದು ಭಾಗವಾಗಬಹುದು; ಅಥವಾ ಜ್ಞಾನವೇ ಮುಖ್ಯವಾಗಿ ಕರ್ಮವು ಅದರ ಒಂದು ಭಾಗವಾಗಬಹುದು. ಹೀಗೆ ಕರ್ಮ ಮತ್ತು ಜ್ಞಾನ ಎರಡೂ ಸಮಾನವಾಗಿ ಕೂಡಿಯೇ ಮೋಕ್ಷವಾಗಬಹುದು. ಈ ಕಾರಣದಿಂದ ಜ್ಞಾನಒಂದರಿಂದಲೇ ಮುಕ್ತಿಯಾಗಲಾರದು.

**ಸಾರಾಂಶ:-** ಎಲ್ಲಾ ಆಶ್ರಮದವರೂ ವಿಹಿತವೆಂದು ಹೇಳಿದ ಕರ್ಮಗಳನ್ನೆಲ್ಲಾ ಹಿಂದೆ ಹೇಳಿದ ರೀತಿಯಿಂದ ಆಚರಿಸುವುದರಿಂದ ಮೋಕ್ಷವಾದೀತೇ ವಿನಃ ಬೇರೆ ಯಾವ ಸಾಧನದಿಂದಲೂ ಮೋಕ್ಷವಾಗಲಾರದು.

## ಪ್ರಾಭಾಕರರ ಮತದ ಖಂಡನೆ

**ಪ್ರ : 75. ಕರ್ಮದಿಂದ ಏಕೆ ಮೋಕ್ಷವಾಗುವುದಿಲ್ಲ. ಜ್ಞಾನದಿಂದಲೇ ಹೇಗೆ ಮೋಕ್ಷವಾಗುವುದು ?**

ಉ : ಕರ್ಮ ಮತ್ತು ಜ್ಞಾನಕಾಂಡಗಳ ಫಲ, ಅಧಿಕಾರಿ, ವಿಷಯ, ಅಥವಾ ಸ್ವರೂಪ ಮತ್ತು ಸಾಧನಗಳೆಲ್ಲವೂ ತೀರಾ ವಿಲಕ್ಷಣವಾಗಿವೆ. ಕರ್ಮವು ಅಜ್ಞಾನದ ಕಾರ್ಯವಾಗಿರುವುದರಿಂದ ಸಂಸಾರ ಕಾರಕವೇವಿನಃ ಸಂಸಾರ ಮಾರಕವಲ್ಲ. ಅಂದರೆ ಕರ್ಮವು ತೀರಾ ನಿರುಪಯುಕ್ತವೆಂದು ಅರ್ಥವಲ್ಲ. ಚಿತ್ತಶುದ್ಧಿಗಾಗಿ ಮಾತ್ರ ಇದರ ಉಪಯೋಗ. ಇದು ಪರಂಪರಾಕಾರಣವೇ ವಿನಃ ಸಾಕ್ಷಾತ್ ಕಾರಣವಲ್ಲ ವೆಂಬುದು ವೇದಾಂತಿಗಳ ಅಭಿಪ್ರಾಯ.

**೧) ಕರ್ಮಕಾಂಡದ ಫಲವುಬೇರೆ ಜ್ಞಾನಕಾಂಡದ ಫಲವು ಬೇರೆ ಎಂದರೆ ಏನು ?**

ಕರ್ಮಕಾಂಡದ ಫಲವು ಸಾಧ್ಯ—ಜ್ಞಾನಕಾಂಡದ ಫಲವು ಸಿದ್ಧವೆಂದು ಶ್ರೀ ಶಂಕರರೇ ಹೇಳಿದ್ದಾರೆ- ಕರ್ಮಕ್ಕೆ ಉತ್ಪತ್ತಿ, ಪ್ರಾಪ್ತಿ, ವೈಕಾರ್ಯ ಮತ್ತು ಸಂಸ್ಕಾರಗಳು ಫಲಗಳು-ಇವಾವುಗಳಿಂದಲೂ ಮುಕ್ತಿಯಾಗಲಾರದು.

1) ಮೋಕ್ಷಕ್ಕೆ ಅಜ್ಞಾನ ನಾಶ ಒಂದೇ ಕಾರಣವಾಗಿರುವುದರಿಂದ ಕರ್ಮವು ಮುಕ್ತಿಗೆ ಸಾಧನವಾಗಲಾರದು.

ಉದಾ :– ಕತ್ತಲೆ ಇರುವುದರಿಂದಲೇ ಹುಟ್ಟಿದ ಭ್ರಮೆಯು ಮತ್ತಷ್ಟು ಕತ್ತಲೆಯಿಂದ ನಿವಾರಣೆಯಾಗಲಾರದಲ್ಲವೆ ! ಅದರಂತೆ ಅಜ್ಞಾನವು ಅದರ ಕಾರ್ಯವಾದ ಕರ್ಮದಿಂದ ನಾಶವಾಗಲಾರದು.

2) ಮುಕ್ತಿಯು ಕರ್ಮದಿಂದಲೇ ಸಿಕ್ಕುವುದಾದರೆ-ಒಂದೇ ಕರ್ಮದಿಂದ ಸಿಕ್ಕಬಹುದೇ ಅಥವಾ ಎಲ್ಲಾ ಕರ್ಮಗಳ ಒಟ್ಟು ಭಾಗದಿಂದ ಸಿಗಬಹುದೆ ? ಒಂದೇ ಕರ್ಮದಿಂದ ಮೋಕ್ಷವಾಗುತ್ತದೆಂದರೆ ವೇದದಲ್ಲಿ ಹೇಳಿದ ಉಳಿದ ಕರ್ಮಗಳು ವ್ಯರ್ಥವಾಗುವುವು; ಎಲ್ಲಾ ಕರ್ಮಗಳೂ ಕೂಡಿಯೇ ಮೋಕ್ಷವಾಗುತ್ತದೆಂದರೆ ಅವೆಲ್ಲವೂ ಕೂಡಿ ಒಂದೇ ಕರ್ಮವಾಗಬೇಕಾಗುತ್ತದೆ.

3) ನಿತ್ಯಕರ್ಮವು ಪಾಪವನ್ನು ತೊಳೆಯುವುದರಿಂದ ಮುಕ್ತಿಯನ್ನು ಕೊಡಲಾರದು. ಕಾಮ್ಯ ಕರ್ಮವು ಸ್ವರ್ಗಾದಿ ಫಲಕೊಡುವುದಾದ್ದರಿಂದ ಅದರಿಂದಲೂ ಮುಕ್ತಿ ದೊರೆಯಲಾರದು.

4) ಯಾವುದೇ ಇಂತಾದ್ದೊಂದು ಕರ್ಮದಿಂದ ಮೋಕ್ಷವು ದೊರಕುವುದೆಂಬುದನ್ನು ಶ್ರುತಿಯು ತನ್ನ ಬಾಯಿಂದ ಹೇಳಿದ್ದನ್ನು ನಾನೆಲ್ಲಿಯೂ ಕೇಳಿಲ್ಲ.

5) ನಿಷಿದ್ಧ ಮತ್ತು ಕಾಮ್ಯ ಕರ್ಮಗಳನ್ನು ನಾವೂ ಬಿಡಬೇಕೆನ್ನುತ್ತೇವೆ. ನೀವೂ ಅದನ್ನೇಬಿಡಬೇಕೆನ್ನುತ್ತೀರಿ. ಮತ್ತು ನಿಮ್ಮ ಅಭಿಪ್ರಾಯದಂತೆ ನಿತ್ಯ ಕರ್ಮಕ್ಕೆ ಫಲವೇ ಇಲ್ಲದಿರುವುದರಿಂದಲೂ, ನೈಮಿತ್ತಿಕ ಕರ್ಮವು ಮೋಕ್ಷಕ್ಕೆ ಸಂಬಂಧ ಪಡದೇ ಇರುವುದರಿಂದಲೂ ಮೋಕ್ಷವು ಕರ್ಮದಿಂದ ಸಿಕ್ಕುವ ವಸ್ತುವಲ್ಲವೆಂಬುದು ಸಿದ್ಧವಾಯಿತು.

**೨) ಕರ್ಮಕಾಂಡದ ಅಧಿಕಾರಿಯೇ ಬೇರೆ ಜ್ಞಾನಕಾಂಡದ ಅಧಿಕಾರಿಯೇ ಬೇರೆ ಎಂದರೇನು. ?**

ವರ್ಣಾಶ್ರಮದ ಅಭಿಮಾನಿಯಾಗಿ, ತಾನು ಆನಂದರೂಪನೆಂಬುದನ್ನು ಮರೆತು ರಾಗದ್ವೇಷಾದಿಗಳಿಗೆ ಬಲಿಯಾಗಿರುವವನೇ ಕರ್ಮಕಾಂಡದ ಅಧಿಕಾರಿ ಸಾಧನ ಚತುಷ್ಟಯ ಸಂಪನ್ನನಾದವನೇ ಜ್ಞಾನಕಾಂಡದ ಅಧಿಕಾರಿ.

೧) ಅಜ್ಞಾನದಿಂದಲೇ ಕೆಲವು ವಸ್ತುಗಳು ಹಿತವೆಂದೂ ಮತ್ತೆ ಕೆಲವು ವಸ್ತುಗಳು ಅಹಿತವೆಂಬುದು ಸಂಭವಿಸುತ್ತದೆ. ಹಿತವೆಂಬ ವಸ್ತುಗಳನ್ನು ಪಡೆಯುವ ಕ್ರಿಯೆಯನ್ನು ಅಹಿತವೆಂಬ ವಸ್ತುಗಳ ತ್ಯಾಗಮಾಡಬೇಕೆನ್ನುವ ಕ್ರಿಯೆಯನ್ನು ವೇದಶಾಸ್ತ್ರವೇ ಹೇಳದೆ. ಹಿತವಾದವಸ್ತುಗಳನ್ನು ದೊರಕಿಸಿಕೊಳ್ಳುವ ಅಹಿತ ವಸ್ತುಗಳನ್ನು ಬಿಡುವ ಉಪಾಯವನ್ನೂ ಹೇಳಿದೆ.

**ಪ್ರ : 76. ಮನುಷ್ಯನು ತನಗೆ ಹಿತವಾಗಬೇಕೆಂದೂ ಅಹಿತವಾಗಬಾರದೆಂದೂ ಬಯಸಲು ಕಾರಣವೇನು ?**

ಉ : ನಾವು ಅದ್ವಿತೀಯ ಆನಂದರೂಪ ಆತ್ಮಸ್ವರೂಪರಾಗಿದ್ದಾಗ್ಯೂ ಅದುತಿಳಿಯದೆ ಇರುವುದರಿಂದ ಹಿತ-ಅಹಿತವೆಂಬ ಭಾವ ಹುಟ್ಟಿದೆ. ಅಂದರೆ ಆತ್ಮನಜ್ಞಾನವು ಆಗದೆ ಇರುವುದರಿಂದಲೇ ನಮಗೆ ಹಿತವಾಗಬೇಕೆಂದೂ ಅಹಿತವಾಗಬಾರದೆಂದೂ ಬಯಸುತ್ತೇವೆ.

**ಉದಾ:–** ಮರುಭೂಮಿ ಮತ್ತು ಕಪ್ಪೇಚಿಪ್ಪಿನ ನಿಜವಾದ ಜ್ಞಾನವು ಆಗದೆ ಇರುವುದರಿಂದ ಅವು ಕ್ರಮವಾಗಿ ನೀರು ಮತ್ತು ಬೆಳ್ಳಿ ಎಂದು ಮೋಹಗೊಳ್ಳುತ್ತೇವೆ. ಆ ಮೋಹದಿಂದ ಬೆಳ್ಳಿ ಒಳ್ಳೆಯದೆಂದೂ, ಲಾಭದಾಯಕವೆಂದೂ ಅದರ ಮೇಲೆ ಹಿತವೂ, ನೀರು ದಾಹನಿವಾರಿಸುತ್ತದೆ ಎಂದು ಅದರ ಮೇಲೆ ಹಿತವೂ, ಹಾಗೆಯೇ - ಹಗ್ಗದಲ್ಲಿ ಕಂಡಹಾವು ಕಡಿಯುವುದೆಂದು ಅದರ ಮೇಲೆ ಅಹಿತವು ಕಂಡುಬರುತ್ತವೆ. ಅಂದರೆ ಈ ಮೋಹವೇ ಎಲ್ಲಾ ಕರ್ಮಗಳಿಗೂ ಪ್ರವೃತ್ತಿ ಮಾಡುವುದರಿಂದ ಮೋಹವೇ ಕರ್ಮ ಪ್ರವೃತ್ತಿಗೆ ಕಾರಣವೆಂದು ನಿಶ್ಚಯಿಸಿದಂತಾಯಿತು. ಇದೆಲ್ಲಕ್ಕೂ ಅದ್ವಿತೀಯ ಆನಂದರೂಪವಾದ ಆತ್ಮನನ್ನು ತಿಳಿಯದಿರುವುದೇ ಕಾರಣ.

**ಪ್ರ : 77. ಆತ್ಮನು ಅದ್ವಿತೀಯ ಆನಂದರೂಪನೆಂಬುದಕ್ಕೆ ಪ್ರಮಾಣವೇನು ?**

ಉ : ಗಾಢನಿದ್ದೆಯಲ್ಲಿ ಯಾವ ವಿಷಯಗಳು ಇಲ್ಲದಿದ್ದರೂ ಅಲ್ಲಿ ಸುಖವನ್ನು ಅನುಭವಿಸುತ್ತೇವೆ. ಆ ಸುಖವು ಪ್ರತ್ಯಕ್ಷ ಸುಖ; ನಿರ್ವಿಷಯಾನಂದ ಸುಖ.

**ಪ್ರ : 78. ಸುಖವೆಂದರೇನು ?**

ಉ : ಎಲ್ಲಾ ವಸ್ತುಗಳು ಯಾವುದರಸಲುವಾಗಿ ಬೇಕಾಗುವವೋ, ಯಾವುದು ಉಳಿದಯಾವ ವಸ್ತುಗಳ ಸಲುವಾಗಿಯೇ ಬೇಕಾಗದೆ ತನ್ನಷ್ಟಕ್ಕೆ ತಾನೇ ಬೇಕಾಗುವುದೋ ಅದನ್ನೇ ಸುಖವೆಂದು ಹೇಳುತ್ತಾರೆ. ಇದು ಆತ್ಮನಲ್ಲಿ ಮಾತ್ರ ಕಂಡುಬರುತ್ತದೆ.

ಸುಖ ಮತ್ತು ಆತ್ಮನಲಕ್ಷಣಗಳು ಒಂದೇ ಆಗಿರುವುದರಿಂದ ಮೂಲತಃ ಅವೆರಡೂ ಒಂದೇ ಇರಬೇಕೆಂದು ಸಿದ್ಧವಾಗುತ್ತದೆ. ಅವೆರಡೂ ಬೇರೆ ಬೇರೆ ಇದ್ದುದಾದರೆ ಅವುಗಳಲಕ್ಷಣಗಳೂ ಬೇರೆ ಬೇರೆ ಯಾಗಿರಬೇಕಾಗಿತ್ತು. ಆದ್ದರಿಂದ ಆತ್ಮನ ಸ್ವರೂಪವೇ ಸುಖವೆಂದು ಸಿದ್ಧವಾಗುತ್ತದೆ.

ಮತ್ತು, ನಾವು ಉಳಿದೆಲ್ಲ ವಸ್ತುಗಳನ್ನು ಪ್ರೀತಿಸುವುದು ನಮಗಾಗಿ; ನಮ್ಮನ್ನೇ ನಾವು ಪ್ರೀತಿಸುವುದು ಮಾತ್ರ ಹೀಗೆ ಬೇರೆ ವಸ್ತುವಿನ ಸಲುವಾಗಿ ಅಲ್ಲ. ಆದ್ದರಿಂದ ನಮ್ಮ ಮೇಲಿನ ಪ್ರೇಮ ಅಂದರೆ ಆತ್ಮನ ಮೇಲಿನ ಪ್ರೇಮ ನಿರುಪಾಧಿಕ ಪ್ರೇಮ. ಈ ರೀತಿ ಆತ್ಮನು ಪರಮ ಪ್ರೇಮಕ್ಕೆ ಎಂದರೆ ನಿರುಪಾಧಿಕವಾದ, ತೀರಾ ಹೆಚ್ಚಿನ ಪ್ರೇಮಕ್ಕೆ ಆಸ್ಪದ ಅಥವಾ ವಿಷಯವಾಗಿದ್ದಾನೆ. ಇದನ್ನೇ ಶ್ರುತಿಯೂ "ಆತ್ಮಾನಸ್ತುಕಾಮಾಯ ಸರ್ವಂ ಪ್ರಿಯಂಭವತಿ" ಎಂದು ಹೇಳುತ್ತದೆ.

ಬ್ರಹ್ಮನಿಂದ ಮೊದಲು ಮಾಡಿ ಹುಲ್ಲುಕಡ್ಡಿಯವರೆಗಿನ ಎಲ್ಲಾ ಪ್ರಾಣಿಗಳು ತಮ್ಮನ್ನೇ ತಾವು ನಿರುಪಾಧಿಕವಾಗಿಯೇ ಪ್ರೀತಿಸುತ್ತವೆಂಬುದು ಸ್ಪಷ್ಟವೇ ಆಗಿದೆ. ಇದನ್ನೇ ಬೃಹದಾರಣ್ಯಕಉಪನಿಷತ್ತು "**ಏಷೋಽಸ್ಯ ಪರಮ ಆನಂದ**"ವೆಂದೂ "**ಆತ್ಮೈವಾನಂದ**"ವೆಂದು ತೈತ್ತರೀಯವೂ, ಮೊದಲಾಗಿ ಆತ್ಮನು ಆನಂದ ಸ್ವರೂಪನೆಂದು ಹೇಳುತ್ತವೆ.

ಈ ರೀತಿ ಪ್ರತ್ಯಕ್ಷ, ಅನುಮಾನ ಮತ್ತು ವೇದಾಂತಗಳೆಂಬ ಮೂರೂ ಪ್ರಮಾಣಗಳಿಂದ ಆತ್ಮನು ಕೇವಲ ಪರಮಾನಂದ ಸ್ವರೂಪನೆಂದೂ ದುಃಖವು ಆತ್ಮನಿಗೆ ಸಂಬಂಧವೇ ಇಲ್ಲವೆಂದೂ ಸಿದ್ಧವಾಯಿತು.

ಇಂತಹ ಆತ್ಮನ ಜ್ಞಾನವಾಗದೆ ಇದ್ದಾಗಲೇ ಹಿತ ಆಗಬೇಕೆಂದು ಅಹಿತವಾಗಬಾರದೆಂಬ ಮೋಹವು ಹುಟ್ಟುತ್ತದೆ. ಈ ಹಿತವನ್ನು ದೊರಕಿಸಿ ಕೊಳ್ಳಬೇಕೆಂಬ ಇಚ್ಛೆಯನ್ನಾಗಲೀ ಅಹಿತವಸ್ತುವನ್ನು ತ್ಯಜಿಸಬೇಕೆಂಬ ಇಚ್ಛೆಯನ್ನಾಗಲೀ ವೇದವು ಹೇಳುವುದಿಲ್ಲ. ಈ ಇಚ್ಛೆಗಳು ಅಜ್ಞಾನಿಯಲ್ಲಿ ಸ್ವಾಭಾವಿಕವಾಗಿಯೇ ಇರುವುವು. ಇವು ಪಶುಗಳಲ್ಲಿಯೂ ಕಂಡು ಬರುತ್ತವೆ.

**೩) ಕರ್ಮಕಾಂಡದ ವಿಷಯವೇ ಬೇರೆ ಜ್ಞಾನಕಾಂಡದ ವಿಷಯವೇ ಬೇರೆ ಎಂದರೇನು ?**

ಆತ್ಮತತ್ವದ ನಿಜವಾದ ಸ್ವರೂಪವನ್ನು ಅರಿಯದವನೇ ವಿಧಿ ನಿಷೇಧ ಕರವಾದ ವೇದದ ಕರ್ಮಕಾಂಡಕ್ಕೆ ಅಧಿಕಾರಿಯಾಗಿದ್ದಾನೆಂಬುದನ್ನು ತೋರಿಸಿದ್ದಾಯಿತು. ಇನ್ನು ಜ್ಞಾನದ ವಿಷಯವನ್ನು ವಿಚಾರಮಾಡಿದರೆ ಕರ್ಮದಲ್ಲಿ ಪ್ರವೃತ್ತಿಯಾಗುವುದೇ ಕಂಡುಬರುವುದಿಲ್ಲ. ಇದನ್ನು ಉದಾಹರಣೆ, ಯಿಂದ ತಿಳಿಯೋಣ.

**ಉದಾ :** ೧) ಆಭರಣವು ಕೊರಳೊಳಗಿದ್ದರೂ ಅದು ಸಿಕ್ಕಲಿಲ್ಲವೆಂದು ಭ್ರಮೆಪಟ್ಟು ಅದನ್ನು ದೊರಕಿಸಿಕೊಳ್ಳಬೇಕೆಂದು ಮನುಷ್ಯನು ಇಚ್ಛಿಸುತ್ತಾನೆ.

**ಉದಾ :** ೨) ಅಸ್ತಿತ್ವವಿಲ್ಲದ ತನ್ನ ನೆರಳನ್ನು ಭ್ರಾಂತಿಯಿಂದ ರಾಕ್ಷಸನೆಂದು ಬಯಪಟ್ಟು ಮೂಢ ಬುದ್ಧಿಯಿಂದ ಅದನ್ನು ತಪ್ಪಿಸಿಕೊಳ್ಳಬೇಕೆಂದು ಬಯಸುತ್ತಾನೆ.

**ಉದಾ :** ೩) ಹಾಗೆಯೇ ಹುಲಿ ಕಳ್ಳ ಮೊದಲಾದ ನಿಜವಾಗಿಯೂ ಪರಿಹಾರ್ಯವಸ್ತುಗಳನ್ನು ದೂರಮಾಡಿಕೊಳ್ಳಬೇಕೆಂತಲೂ ಇಚ್ಛಿಸುತ್ತಾನೆ.

**ಉದಾ :** ೪) ಸಿಕ್ಕದಿರುವ ಹಣ-ಬಂಗಾರವನ್ನು ದೊರಕಿಸಿಕೊಳ್ಳಬೇಕೆಂತಲೂ ಮನುಷ್ಯನು ಆಶಿಸುತ್ತಾನೆ.

ಯಾವ ವಸ್ತುವನ್ನುಗಳಿಸಬೇಕಾಗಿದೆಯೋ ಮತ್ತು ಯಾವವಸ್ತುವನ್ನು ನಾಶಮಾಡಿಕೊಳ್ಳಬೇಕಾದೆಯೋ ಅಂತವುಗಳಿಗಾಗಿ ವೇದವು ಉಪಾಯಗಳನ್ನು ಬೇರೆ ಬೇರೆಯಾಗಿ ಹೇಳಿದೆ–ಅದರಂತೆ ಆಚರಿಸಿದರೆ ಬೇಕಾದ ವಸ್ತುವನ್ನು ಕೈವಶಮಾಡಿಕೊಳ್ಳಬಹುದು ಮತ್ತು ಅನಿಷ್ಟವಾದುದನ್ನು ಪರಿಹರಿಸಿಕೊಳ್ಳಬಹುದು–ಇಂತಹಸ್ಥಿತಿಯಲ್ಲಿ ಕರ್ಮದ ಅಗತ್ಯತೆ ಇದೆ.

ಆದರೆ ಉದಾಹರಣೆ ಒಂದರಲ್ಲಿ ಕಂಡುಬಂದ ಕಂಠಾಭರಣವು ಪ್ರಾಪ್ತವಾಗಿಯೇ ಇದೆ. ಮತ್ತು ಎರಡನೆಯದಾದ ಛಾಯಾರಾಕ್ಷಸವು ಪರಿಹೃತವಾಗಿಯೇ ಇದೆ. ಆದುದರಿಂದ ಈ ವಸ್ತುಗಳ ಪ್ರಾಪ್ತಿ-ಪರಿಹಾರಗಳಿಗಾಗಿ ಬೇರೆ ಯಾವ ಕರ್ಮವೂ ಬೇಕಾಗಿಲ್ಲ. ಆದರೆ ಒಂದು ಮೂಲತಃ ಪರಿಹೃತವೇ ಎಂದೂ, ಅಂದರೆ ದೂರಾಗಿಯೇ ಇದೆ ಎಂದೂ, ಮತ್ತೊಂದು ಪ್ರಾಪ್ತವೇ ಎಂದೂ ಜ್ಞಾನವಾದರೆ ಸಾಕು. ಏಕೆಂದರೆ ವಸ್ತುತ ನಮ್ಮ ಸ್ವಾಧೀನವಾದ ಈ ಪ್ರಾಪ್ತಿ-ಪರಿಹಾರಗಳಿಗೆ ನಮ್ಮ ಮೋಹ ಒಂದೇ ಅಡ್ಡ ಬರುವುದೆಂಬುದು ಕಂಡುಬರುತ್ತದೆ. ಆದುದರಿಂದ ಇದು ಕರ್ಮದಿಂದ ಎಂದೂ ಸಾಧ್ಯವಾಗುವುದಿಲ್ಲವೆಂದು ತಿಳಿದು ಬರುತ್ತದೆ. ಇದಕ್ಕೆ ಜ್ಞಾನವೇ ಬೇಕು.

## ೪) ಕರ್ಮಕಾಂಡದ ಸಾಧನವೇಬೇರೆ-ಜ್ಞಾನಕಾಂಡದ ಸಾಧನವೇ ಬೇರೆ ಎಂದರೇನು ?

ಕರ್ಮಕಾಂಡದ ಸಾಧನವಾದ ಕರ್ಮವು ಸ್ವತಃ ಜಡವಾಗಿದೆ. ಅದು ತಾನೇ ಫಲವನ್ನು ಕೊಡಲಾರದು. ಅದರ ಫಲವನ್ನು ಕೊಡುವುದಕ್ಕೆ ಬೇರೆ ದೇಹಾದಿ ಸಲಕರಣೆಗಳೂ ಈಶ್ವರನ ಸಹಾಯವೂ ಬೇಕು. ಆದರೆ ಜ್ಞಾನವು ತನ್ನಷ್ಟಕ್ಕೆ ತಾನಾಗಿಯೇ ಮತ್ತು ಕೂಡಲೇ ಫಲವನ್ನು ಕೊಡುತ್ತದೆ.

ಆತ್ಮಜ್ಞಾನ ಒಂದರಿಂದಲೇ ನಮಗೆ ಬೇಕಾದ ಸುಖವೂ ದೊರೆಯುತ್ತದೆ. ಬೇಡವಾದ ದುಃಖವೂ ನಿವಾರಣೆಯಾಗುತ್ತದೆ. ಕರ್ಮದಿಂದ ಈ ಕೆಲಸವಾಗುವುದಿಲ್ಲ ಏಕೆಂದರೆ ಕರ್ಮವು ಅಜ್ಞಾನದಿಂದಲೇ ಹುಟ್ಟುತ್ತದೆ. ಮತ್ತು ಅಜ್ಞಾನದಿಂದಲೇ ಹುಟ್ಟಿದ ಮೋಹವನ್ನು ಅದು ಹೇಗೆ

ಕಳೆದೀತು! ಕರ್ಮ, ಮೋಹಗಳು ಅಜ್ಞಾನದ ಕಾರ್ಯಗಳು, ಒಂದಕ್ಕೊಂದು ವಿರೋಧ ಪದಾರ್ಥಗಳಲ್ಲ ಕತ್ತಲೆಯ ವಿರೋಧ ಪದಾರ್ಥವಾದ ಸೂರ್ಯನು ಕತ್ತಲೆಯನ್ನು ಹೊಡೆದೋಡಿಸಬಲ್ಲ ಅದರಂತೆ ಮೋಹಕ್ಕೆ ವೈರಿಯಾದ ಜ್ಞಾನ ಒಂದರಿಂದಲೇ ಮೋಹನಾಶವಾಗಬೇಕು ಎಂಬುದು ಸ್ಪಷ್ಟವಾಗುತ್ತದೆ

**ಆಕ್ಷೇಪ** :- ಹಾಗಾದರೆ ಆತ್ಮಜ್ಞಾನಕ್ಕಾದರೋ ಅವಿದ್ಯೆಯೇ ಕಾರಣವಲ್ಲವೆ? ಏಕೆಂದರೆ ಶಾಸ್ತ್ರ, ಶಿಷ್ಯ, ಆಚಾರ್ಯರೆಂಬ ದ್ವೈತ ವ್ಯವಹಾರ ಇರುವುದರಿಂದಲೇ ಆತ್ಮಜ್ಞಾನವಾಗುವುದೆಂದು ಹೇಳುತ್ತೀರಿ. ದ್ವೈತವ್ಯವಹಾರವಿರುವಲ್ಲಿ ಅವಿದ್ಯೆಯೇ ಇರಬೇಕಲ್ಲವೆ ?

**ಸಮಾಧಾನ** – ಇದೇನು ದೋಷವಲ್ಲ ಏಕೆಂದರೆ ಶ್ರೇಷ್ಠವಾದ ಮತ್ತು ಸ್ವತಃ ಸಿದ್ಧವಾದ ಆತ್ಮತತ್ವದ ಯಥಾರ್ಥಸ್ವರೂಪವೇ ಆತ್ಮಜ್ಞಾನಕ್ಕೆ ವಿಷಯವಾಗಿದೆ ಅವಿದ್ಯೆಯನ್ನು, ಅವಿದ್ಯೆಯಿಂದ ಹುಟ್ಟಿದ ದೇಹಾದಿ ಇಂದ್ರಿಯಗಳನ್ನು ನಾಶಪಡಿಸುವ ಈ ಆತ್ಮಜ್ಞಾನವು ಹುಟ್ಟಬೇಕಾದರೆ ಮಾತ್ರ ಶಾಸ್ತ್ರಾದಿಗಳು ಬೇಕು ಅದು ಹುಟ್ಟಿದೊಡನೆ ಕ್ಷಣಾಗ ಅಜ್ಞಾನವನ್ನು ನಾಶಮಾಡಿಬಿಡುತ್ತದೆ ಅಜ್ಞಾನ ನಾಶಮಾಡುವಾಗ ಅದು ಶಾಸ್ತ್ರಾದಿಗಳ ಸಹಾಯವನ್ನು ಅಪೇಕ್ಷಿಸುವುದಿಲ್ಲ

ಆದರೆ ಕರ್ಮದ ವಿಷಯವು ಹೀಗಲ್ಲ ಕರ್ಮವು ಹುಟ್ಟಬೇಕಾದರೂ ಶಾಸ್ತ್ರದಸಹಾಯವು ಬೇಕು, ಹುಟ್ಟಿದಮೇಲೆ ಫಲವು ಸಿಕ್ಕಬೇಕಾದರೂ ದೇಹಾದಿಗಳ ಸಹಾಯವುಬೇಕು ಏಕೆಂದರೆ ಅನೇಕ ವರುಷಗಳ ಮೇಲೆ ಸಿಕ್ಕಬೇಕಾದ ಫಲವನ್ನು ದೇಹಾದಿಗಳ ಸಹಾಯವಿಲ್ಲದೆ ಕರ್ಮವು ತಾನಾಗಿಯೇ ಎಂದೂ ತಂದುಕೊಡಲಾರದು ಜ್ಞಾನವು ಹುಟ್ಟಿದಕೂಡಲೇ ತನ್ನ ಫಲವಾದ ಮೋಕ್ಷವನ್ನು ಕೊಡುತ್ತದೆ, ಕರ್ಮವು ಹುಟ್ಟಿದ ಕೂಡಲೇ ಸ್ವರ್ಗಾದಿ ಫಲವನ್ನು ಕರ್ತೃವಿಗೆ ತಂದುಕೊಡಲಾರದು. ಮೋಕ್ಷ ಸಿಕ್ಕಬೇಕಾದರೆ ಆತ್ಮಜ್ಞಾನದ ಉತ್ಪತ್ತಿಯಾಗುವುದೊಂದೇ ತಡ—ಅದು, ಬೇರೆ ರೂಪಾಂತರವಾಗಲಿ ಅನ್ಯ ಸಾಧನಗಳ ಸಹಾಯವನ್ನಾಗಲಿ ಅಪೇಕ್ಷಿಸುವುದಿಲ್ಲ. ಅಜ್ಞಾನವನ್ನು ಹೊಡೆದು ಓಡಿಸಲಿಕ್ಕೆ ಅದಕ್ಕೆ ಕರ್ಮದ ಸಹಾಯವು ಬೇಕಾಗಿಲ್ಲ

**ಉಪಸಂಹಾರ :–** ಆದ್ದರಿಂದ ದುಃಖಕ್ಕೆ ಕಾರಣವಾದ ಅಜ್ಞಾನ ವನ್ನು ನಾಶಮಾಡಬೇಕಾದರೆ ಸರಿಯಾದ ತಿಳಿವು ಒಂದೇ ಸಾಕು. ಕರ್ಮವು ಎಂದಿಗೂ ಈ ಕೆಲಸವನ್ನು ಮಾಡಲಾರದು.

ಕರ್ಮವು ಅಜ್ಞಾನದಿಂದಲೇ ಹುಟ್ಟುವುದರಿಂದ ಅಜ್ಞಾನ ನಾಶವಾದೊಡನೆ ಕರ್ಮವೂ ನಾಶವಾಗುವುದು. ಏಕೆಂದರೆ ಜ್ಞಾನಾಗ್ನಿಯಿಂದ ಸರ್ವ ಕರ್ಮಗಳೂ ನಾಶವಾಗುತ್ತವೆ. **"ಜ್ಞಾನಾಗ್ನಿ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ"** ಎಂಬ ಭಗವಂತನವಾಣಿಯೇ ಇದಕ್ಕೆ ಪ್ರಮಾಣ.

**ಆಕ್ಷೇಪ :–** ನೀವು ಹೇಳುವ ಜ್ಞಾನವು ಬಲಿಷ್ಟವಾಗಿದೆ ಎನ್ನುವುದರಲ್ಲಿ ಸತ್ಯಾಂಶ ಕಾಣಬರುವುದಿಲ್ಲ. ಏಕೆಂದರೆ ಪಾರಮಾರ್ಥಜ್ಞಾನವನ್ನು ಪಡೆದುಕೊಂಡವನಲ್ಲಿಯೂ ಅಜ್ಞಾನಿಗೆ ಇರುವಂತಹ ಕರ್ತೃತ್ವ ಭೋಕ್ತೃತ್ವಗಳೂ, ರಾಗದ್ವೇಷಾದಿಗಳೂ ಕಂಡುಬರುತ್ತವೆ. ಈ ರೀತಿ ಕರ್ತೃತ್ವ, ಭೋಕ್ತೃತ್ವಗಳೂ, ರಾಗದ್ವೇಷಗಳೂ ಅವನ ನಿಜವಾದ ಜ್ಞಾನನಾಶವಾಗದ ವಿನಃ ಕಾಣಿಸಿಕೊಳ್ಳಲಾರವು. ಈ ಕಾರಣದಿಂದ ಅವನ ನಿಜವಾದ ಜ್ಞಾನ ನಾಶವಾಗಿರಬೇಕು ಎನ್ನುವುದು ಸಮಂಜಸವಲ್ಲವೆ ? ಆದುದರಿಂದ ನೀವು ಹೇಳುವ ಜ್ಞಾನವು ಬಲಿಷ್ಟವಾದುದಲ್ಲ.

**ಸಮಾಧಾನ :-** ಹಾಗೆ ಹೇಳುವುದು ಸರಿಯಲ್ಲ. ಜ್ಞಾನವು ಬಲಿಷ್ಟವಾದುದೇ ಆಗಿದೆ. ಏಕೆಂದರೆ ಜ್ಞಾನದಿಂದ ಅವಿದ್ಯೆಯು ಮತ್ತು ಅದರ ಕಾರ್ಯಗಳಾದ ಕರ್ತೃತ್ವ ಭೋಕ್ತೃತ್ವಾದಿಗಳೂ,ರಾಗದ್ವೇಷಗಳೂ ಮೊದಲೇ ನಾಶವಾಗಿ ಹೋಗಿವೆ-ಅನಾಶವಾಗಿ ಹೋಗಿರುವ ಕರ್ತೃತ್ವಾದಿಗಳು ವಿದ್ಯೆ ಅಂದರೆ ಜ್ಞಾನವನ್ನು ನಾಶಪಡಿಸುವುದು ಎಂದಿಗೂ ಶಕ್ಯವಿಲ್ಲ. ಏಕೆಂದರೆ ಮೊದಲು ಜ್ಞಾನವಾದಾಗಿನ ಸಂಸ್ಕಾರಗಳು ಹಾಗೆಯೇ ಉಳಿದು ಜ್ಞಾನದ ಸ್ಮೃತಿಯನ್ನು ಜಾಗೃತವಾಗಿಯೇ ಇಡುತ್ತವೆ. ಒಂದುಸಾರಿ ಅಗ್ನಿಯಿಂದ ಭಸ್ಮವಾದ ಮುಳ್ಳಿನಕಟ್ಟಿಗೆಯು ಪುನಃ ಕಾಲಿಗೆ ನೆಡಬಲ್ಲುದೆ ! ಹಾಗೆಯೇ ಒಂದು ಸಾರಿ ಜ್ಞಾನಾಗ್ನಿಯಿಂದ ಸುಟ್ಟ ಅಜ್ಞಾನದ ಕಾರ್ಯಗಳಾದ ಕರ್ತೃತ್ವಾದಿಗಳು ಎಂದೂ ಜ್ಞಾನಿಗೆ ತೊಂದರೆಕೊಡಲಾರವು. ಜ್ಞಾನಿಯ ಕರ್ಮಾಚರಣೆಯು ಕರ್ಮಾಭಾಸ. ನಾಟಕದಲ್ಲಿ ಕೃಷ್ಣನಪಾತ್ರ ಅಭಿನಯಿಸಿದವನು,

ಸೀತೆಯಂತೆ ಆತ್ತವನು ನಿಜವಾಗಿ ಕೃಷ್ಣನಾಗಲಿ ಸೀತೆಯಾಗಲೀ ಆಗಲಾರ. ಅದೊಂದು ಅಭಿನಯ. ಜ್ಞಾನಿಯೂ ಈ ನಾಟಕದಂತೆ ಆಚರಿಸುತ್ತಾನೆ. ಅರ್ಜುನನು "ನಷ್ಟೋಮೋಹಃ ಸ್ಮೃತಿಃಲಬ್ಧಾ" ಎಂದು ತನ್ನ ಪಾರಮಾರ್ಥತತ್ತ್ವವನ್ನು ತಿಳಿದಿದ್ದರೂ ಅಭಿಮನ್ಯು ಸತ್ತಾಗ ನಾಟಕದ ಅಭಿನಯಿಯಂತೆ ಅಳಲಿಲ್ಲವೇ ! ಸೈಂಧವನನ್ನು ಸಂಹರಿಸಲು ಪ್ರತಿಜ್ಞೆಮಾಡಲಿಲ್ಲವೆ ! ಹಾಗಾದರೆ ಹಿಂದೆ ಪಡೆದ ಅವನ ಜ್ಞಾನ ನಾಶವಾಯಿತೆ ! ಹಿಂದೆ ಈಜು ಕಲಿತ ಒಬ್ಬ, ಬಹುದಿನದ ಮೇಲೆ ಕಾಲುಜಾರಿ ಬಾವಿಯಲ್ಲಿ ಬಿದ್ದರೆ ಈಜು ಬಾರದವನಂತೆ ಮುಳುಗುತ್ತಾನೆಯೆ ! ಎಂದಿಗೂ ಇಲ್ಲವಲ್ಲವೆ. ಹಾಗೆಯೇ ಜ್ಞಾನಿಯೂ ಸಾಮಾನ್ಯನಂತೆ ಆಚರಿಸಿದರೂ ಅವನ ಸ್ವರೂಪವನ್ನು ಮರೆಯುವುದಿಲ್ಲ.

**ಉದಾ :-** ಒಬ್ಬ ಈಜು ಬರದವನೂ, ಒಬ್ಬ ಈಜು ಬಂದವನೂ ಬಾವಿಯಲ್ಲಿ ಬಿದ್ದಿದ್ದಾರೆ. ಇಬ್ಬರೂ ಕೈಬಡಿಯುತ್ತಾರೆ. ಇಬ್ಬರೂ ಕಾಲು ಬಡಿಯುತ್ತಾರೆ. ನೋಡುವವರ ದೃಷ್ಟಿಯಲ್ಲಿ ಇಬ್ಬರೂ ಒಂದೇ ಆಗಿ ಕಂಡು ಬಂದರೂ ಒಬ್ಬ ಮುಳುಗಲು ಅಸ್ತವ್ಯಸ್ತವಾಗಿ ಕೈಕಾಲುಆಡಿಸುತ್ತಾನೆ. ಮತ್ತೊಬ್ಬ ತೇಲುತ್ತಾ ಆನಂದವಾಗಿ ವ್ಯವಸ್ಥಾಬದ್ಧವಾಗಿ ಕೈಕಾಲು ಆಡಿಸುತ್ತಾನೆ.

ಹೀಗೆಯೇ ಜ್ಞಾನಿ ಅಜ್ಞಾನಿಗಳಿಬ್ಬರೂ ಸಂಸಾರದಲ್ಲಿದ್ದರೂ ಒಬ್ಬ ಈಜುತ್ತಾನೆ; ಮತ್ತೊಬ್ಬ ಮುಳುಗುತ್ತಾನೆ. ಆದುದರಿಂದ ಜ್ಞಾನವು ಬಲಿಷ್ಟವಾದುದೆ. ಒಂದು ಸಾರಿ ಪ್ರಾಪ್ತವಾದರೆ ಅದೆಂದು ನಾಶವಾಗಲಾರದು. ಜ್ಞಾನವು ಅಜ್ಞಾನವನ್ನೂ ಅದರ ಕಾರ್ಯವಾದ ಕರ್ಮವನ್ನು ಸುಟ್ಟು ಬೂದಿಮಾಡುತ್ತದೆ. ಅಂತಹ ಜ್ಞಾನಿಯು ವೇದಕ್ಕೂ ಅಧೀನನಾಗಲಾರನು.

ಇವನಿಗಿಂತ ತೀರಾ ಭಿನ್ನವಾದ ಅಜ್ಞಾನಿಯ ಹೃದಯವು ಅವಿದ್ಯೆ ಎಂಬ ಗಟ್ಟಿಯಾದ ಪರದೆಯಿಂದ ಬಿಗಿಯಲ್ಪಟ್ಟಿದೆ. ಅಂತಹ ಅಜ್ಞಾನಿಗೆ ಮಾತ್ರ ಕರ್ಮಕ್ಕೆ ಬೇಕಾಗುವ ಯೋಗ್ಯತೆಯನ್ನು ತಂದುಕೊಡುವ ಕರ್ತೃತ್ವಾದಿ ಸಲಕರಣೆಗಳೆಲ್ಲಾ ಅವನಲ್ಲಿ ಪೂರ್ಣವಾಗಿರುತ್ತವೆ. ಆದುದರಿಂದ ಅವನು ವೇದದ ವಿಧಿ, ನಿಷೇದ ವಾಕ್ಯಗಳಿಗೆ ಸಿಕ್ಕು ಕರ್ಮಗಳೊಳಗೆ ಪ್ರವೇ

ಶಮಾಡುತ್ತಾನೆ. ಆದುದರಿಂದ ಜ್ಞಾನದಿಂದಲೇ ಮೋಕ್ಷವಲ್ಲದೆ ಕರ್ಮದಿಂದ ಎಂದೂ ಆಗಲಾರದು.

**ಪ್ರ : 79. ಜ್ಞಾನದಿಂದಲೇ ಮೋಕ್ಷವಾದರೆ ಕರ್ಮವು ನಿರರ್ಥಕವೆ. ?**

ಉ : ಹಾಗಲ್ಲ ಕರ್ಮವು ಜ್ಞಾನೋತ್ಪತ್ತಿದ್ವಾರಾ ಮಾತ್ರ ಮೋಕ್ಷಕ್ಕೆ ಕಾರಣವು ಕರ್ಮವು ತೀರಾ ನಿರುಪಯುಕ್ತವೆಂದು ಮಾತ್ರ ತಿಳಿಯಬಾರದು. ಅದು ಚಿತ್ತ ಶುದ್ಧಿ ಮಾಡುವುದರಿಂದ ಪರಂಪರಾ ರೀತಿ ಕಾರಣವಾಗುವುದು.

**ಪ್ರ : 80. ಕರ್ಮವನ್ನೇ ಬೆನ್ನುಹತ್ತಿರುವವನ ಗತಿ ಏನು ?**

ಆತ್ಮಜ್ಞಾನಿಗಿಂತ ಭಿನ್ನವಾದ ಅಜ್ಞಾನಿಯ ಹೃದಯವು ಅವಿದ್ಯೆ ಎಂಬ ಗಟ್ಟಿಯಾದ ಪರದೆಯಿಂದ ಸುತ್ತಲ್ಪಟ್ಟಿರುವುದು. ಅವಿದ್ಯೆಯಿಂದ ಅಪಹೃತನಾದವನಲ್ಲಿ ಕರ್ತೃತ್ವಾದಿ ಸಲಕರಣಿಗಳೆಲ್ಲಾ ಪೂರ್ಣವಾಗಿರುವುವು. ಕರ್ತೃತ್ವಾದಿ ಸಲಕರಣಿ ಇರುವುದರಿಂದ ಅವನು ವೇದದ ವಿಧಿ ನಿಷೇಧ ವಾಕ್ಯಗಳ ದವಡೆಗೆ ಸಿಕ್ಕು ಕರ್ಮಗಳೊಳಗೆ ಪ್ರವೇಶಮಾಡುವನು. ಅವನು ಒಳ್ಳೆಯ ಕೆಲಸಗಳನ್ನು ಮಾಡುತ್ತಾ ಹೋದರೆ ಸ್ವರ್ಗವೂ, ಕೆಟ್ಟ ಕೆಲಸಗಳನ್ನು ಮಾಡುತ್ತಾ ಹೋದರೆ ನರಕದಂತ ದುರ್ಗತಿಯೂ, ಪಾಪಪುಣ್ಯಗಳು ಸರಿಯಾದರೆ ಮನುಷ್ಯ ಜನ್ಮವೂ ಬರುವುದು. ಹೀಗೆ ಕರ್ಮಿಯು ಅಜ್ಞಾನಿಯಾಗಿ ತನಗೆ ಇಚ್ಛೆಯಿಲ್ಲದಿದ್ದರೂ ಆಕಡೆ–ಈಕಡೆ ಅಲೆದಾಡಬೇಕಾಗುವುದು.

ಈ ರೀತಿ ಶುಭ–ಅಶುಭ ಮತ್ತು ಶುಭಾಶುಭ ಮಿಶ್ರ ಕರ್ಮಗಳನ್ನು ಮಾಡುತ್ತಾ ಇರುವುದರಿಂದ ಏತದಂತೆ ಒಮ್ಮೆ ಮೇಲಕ್ಕೂ ಮತ್ತೊಮ್ಮೆ ಕೆಳಕ್ಕೂ ನಾನಾ ತರಹದ ಉಚ್ಚ, ನೀಚಯೋನಿಗಳಲ್ಲಿ ಸೇರಿ ಆಯಾ ಯೋನಿಗಳಿಗನುಗುಣವಾಗಿ ಅಧಮ, ಮಧ್ಯಮ–ಉತ್ತಮವೆಂಬ ಮೂರು ತರ ಸುಖ ದುಃಖ ಮೋಹಗಳನ್ನು ಅನುಭವಿಸುತ್ತಾ ಪ್ರಚಂಡವಾದ ಬಿರುಗಾಳಿಗೆ ಸಿಕ್ಕ ಸಮುದ್ರದೊಳಗಿನ ಒಣ ಸೊರಟೆಯ ಹಾಗೆ ಅತ್ತಿಂದಿತ್ತಾ ತಿರುಗಾಡುತ್ತಾನೆ. ಅಂತೂ ಒಟ್ಟಿನಲ್ಲಿ ಜನನ ಮರಣ ಚಕ್ರಕ್ಕೆ ಸಿಕ್ಕಿಕೊಂಡಿರುತ್ತಾನೆ.

**ಪ್ರ : 81. ಕರ್ಮಿಯು ಈ ರೀತಿ ಜನನ ಮರಣ ರೂಪ ಭಯಂಕರ ದುಃಖಕ್ಕೆ ಗುರಿಯಾಗುತ್ತಾನೆನ್ನುವುದಕ್ಕೆ ಪ್ರಮಾಣ ವೇನು? ಮತ್ತು ಅವನು ಅದರಿಂದ ಹೇಗೆ ಬಿಡುಗಡೆ ಹೊಂದಬೇಕು?**

ಪ್ರ : ಸಂಸಾರಕ್ಕೆಲ್ಲಾ ಕಾಮವೇ ಅಂದರೆ ಇಚ್ಛೆಯೇ ಮೂಲವಾಗಿರುವುದರಿಂದ ಅದನ್ನು ನಾಶಮಾಡಬೇಕು. ಈ ಕಾಮದ ನಾಶವು ಅಜ್ಞಾನ ನಾಶದಿಂದಲೇ ಆಗುತ್ತದೆ. ಆದ್ದರಿಂದ ಮೊದಲು ಅಜ್ಞಾನ ನಾಶಮಾಡಿ ಕೊಳ್ಳಬೇಕು. ಅದರಿಂದ ಕಾಮನಾಶವಾಗುತ್ತದೆ-ಕಾಮನಾಶದಿಂದ ಅನರ್ಥ ಅಥವಾ ಹುಟ್ಟುಸಾವುಗಳು ನಾಶವಾಗುತ್ತವೆ. ಇದನ್ನೇ ಭಗವಂತನು **" ಪ್ರಜಹಾತಿಯದಾಕಾಮಾರ್ನ್ ಸರ್ವಾನ್ಪಾರ್ಥಮನೋಗತಾನ್ "** ಎಂದಿದ್ದಾನೆ.

**ಉದಾ :–** ತಾಟಕಿಯುನಾಶವಾಗದೆ ಆಕೆಯ ಮಕ್ಕಳಾದ ಮಾರೀಚ ಸುಬಾಹು ನಾಶವಾಗಲಾರರೆಂದು ಶ್ರೀ ರಾಮಚಂದ್ರನು ಮೊದಲು ತಾಟಕಿ ನಾಶಮಾಡಿದನಂತರ ಮಾರೀಚ ಸುಬಾಹುವನ್ನು ನಾಶಮಾಡುತ್ತಾನೆ.

ಇದನ್ನೇ ಕಠೋಪನಿಷತ್ತಿನಲ್ಲಿ ೨ ನೇ ಅಧ್ಯಾಯದ ೬ ನೇ ವಲ್ಲಿ ೧೪ ನೇ ಮಂತ್ರದಲ್ಲಿ ಯಮಧರ್ಮರಾಯನು ನಚಿಕೇತನಿಗೆ ಹೀಗೆ ಹೇಳುತ್ತಾನೆ. **ಯದಾಸರ್ವೇ ಪ್ರಮುಚ್ಯಂತೇ ಕಾಮಾಯೇಽಸ್ಯಹೃದಿಶ್ರಿತಾಃ। ಅಥಮರ್ತ್ಯೋಽಮೃತೋ ಭವತ್ಯತ್ರಬ್ರಹ್ಮಸಮಶ್ನುತೇ ॥** ಯಾವಾಗ ಬುದ್ಧಿಯಲ್ಲಿ ಆಶ್ರಯಿಸಿಕೊಂಡಿರುವ ಎಲ್ಲಾ ಕಾಮಗಳು ನಾಶವಾಗುವವೋ ಆಗ ಮರ್ತ್ಯನು ಅಂದರೆ ಜ್ಞಾನೋತ್ಪತ್ತಿಗೆ ಮೊದಲು ಮರಣಕ್ಕೆ ಅಧೀನ ವಾದವನು ಅವಿದ್ಯಾ, ಕಾಮ, ಕರ್ಮರೂಪವಾದಮೃತ್ಯು ನಾಶವಾದುದ ರಿಂದ ಅಮೃತನಾಗುತ್ತಾನೆ ಅರ್ಥಾತ್ ಬ್ರಹ್ಮವೇ ಆಗುತ್ತಾನೆ ಎಂದು ಹೇಳುತ್ತದೆ. ಆದುದರಿಂದ ಕಾಮದನಾಶವೇ ಅಜ್ಞಾನದ ನಾಶ. ಅಜ್ಞಾನವು ಜ್ಞಾನದಿಂದಲೇ ನಾಶವಾದೀತೇ ವಿನಃ ಕರ್ಮದಿಂದ ನಾಶವಾಗಲಾರದು.

**ಪ್ರ : 82. ಸಂಸಾರವು ಕರ್ಮಮೂಲ. ಈ ಕರ್ಮಮೂಲ ವಾದ ಸಂಸಾರವನ್ನು ಆ ಕರ್ಮಗಳೇ ಪರಂಪರೆಯಿಂದ ನಾಶಮಾಡಿ ಮೋಕ್ಷಪ್ರಾಪ್ತಿಗೆ ಹೇಗೆ ಕಾರಣವಾಗಿವೆ ?**

ಪ್ರಾಭಾಕರ ಮತದ ಖಂಡನೆ

ಉ: ಕರ್ಮವೇ ಮೂಲವಾದ ಈ ಸಂಸಾರ ಚಕ್ರದೊಳಗೆ ಸಿಕ್ಕಿ ಬೆಂದು ಬೆಂಡಾದ ಮನುಷ್ಯನು ಒಂದುಸಾರಿ ಯೋಗಾಪಟ್ಟು ಮಾಡಿ ಗುರು ಕೃಪೆಯಿಂದ ಸನ್ಮಾರ್ಗವನ್ನು ಹಿಡಿದರೆ—ಆ ಸನ್ಮಾರ್ಗದಿಂದ ನಿತ್ಯಕರ್ಮವನ್ನು ಮಾಡುತ್ತಾನೆ. ನಿತ್ಯ ಕರ್ಮ ಮಾಡುತ್ತಾ ಅವನ ಚಿತ್ತವು ಶುದ್ಧಿಯಾಗುತ್ತದೆ. ಚಿತ್ತಶುದ್ಧಿಯಾದ ಅವನು ಕಾಮ್ಯ ಕರ್ಮಗಳ ಫಲಗಳ ಬಗ್ಗೆ ವೈರಾಗ್ಯವನ್ನು ಹೊಂದುತ್ತಾನೆ. ನಿಷಿದ್ಧ ಕರ್ಮ ಫಲವಾದ ನರಕಕ್ಕೆ ಅಂಜುವಂತೆ ಕಾಮ್ಯ ಕರ್ಮಗಳ ಫಲಕ್ಕೂ ಅವನಲ್ಲಿ ವೈರಾಗ್ಯ ಹುಟ್ಟಿ ಚಿತ್ತವು ಮತ್ತಷ್ಟು ಶುದ್ಧವಾಗಿ ನಿತ್ಯಕರ್ಮವನ್ನೇ ಹೆಚ್ಚಾಗಿ ಮಾಡುತ್ತಾನೆ. ಈ ರೀತಿ ಅವನು ನಿತ್ಯ–ನೈಮಿತ್ತಿಕ ಕರ್ಮಗಳನ್ನು ಈಶ್ವರಾರ್ಪಣ ಪೂರ್ವಕವಾಗಿ ಮಾಡುವುದರಿಂದ ಅವನ ಚಿತ್ತವು ಮತ್ತಷ್ಟು ತಿಳಿಯಾಗುತ್ತಾ ಹೋಗಿ ಪರಲೋಕಾದಿಗಳೂ ಕೂಡ ತುಚ್ಛವೆಂಬ ಒಳ್ಳೆ ನಿರ್ಮಲವಾದ ವೈರಾಗ್ಯ ಬುದ್ಧಿಯೂ ಹುಟ್ಟುತ್ತದೆ.

ಈ ವೈರಾಗ್ಯದಿಂದ ಚಿತ್ತವು ಕನ್ನಡಿಯಂತೆ ಸ್ವಚ್ಛವಾಗಿ ಬಾಹ್ಯ ವಿಷಯಗಳಲ್ಲಿ ದೋಷಕಂಡಿದ್ದರಿಂದ ಹೊರಗೆ ಹೋಗದೆ ಅಂತರಾತ್ಮನಲ್ಲಿಯೇ. ಅದಕ್ಕೆ ಪ್ರೀತಿಯುಂಟಾಗಿ ಅದು ಅಲ್ಲಿಯೇ ಸ್ಥಿರವಾಗಿ ನಿಲ್ಲುವುದು.

ಉದಾ :- ದೃಷ್ಟಾಂತ—ರಜೋಗಣ ಮತ್ತು ತಮೋಗುಣಗಳೆಂಬ ಮಲದಿಂದ ಕೂಡಿಕೊಂಡಿರುವ ಚಿತ್ತವನ್ನು ಕಾಮವೆಂಬ ಮೀನುಗಾಳವು ಎಳೆದುಕ್ಕೊಂಡು ಹೋಗಿ ವಿಷಯುಗಳೆಂಬ ದುಃಖಾಂತವಾದ ಕೊಳೆ ಮನೆಯಲ್ಲಿ ಹಾಕಿ ಕುಟ್ಟುತ್ತಿರುತ್ತವೆ. ಆಗ ನಿತ್ಯ ನೈಮಿತ್ತಿಕ ಕರ್ಮಗಳ ಅನುಅನುಷ್ಠಾನದಿಂದ ರಜ ಮತ್ತು ತಮೋಗುಣಗಳೆಂಬ ಮಲವನ್ನು ತೊಳೆದುಕೊಂಡು ತಿಳಿಯಾಗಿ ಚಾಂಚಲ್ಯ ವಿಲ್ಲದ್ದಾಗುತ್ತದೆ. ನಂತರ ಚಿತ್ತವು ತೊಳೆದ ಸ್ಪಟಿಕದಂತಾಗಿ ಹೊರಗಿನ ವಿಷಯುಗಳಿಂದ ಬರುವ ರಾಗದ್ವೇಷ ರೂಪ ಅತಿಗ್ರಹವೆಂಬ ಮೀನುಗಾಳದ ಎಳೆತಕ್ಕೆ ಸಿಕ್ಕದೆ ಎಲ್ಲಾ ಕಲ್ಮಷವನ್ನು ತೊಳೆದುಕೊಂಡು ಒಳಗಿನ ಆತ್ಮನೊಬ್ಬನ ಕಡೆಗೇ ತಿರುಗಿಕೊಂಡು ಚಿತ್ತವೆಂಬ ಕನ್ನಡಿಯು ವಿಕ್ಷೇಪ ಹೊಂದದಂತೆ ನಿಂತುಬಿಡುತ್ತದೆ.

ಯಾವಾಗ ಅಂತಃಕರಣವು ಎಲ್ಲಾ ಕಾಮಗಳನ್ನು ಬಿಟ್ಟೋಳುತ್ತದೆಯೋ ಆಗಲೇ ಅದು ತಾನಾಗಿಯೇ ಅಂತರಾತ್ಮನ ಕಡೆಗೆ ಹೊರಳಿ ಅವನೊಳಗೆ ಪ್ರವೇಶಮಾಡಬೇಕೆಂದು ಯತ್ನಿಸಲಾರಂಭಿಸುತ್ತದೆ.

ನಂತರ ಕರ್ಮವು ಚಿತ್ತ ಶುದ್ಧಿಯನ್ನು ಮಾಡಿ ವೈರಾಗ್ಯವನ್ನು ಹುಟ್ಟಿಸಿದ ಮೇಲೆ ತನ್ನ ಎಲ್ಲಾ ಕೆಲಸವು ಮುಗಿಯಿತೆಂದು ತಿಳಿದು ಮಳೆಗಾಲದ ಕೊನೆಯ ಮೋಡಗಳಂತೆ ಎಲ್ಲಾ ಕಾಮನೆಗಳೂ ಮಾಯವಾಗಿ ಹೋಗುವವು.

**ಸಾರಾಂಶ** :- ನಿತ್ಯಕರ್ಮವನ್ನು ಮಾಡುವುದರಿಂದ ಇಷ್ಟು ಲಾಭವಾಗುತ್ತದೆ. ಎಂದ ಮೇಲೆ ಆತ್ಮಜ್ಞಾನವನ್ನು ಬಯಸುವ ಸರ್ವ ಮುಮುಕ್ಷುಗಳೂ ಆತ್ಮ ಶುದ್ಧಿಯಾಗಬೇಕೆಂದು ನಿತ್ಯ ನೈಮಿತ್ತಿಕ ಕರ್ಮಗಳನ್ನು ತಪ್ಪದೆ ಮಾಡುತ್ತಿರಬೇಕು.

ನಿತ್ಯ ಕರ್ಮದಿಂದ ಧರ್ಮವು ಹುಟ್ಟುವುದು. ಧರ್ಮದಿಂದ ಪಾಪವೆಲ್ಲಾ ನಾಶವಾಗುವುದು. ಪಾಪನಾಶದಿಂದ ಚಿತ್ತ ಶುದ್ಧಿಯಾಗುವುದು; ಚಿತ್ತ ಶುದ್ಧಿಯಿಂದ ಸಂಸಾರದ ನಿಜವಾದ ಯೋಗ್ಯತೆಯು ಎಷ್ಟೆಂಬುದು ತಿಳಿಯುತ್ತದೆ–ಸಂಸಾರದ ಯೋಗ್ಯತೆ ತಿಳಿಯಿತೆಂದರೆ ಅವುಗಳ ವಿಷಯದಲ್ಲಿ ವೈರಾಗ್ಯಹುಟ್ಟುತ್ತದೆ. ವೈರಾಗ್ಯದಿಂದ ಮೋಕ್ಷವನ್ನು ಪಡೆದುಕೊಂಡೇ ತೀರ ಬೇಕೆಂಬ ಅಪೇಕ್ಷೆಯಾಗುವುದು; ಈ ರೀತಿ ಮೋಕ್ಷಾಪೇಕ್ಷೆಯುಳ್ಳವನು ಮೋಕ್ಷದ ಸಾಧನಗಳನ್ನು ಹುಡುಕಾಡುತ್ತಾನೆ; ಆಗ ಎಲ್ಲಾ ಕರ್ಮಗಳು ತಾನೇ ಬಿಟ್ಟು ಹೋಗುವುವು, ಆಗ ಚಿತ್ತವು ಅಂತ ಮುರ್ಖವಾಗುತ್ತದೆ; ಅಂತರ್ಮುಖವಾದ ಚಿತ್ತಕ್ಕೆ ತತ್ತ್ವಮಸ್ಯಾದಿ ಮಹಾ ವಾಕ್ಯಗಳ ಅರ್ಥವು ತಿಳಿಯುತ್ತದೆ; ಅದರಿಂದ ಅಜ್ಞಾನ ನಾಶವಾಗುತ್ತದೆ. ಆ ಮೇಲೆ ಬ್ರಹ್ಮವೇ ಇದ್ದು ಬ್ರಹ್ಮವಾಗುತ್ತಾನೆ. "ಬ್ರಹ್ಮವಿದ್ಬ್ರಹ್ಮೈವಭವತಿ" "ವಿಮುಕ್ತಶ್ಚ ವಿಮುಚ್ಯತೇ" ಸಂಸಾರದ ಕಟ್ಟಿನಿಂದ ಬಿಡುಗಡೆ ಹೊಂದುತ್ತಾನೆ. (ಕಠ 5–1) ಕೇವಲ ಆತ್ಮನಿಷ್ಠನೇ ಆಗುತ್ತಾನೆ.

ಈ ಪ್ರಕಾರವಾಗಿ ಕರ್ಮವು ಪರಂಪರೆಯಿಂದ ಮಾತ್ರ ಅಜ್ಞಾನ ನಾಶಕ್ಕೆ ಕಾರಣವಾಗುತ್ತದೆ. ಜ್ಞಾನದಂತೆ ಅದು ಅಜ್ಞಾನಕ್ಕೆ ವಿರುದ್ಧವಾ

ಗದೆ ಇರುವುದರಿಂದ ಅಜ್ಞಾನವನ್ನು ಸಾಕ್ಷಾತ್ತಾಗಿ ನಾಶಮಾಡಲಾರದು. ಮತ್ತು ಮೋಕ್ಷ ಕಲ್ಪನೆಯಲ್ಲಿರುವ ಯಾವ ಭಾವವೂ ಕರ್ಮವನ್ನು ಅಪೇಕ್ಷಿಸುವುದಿಲ್ಲ.

ಆದುದರಿಂದ ಉತ್ಪತ್ತಿ, ಪ್ರಾಪ್ತಿ, ಸಂಸ್ಕಾರ ಮತ್ತು ವೈಕಾರ್ಯ ಗಳು ಕರ್ಮದ ಫಲವು 4 ತರದ್ದಾಗಿದೆ. ಆದರೆ ಮುಕ್ತಿಯು ಇವುಗಳಲ್ಲಿ ಒಂದಾದರೂ ಅಲ್ಲ. ಆದುದರಿಂದಲೇ ಕರ್ಮವು ಮೋಕ್ಷಸಾಧನವಾಗಲಾರದು.

ಇಲ್ಲಿಯವರೆಗೆ ಪ್ರಭಾಕರರ ಮತವನ್ನು ಖಂಡಿಸಿದ್ದಾಯಿತು. ಇನ್ನು ಮುಂದೆ ಅಂದರೆ ಜ್ಞಾನ ಕರ್ಮಸಮುಚ್ಚಯವಾದ ಖಂಡನೆ ಅಥವಾ ಭಾಟ್ಟ ಮತ ಖಂಡನೆಯು ಪ್ರಾರಂಭವಾಗುವುದು.

# ಭಾಟ್ಟಮತ ಖಂಡನೆ ಅಥವಾ ಜ್ಞಾನಕರ್ಮ ಸಮುಚ್ಚಯವಾದ ಖಂಡನೆ

ಜ್ಞಾನವು ಮುಖ್ಯವಾದ ಕರ್ಮದೊಡನೆ ಕೂಡಿಕೊಂಡು ಅಜ್ಞಾನವನ್ನು ನಾಶಪಡಿಸಲಾರದು. ಏಕೆಂದರೆ ಜ್ಞಾನವು ಸಾಧ್ಯ—ಕರ್ಮವು ಪರಂಪರೆಯಿಂದ ಸಾಧನವು. ಸಾಧ್ಯವೂ ಸಾಧನವೂ ಒಂದೇ ಕಾಲದಲ್ಲಿರುವುದರಿಂದ ಅವಕ್ಕೆ ಯಾವ ಬಗೆಯ ಸಮುಚ್ಚಯವೂ ಆಗಲಾರದು

**ಪ್ರ : 83. ಹಾಗಾದರೆ ಜ್ಞಾನಕರ್ಮಗಳೆರಡೂ ಸಮಸಮವಾಗಿಯೇ ಸೇರಿ ಮುಕ್ತಿಯನ್ನು ಕೊಡಬಹುದಲ್ಲ.?**

ಉ : ಕುರಿ ಮತ್ತು ಸಿಂಹಗಳಂತೆ ಕರ್ಮವು ಕೊಲ್ಲಲ್ಪಡುವಂತಹುದು. ಜ್ಞಾನವು ಕೊಲ್ಲಲ್ಪಡುವುದು ಆಗಿರುವುದರಿಂದ ಅವೆರಡೂ ಕೂಡಿ ಒಂದೇ ಕಡೆ ಒಂದೇ ಕಾಲದಲ್ಲಿರಲಾರವು. ಅವು ಬಾಧ್ಯ ಬಾಧಕ ಸಂಬಂಧವಿರುವುದರಿಂದ ಒಂದು ಕಡೆ ಸೇರಲಾರವು.

ಅವಿದ್ಯೆಯು ವಿದ್ಯೆಯೂ ಎರಡೂ ಸೂರ್ಯ ಕತ್ತಲಂತೆ ಸಮುಚ್ಚಯವಾಗಲಾರವು.

ಆದ್ದರಿಂದ ಯಾವನ ಜ್ಞಾನವು ನಿಷ್ಕ್ರಿಯನಾದ ಸರ್ವವ್ಯಾಪಿಯಾದ ಆತ್ಮನೊಬ್ಬನೇ ಇರುವನೆಂದು ನಿಶ್ಚಯವಾಗಿರುದೋ ಅಂತವನ ಮೇಲೆ ಕರ್ಮವನ್ನು ಮಾಡಲೇಬೇಕೆಂದು ಹೇಳುವ ಯಾವ ವಾಕ್ಯಗಳ ಆಟವೂ ನಡೆಯುವುದಿಲ್ಲ.

**ಉದಾ :-** ಬ್ರಾಹ್ಮಣರು ಮಾತ್ರ ಮಾಡಬಹುದಾದ ಬೃಹಸ್ಪತಿ ಎಂಬ ಯಾಗವನ್ನು ಒಬ್ಬಾನೊಬ್ಬ ಕ್ಷತ್ರಿಯನ್ನು ಎಂದೂ ಮಾಡಲು ಉದ್ಯುಕ್ತನಾಗುವುದಿಲ್ಲ. ಬ್ರಾಹ್ಮಣನು ಕ್ಷತ್ರಿಯರಿಗೆ ವಿಹಿತವಾದ ಯುದ್ಧಾದಿ ಕರ್ಮವನ್ನು ಮಾಡಲು ಮುಂದುವರಿಯಲಾರ.

**ಪ್ರ : 84. ಜ್ಞಾನದಿಂದಾಗುವ ಪ್ರಯೋಜನ ವೇನು ?**

ಉ : ವೇದಾಂತವಾಕ್ಯಗಳಿಂದ ನಾನೇ ಸಚ್ಚಿದಾನಂದ ಸ್ವರೂಪ ಆತ್ಮನೆಂದು ಪ್ರತ್ಯಕ್ಷ ಅನುಭವದಿಂದ ತಿಳಿದವನಿಗೆ ಎಲ್ಲಾ ಸಂಶಯಗಳೂ ದೂರವಾಗಿ ದೇಹಾದಿಗಳೆಲ್ಲಾ ಜಡವೆಂದೂ ಅನಾತ್ಮವೆಂದೂ ಕಾಣುತ್ತವೆ ಆಗ ದೇಹದ ಮೇಲಿನ ಮಮತೆಯು ದೂರವಾಗುವುದು. ಹಾಗೆ ಕೃತಕೃತ್ಯನಾದವನಿಗೆ ಯಾವ ಕೆಲಸವೂ ಕಾಣಿಸಲಾರದು. **"ಯಸ್ತ್ವಾತ್ಮರತಿ ರೇವ ಸ್ಯಾದಾತ್ಮ ತೃಪ್ತಸ್ಯ ಮಾನವಃ। ಆತ್ಮನ್ಯೇವಚ ಸಂತುಷ್ಟಃ ತಸ್ಯಕಾರ್ಯಂ ನವಿದ್ಯತೇ॥** ಎಂಬುದಾಗಿ ಗೀತೆಯು ಜ್ಞಾನಿಯನ್ನು ಆತ್ಮರತಿ, ಆತ್ಮತೃಪ್ತ ಆತ್ಮಸಂತುಷ್ಟ ಎಂಬುದಾಗಿ ಹೊಗಳಿದೆ.

**ಪ್ರ: 85. ಇದಕ್ಕೆ ಉದಾಹರಣೆ ಏನು ?**

ಉ : ಚಿಕ್ಕಮಗುವು ಮಣ್ಣಿನಿಂದಾದ ಆನೆಯ ಮರಿಯನ್ನು ನಿಜವೆಂದು ತಿಳಿದಿರುತ್ತದೆ. ತಿಳಿಗೇಡಿಯಾದವನು ಹೀಗೆಯೇ ಸಿಕ್ಕಂತೆ ಮಾತಾಡುವನು. ಆದೇ ಅವನು ದೊಡ್ಡವನಾದಾಗ ಮಣ್ಣಿನ ಆನೆಯನ್ನು ತಿಳಿಯುವಂತೆ ಇವನೂ ಇದು ಮಿಥ್ಯವೆನ್ನುತ್ತಾನೆ.

**ಪ್ರ : 86. ಜ್ಞಾನ ಮತ್ತು ಕರ್ಮಗಳು ಎಲ್ಲಿ ಕೂಡುತ್ತವೆ ಮತ್ತು ಮನುಷ್ಯನು ಕರ್ಮದಲ್ಲಿ ಪ್ರವೃತ್ತನಾಗಲು ಕಾರಣವೇನು?**

ಉ : ಎಲ್ಲಿ ಜ್ಞಾನವು ಕಾರಣವಾಗಿ ಕರ್ಮವು ಅದರ ಫಲವಾಗುವುದೋ ಅಂತಲ್ಲಿ ಜ್ಞಾನ ಕರ್ಮಗಳು ಕೂಡಬಹುದು. ಒಬ್ಬ ಮೋಟುಮಾರ

ನೋಡಿದ ಅದನ್ನು ಕಳ್ಳನೆಂದು ತಿಳಿದ ಅಂದರೆ ಅದು ಅವನಿಗೆ ಕಳ್ಳನೆಂಬ ಜ್ಞಾನವಾಯಿತು. ಈ ಜ್ಞಾನದಿಂದ ಓಡಿ ಹೋಗುವ ಕರ್ಮವು ಪ್ರವೃತ್ತಿಯಾಗುತ್ತದೆ. ಆದರೆ ಜ್ಞಾನಕರ್ಮಗಳು ಒಂದೇ ಕಾಲದಲ್ಲಿ, ಒಂದೇ ಕ್ರಮವಾಗಿ ಯಾಗಲಿ ಒಟ್ಟಾಗಿಯಾಗಲಿ ಕೂಡಲಾರವು ಮೋಟು ಮರವನ್ನು ತಪ್ಪಾಗಿ ತಿಳಿದ ಜ್ಞಾನದಿಂದ ಓಡುವ ಕರ್ಮವು ಪ್ರವೃತ್ತವಾಯಿತು. ಮೋಟು ಮರವನ್ನು ಮೋಟುಮರವನ್ನಾಗಿ ತಿಳಿದ ನಿಜವಾದ ಜ್ಞಾನದಿಂದ ಓಡುವಿಕೆ ಇರಲಾರದು. ಅಂದರೆ ಮಿಥ್ಯಾಜ್ಞಾನ-ಕರ್ಮ ಕೊಡಬಲ್ಲವು ಸತ್ಯಜ್ಞಾನ ಕರ್ಮ ಎಂದೂ ಕೂಡಲಾರವು. ಈ ಮಿಥ್ಯಾಜ್ಞಾನದಿಂದ ಮನುಷ್ಯನು ಕರ್ಮದಲ್ಲಿ ಪ್ರವೃತ್ತನಾಗುವುದು ಕಂಡು ಬರುತ್ತದೆ.

ಆದುದರಿಂದ ವಸ್ತುಗಳ ಯಥಾರ್ಥ ಸ್ವರೂಪವನ್ನು ಮಾಡಿಕೊಟ್ಟು ನಮ್ಮ ಮೋಹವನ್ನು ಕಳೆಯುವ ಜ್ಞಾನವು ಕರ್ಮದೊಡನೆ ಮುಖ್ಯವಾಗಿ ಯಾಗಲಿ ಗೌಣವಾಗಿ ಯಾಗಲಿ ಎಲ್ಲಿಯೂ ಕೂಡುವುದೇಇಲ್ಲ.

ಅಜ್ಞಾನವನ್ನು ನಾಶಮಾಡುವ ಆ ಜ್ಞಾನವು ಕರ್ಮಸಾಮಾಗ್ರಿಯನ್ನೆಲ್ಲಾ ಸುಟ್ಟು ಬೂದಿಮಾಡುವಂತಹದು. ಆದುದರಿಂದ ಆ ಕರ್ಮಗಳು ಇಂತಹ ಜ್ಞಾನದ ಸಮೀಪಕ್ಕೂ ಸುಳಿಯಲಾವು.— ಇದನ್ನೇ ಭಗವಂತನು ಗೀತೆಯಲ್ಲಿ.

**"ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇತಥಾ"**
**"ಜ್ಞಾನಾಗ್ನಿ ಧಗ್ಧ ಕರ್ಮಾಣಂ"**– ಎಂಬುದಾಗಿಹೇಳುತ್ತಾನೆ. ಹೀಗೆ ಜ್ಞಾನಾಗ್ನಿಯಿಂದ ಕರ್ಮಗಳು ಭಸ್ಮವಾಗುತ್ತಿರುವಾಗ ಅವೆರಡೂಕೂಡುವುದಾದರೂ ಹೇಗೆ ?

ಜ್ಞಾನ–ಕರ್ಮಗಳ ಹೇತುಗಳೂ, ಕಾರ್ಯಗಳೂ, ಸ್ವರೂಪಗಳೂ- ಎಲ್ಲವೂ ಕತ್ತಲೆ ಬೆಳಕುಗಳಂತೆ ಒಂದಕ್ಕೊಂದು ವಿರುದ್ಧವೇ ಆದುದರಿಂದ ಅವುಗಳ ಗೆಳೆತನವಿಲ್ಲ. ಇಲ್ಲಿಯವರೆಗೆ ಭಾಟ್ಟ ಮತ ಖಂಡಿಸಿದ್ದಾಯಿತು.

## ಪ್ರಸಂಖ್ಯಾನವಾದಿಗಳ ಮಂಡನೆ

**ಪ್ರ : 87. ಪ್ರಸಂಖ್ಯಾನವಾದಿಗಳ ತತ್ತ್ವವೇನು ?**

ಉ : ಪ್ರಸಂಖ್ಯಾನವೆಂದರೂ ಧ್ಯಾನವೆಂದರೂ ಒಂದೆ ಬ್ರಹ್ಮಸಾಕ್ಷಾತ್ಕಾರಕ್ಕೆ ಧ್ಯಾನವು ಆವಶ್ಯಕವು. ಮತ್ತು ಬ್ರಹ್ಮಸಾಕ್ಷಾತ್ಕಾರವಾಗುವವರೆಗೆ ಕರ್ಮಗಳನ್ನು ಮಾಡಬೇಕು ಎಂಬುದೇ ಅವರ ತತ್ತ್ವ. ಇವರನ್ನು ಅದ್ವೈತಾತ್ಮತತ್ತ್ವವನ್ನೊಪ್ಪುವವಳ ಪಕ್ಷದವರೆಂದು ಕರೆಯುತ್ತಾರೆ.

ಈ ಅದ್ವೈತಾತ್ಮತತ್ತ್ವವನ್ನೊಪ್ಪುವವರ ಪಕ್ಷದಲ್ಲಿಯೂ ಎರಡು ಭೇದಗಳಿವೆ. ಇವರೂ ಸಮುಚ್ಚಯವಾದಿಗಳೇ ಅಂದರೆ ಬ್ರಹ್ಮಜ್ಞಾನದಂತೆ ಉಪಾಸನೆ ಅಥವಾ ಧ್ಯಾನರೂಪ ಕರ್ಮವೂ ಮೋಕ್ಷಕ್ಕೆ ಅತ್ಯಾವಶ್ಯಕವೆಂದು ಹೇಳುವರು. ಇವರಲ್ಲಿಯೂ ಎರಡು ಪಕ್ಷಗಳಿವೆ.

**ಪ್ರ : 88. ಅದ್ವೈತಾತ್ಮತತ್ತ್ವವನ್ನೊಪ್ಪುವವರ ಮೊದಲನೆ ಪಕ್ಷದವರ ಸಿದ್ಧಾಂತವೇನು. ?**

**1 ನೇ ಪಕ್ಷ :-** ವೇದಾಂತ ವಾಕ್ಯಗಳಿಂದಾಗುವ "ನಾನು ಬ್ರಹ್ಮ" ನೆಂಬ ಅನುಭವವು ಹುಟ್ಟಿದೊಡನೆಯೇ ಅಜ್ಞಾನವು ನಾಶವಾಗುವುದಿಲ್ಲ. ಪ್ರತಿದಿನವೂ ಸದಾ ಎಡೆಬಿಡದೆ ಒಂದು ಕಡೆಕುಳಿತು "ನಾನು ಬ್ರಹ್ಮ" "ನಾನು ಬ್ರಹ್ಮ" ಎಂದು ಧ್ಯಾನಮಾಡುತ್ತಾ ಅದೇ ಭಾವನೆ ಬೆಳೆಸುತ್ತಾ ಹೋದರೆ ಮಾತ್ರ ಮರಣಾನಂತರ ತಾನೂ ದೇವನೇ ಅಗುವನು. ಇದನ್ನೇ ಬೃಹದಾರಣ್ಯಕ ಶ್ರುತಿಯು 4-1-2 ರಲ್ಲಿ "ದೇವೋ ಭೂತ್ವಾ ದೇವಾನಪ್ಯೇತಿ" ದೇವಭಾವವನ್ನು ಸಾಕ್ಷಾತ್ಕರಿಸಿಕೊಂಡು ತಾನೂದೇವನೇ ಆಗುವನು. ಇದರಿಂದ ಅಜ್ಞಾನವೆಲ್ಲಾ ಸಂಪೂರ್ಣ ನಾಶವಾಗುವುದು ಎಂದು ಹೇಳಿದೆ. ಇದು ಅದ್ವೈತಾತ್ಮತತ್ತ್ವವನ್ನೊಪ್ಪುವ ಒಂದನೇ ಪಕ್ಷದವರಸಿದ್ಧಾಂತ.

**ಎರಡನೇ ಪಕ್ಷದವರ ಸಿದ್ಧಾಂತವೇನು ?**

ಎಲ್ಲಾ ವಾಕ್ಯಗಳು, ಆ ವಾಕ್ಯಗಳಲ್ಲಿರುವ ಅನೇಕ ಪದಗಳ ಅರ್ಥವನ್ನು ಬೇರೆ ಬೇರೆಯಾಗಿ ಬೋಧಿತವಾಗುವ ಸ್ವತಂತ್ರವಾದ ಪದಾರ್ಥಗಳ

ನಡುವೆ ಇರುವ ಸಂಬಂಧವನ್ನು ಮಾತ್ರ ತೋರಿಸುತ್ತವೆ. ಈ ರೀತಿ ವಾಕ್ಯಗಳಲ್ಲಿರುವ ಪದಗಳ ಅರ್ಥವು ಬೇರೆ ಬೇರೆ ಇದ್ದಾಗ ಆ ವಾಕ್ಯದಿಂದಾಗುವ ಜ್ಞಾನವೂ ದ್ವೈತವಾಗಿಯೇ ಇರುತ್ತದೆ. ಈ ರೀತಿಯಿಂದ ನೋಡಿದರೆ ವೇದಾಂತ ವಾಕ್ಯಗಳಿಂದಾಗುವ "ನಾನು ಬ್ರಹ್ಮನಿದ್ದೇನೆ "ಎಂಬ ವಿಜ್ಞಾನದಲ್ಲಿ "ನಾನು, ಬ್ರಹ್ಮನು, ಇದ್ದೇನೆ" ಈ ಮೂರೂ ಪದದ ಅರ್ಥಗಳಿಗೆ ಸಂಬಂಧವಿರುವುದು ತಿಳಿಯುತ್ತದೆ. ಆದರೆ ಅದರಲ್ಲಿರುವ ಪದಗಳ ಅರ್ಥಗಳೇ ಬೇರೆಬೇರೆಯಾಗಿವೆ. ಆದುದರಿಂದ ಈ "ನಾನು ಬ್ರಹ್ಮನಿದ್ದೇನೆ" ಎಂಬ ವಿಜ್ಞಾನದಿಂದ ಆತ್ಮವಸ್ತುವನ್ನು ಮುಟ್ಟಲಾಗುವುದಿಲ್ಲ.

ಆದುದರಿಂದ ಏನು ಮಾಡಬೇಕೆಂದರೆ ಗಂಗಾ ಪ್ರವಾಹದಂತೆ ಒಂದೇ ಸಮನೆ "ನಾನು ಬ್ರಹ್ಮನಿದ್ದೇನೆ, ನಾನು ಬ್ರಹ್ಮನಿದ್ದೇನೆ" ಎಂದು ಅಭ್ಯಾಸಮಾಡುತ್ತಾ ಹೋದರೆ ಅದರಿಂದಲೇ ಮುಂದೆ ವೇದಾಂತ ವಾಕ್ಯಾರ್ಥದಿಂದ ಭಿನ್ನವಾದ ಮತ್ತೊಂದು ವಿಜ್ಞಾನ ಅಥವಾ ಅನುಭವವು ಉಂಟಾಗುತ್ತದೆ. ಈ ಅನುಭವವೇ ಅಜ್ಞಾನ ಕತ್ತಲೆಯನ್ನು ಬೇರುಸಹಿತ ಕಿತ್ತು ಹಾಕುವುದು ಎಂದು ಅದ್ವೈತಾತ್ಮತತ್ತ್ವವನ್ನೊಪ್ಪುವವರ ಎರಡನೇ ಪಕ್ಷದವರು ಹೇಳುವರು. ಈ ಎರಡೂ ಪಕ್ಷದವರನ್ನು ಸೇರಿಸಿಯೇ ಪ್ರಸಂಖ್ಯಾನವಾದಿಗಳೆಂದು ಕರೆಯುತ್ತಾರೆ.

**ಪ್ರ : 89. ಈ ಎರಡನೇ ಪಕ್ಷದವರು ವೇದಾಂತ ವಾಕ್ಯಗಳಿಂದಾಗುವ ಜ್ಞಾನದಲ್ಲಿ ದೋಷವನ್ನು ಎತ್ತಿದ್ದಾರೆ. ಆದುದರಿಂದ ವಾಕ್ಯಗಳೆಂದರೇನು ? ಅವುಗಳಿಂದ ಹೇಗೆ ಜ್ಞಾನವಾಗುತ್ತದೆ ?**

ಉ : ಸರ್ವ ಸಾಮಾನ್ಯವಾಗಿ ವಾಕ್ಯಗಳ ಅರ್ಥವು ಎರಡು ರೀತಿಯಾಗಿರುತ್ತದೆ. ೧) ಭೇದವನ್ನು ಹೇಳುವುದು ೨) ಸಂಸರ್ಗವನ್ನು ಹೇಳುವುದು.

**ಪ್ರ : 90. ಭೇದಾರ್ಥವನ್ನು ತೋರಿಸುವ ವಾಕ್ಯದ ಲಕ್ಷಣವೇನು ?**

ಉ : ವಾಕ್ಯದಲ್ಲಿರುವ ಕರ್ತೃ, ಕರ್ಮ ಕ್ರಿಯಾಪದಗಳಿಂದ ಬೇರೆ ಬೇರೆ ವಸ್ತುಗಳ ಅರ್ಥವು ಪ್ರತಿಪಾದಿತವಾಗುತ್ತಿದ್ದರೆ ಆ ವಾಕ್ಯದ ಅರ್ಥವು ಭೇದವೆಂದು ಹೇಳುತ್ತಾರೆ. ಏಕೆಂದರೆ ಆ ವಾಕ್ಯದಲ್ಲಿರುವ ಪದಗಳ ಅರ್ಥ ಬೇರೆಬೇರೆಯಾಗಿರುತ್ತದೆ.

**ಉದಾ** –: "ರಾಮನು ರಾವಣನ ಶಿರಸ್ಸನ್ನು ಬಾಣದಿಂದ ಕತ್ತರಿಸಿದನು" ಈ ವಾಕ್ಯದಲ್ಲಿರುವ ಪದಗಳ ಅರ್ಥ ಬೇರೆ ಬೇರೆಯಾಗಿರುತ್ತದೆ. ಈ ವಾಕ್ಯದಲ್ಲಿರುವ ವಿಭಕ್ತಿ ಪ್ರತ್ಯಯಗಳು ಬೇರೆ ಬೇರೆಯಾಗಿವೆ. ಆದರೂ ಅವೆಲ್ಲಾ ಕೂಡಿಕೊಂಡು ಒಂದೇ ಸಂಗತಿಯನ್ನು ಹೇಳುತ್ತವೆಂಬುದೇನೋ ನಿಜವೇ ಆದರೂ ಪದಗಳ ಅರ್ಥಗಳು ಭಿನ ಭಿನ್ನವಾಗಿವೆ. ಆದುದರಿಂದ ಈ ವಾಕ್ಯದ ಅರ್ಥವು ಭೇದ ಸಂಬಂಧವನ್ನು ತೋರಿಸುವುದಾಗಿರುತ್ತದೆ.

**ಪ್ರ : 91. ಸಂಸರ್ಗಾರ್ಥವನ್ನು ತೋರಿಸುವ ವಾಕ್ಯದ ಲಕ್ಷಣವೇನು. ?**

ಉ : ವಾಕ್ಯದಲ್ಲಿರುವ ಎಲ್ಲಾ ಪದಗಳೂ ಒಂದೇ ವಸ್ತುವನ್ನು ಪ್ರತಿಪಾದಿಸುತ್ತಿದ್ದರೆ ಆ ವಾಕ್ಯವನ್ನು ಸಂಸಗಾರ್ಥವನ್ನು ತೋರಿಸುವುದೆಂದು ಕರೆಯುತ್ತಾರೆ.

**ಉದಾ** :– "ಅದು ಸುಂದರವಾದ, ಸುವಾಸಿಕವಾದ ಗುಲಾಬಿಹೂ" ಎಂಬ ವಾಕ್ಯದಲ್ಲಿ ಪದಗಳು ಅನೇಕವಾಗಿದ್ದರೂ ಅವೆಲ್ಲಾ ಒಂದೇ ವಸ್ತುವಿಗೆ ಸಂಬಂಧಿಸಿರುತ್ತವೆ. ಆದುದರಿಂದ ಈ ಪದಗಳ ನಡುವೆ 'ಸಂಸರ್ಗ' ವೆಂದರೆ ಕೂಡುವಿಕೆಯಿದೆ ಎಂದು ಹೇಳಬಹುದು.

ಜಗತ್ತಿನಲ್ಲಿರುವ ವಾಕ್ಯಗಳೆಲ್ಲಾ ಈ ಎರಡೇ ವಿಧ. ಪ್ರತಿಯೊಂದು ವಾಕ್ಯವು ಭೇದ ಸಂಬಂಧವನ್ನಾಗಲಿ, ಅಭೇದ ಸಂಬಂಧವನ್ನಾಗಲಿ ತೋರಿಸಲೇಬೇಕು.

**ಪ್ರ : 92. ಅದ್ವೈತಿಗಳು ಮಹಾವಾಕ್ಯ ತಾತ್ಪರ್ಯ ನಿರ್ಣಯ ಮಾಡುವಾಗ ಯಾವ ಅರ್ಥವನ್ನು ತೆಗೆದುಕೊಳ್ಳುತ್ತಾರೆ. ?**

ಉ : ಮಹಾವಾಕ್ಯ ತಾತ್ಪರ್ಯ ನಿರ್ಣಯದಲ್ಲಿ ಈ ಎರಡೂ ವಾಕ್ಯಗಳ ಅರ್ಥಗಳೂ ಸಮಂಜಸವಾಗುವುದಿಲ್ಲ. ಆದುದರಿಂದ ಅದ್ವೈತಿಗಳು ಅಖಂಡಾರ್ಥವೆಂಬ ವಾಕ್ಯಾರ್ಥದ ಮೂರನೇ ರೀತಿಯನ್ನು ಅನುಸರಿಸುತ್ತಾರೆ.

**ಉದಾ :–** "ಅವನೇ ಇವನು" ಎಂಬ ವಾಕ್ಯವು ಭೇದ ಅರ್ಥವನ್ನು ಉಂಟುಮಾಡಲ್ಲ – ಏಕೆಂದರೆ ಇಲ್ಲಿ ಬೇರೆ ಬೇರೆ ಪದಗಳು ಬೇರೆ ಬೇರೆ ಅರ್ಥವನ್ನು ಕೊಡುವವು ಯಾವೂ ಇಲ್ಲ. ಅದರಂತೆ ಸಂಸರ್ಗ ಸಂಬಂಧವನ್ನು ತೋರಿಸುವುದಿಲ್ಲ. ಸಂಸರ್ಗ ಅರ್ಥದಲ್ಲಿ ವಿಶೇಷಣ–ವಿಶೇಷ್ಯ ಭಾವನೆಬೇಕು. ಇಲ್ಲಿ ವಿಶೇಷಣ–ವಿಶೇಷ್ಯ ಸಂಬಂಧವೇ ಇರುವುದಿಲ್ಲ.

ಆದುದರಿಂದ ಈ ವಾಕ್ಯವು ವಿಶೇಷಣ ರಹಿತವಾದ ಒಂದು ಪಾದರ್ಥವನ್ನು ತೋರಿಸುತ್ತದೆ. ಹಿಂದೆ ಯಾವ ವಿಶೇಷ ದೇಶ, ಕಾಲ, ಪರಿಸ್ಥಿತಿಯಲ್ಲಿ ಬೆಟ್ಟಿಯಾಗಿದ್ದನೋ ಅವುಗಳನ್ನು ಲಕ್ಷಕ್ಕೆ ತರುವುದಿಲ್ಲ; ಮತ್ತು ಈಗ ಯಾವ ದೇಶ, ಕಾಲ, ಪರಿಸ್ಥಿತಿಗಳಲ್ಲಿ ಭೆಟ್ಟಿಯಾಗಿರುವನೋ ಅವುಗಳನ್ನು ಲಕ್ಷಕ್ಕೆ ತರುವುದಿಲ್ಲ ಇವುಗಳನ್ನು ಲಕ್ಷಕ್ಕೆ ತಂದರೇ 'ಅವನು, ಇವನು' ಎಂಬ ಪದಗಳು ಒಂದೇ ವಸ್ತುವನ್ನು ತೋರಿಸುವವೆಂದು ತಿಳಿಯುವುದೇ ಕಠಿಣವಾಗುತ್ತದೆ. ಏಕೆಂದರೆ ಅವುಗಳ ವಾಚ್ಯಾರ್ಥಗಳಲ್ಲಿ ವಿರೋಧವಿರುತ್ತದೆ. ಅವೆರಡನ್ನು ಅಲ್ಲಗಳೆದರೆ ಅವನೇ ಇವನು, ಎಂಬ ವಾಕ್ಯದಿಂದ ಒಂದೇ ವ್ಯಕ್ತಿಯ ಅಥವಾ ಪದಾರ್ಥದ ಜ್ಞಾನವಾಗುತ್ತದೆ. ಹೀಗೆ ವಾಕ್ಯಾರ್ಥವು ಒಂದು ಅಖಂಡವಾದ ಪದಾರ್ಥವನ್ನು ತೋರಿಸುವುದು ಶಕ್ಯವಿದೆ.

**ಪ್ರ : 93. ಅಖಂಡ ವೆಂದರೇನು ?**

ಉ ; ಅಖಂಡವೆಂದರೆ ಯಾವುದರಿಂದಲೂ ತುಂಡಾಗದೆ ಇರುವುದು ಎಂದು ಅರ್ಥವು. ಹೀಗೆ ದೇಶ, ಕಾಲ ಮೊದಲಾದವುಗಳಿಗೆ ಕಟ್ಟು ಬೀಳದ ಅಖಂಡ ಪದಾರ್ಥದ ಜ್ಞಾನವೂ ವಾಕ್ಯದಿಂದ ಆಗುತ್ತದೆ ಎನ್ನುವುದೇ ಅದ್ವೈತಿಗಳ ನಿರ್ಣಯ.

ಈ ವಾಕ್ಯಾರ್ಥವು ಹೊರಡಬೇಕಾದರೆ 'ಅವನು' 'ಇವನು' ಎಂಬ ಶಬ್ದಗಳ ವಾಚ್ಯಾರ್ಥವನ್ನು ಬಿಟ್ಟು ಅವುಗಳ ತಾತ್ಪರ್ಯಾರ್ಥವನ್ನು ತೆಗೆದು ಕೊಳ್ಳಬೇಕು.

ಹಾಗೆಯೇ ಎಲ್ಲಾ ಮಹಾ ವಾಕ್ಯಗಳಲ್ಲಿ ಸಂಸರ್ಗಾರ್ಥವನ್ನು ತೆಗೆದು ಕೊಳ್ಳದೇ ಅಖಂಡಾರ್ಥವನ್ನೇ ತೆಗೆದುಕೊಳ್ಳಬೇಕೆಂಬುದೇ ಅದ್ವೈತಿಗಳ ನಿರ್ಣಯ. ಪ್ರಸಂಖ್ಯಾನವಾದಿಗಳು ಮಹಾ ವಾಕ್ಯಕ್ಕೆ ಸಂಸರ್ಗಾರ್ಥವನ್ನು ತೆಗೆದುಕೊಂಡಿದ್ದಾರೆ.

## ಪ್ರಸಂಖ್ಯಾನಮತದ ಖಂಡನೆ

ವೇದಾಂತ ವಾಕ್ಯದಿಂದಾಗುವ "ನಾನು ಬ್ರಹ್ಮ"ನೆಂಬ ಅನುಭವವು ಹುಟ್ಟುವುದರಿಂದ ಅಜ್ಞಾನ ನಾಶವಾಗುವುದಿಲ್ಲ –"ನಾನು ಬ್ರಹ್ಮ"ನೆಂದು ಭಾವನೆ ಬೆಳೆಸುತ್ತಾಹೋದರೆ ಭಾವನೆಯ ಬಲದಿಂದ ದೇವ ಭಾವವನ್ನು ಸಾಕ್ಷಾತ್ಕರಿಸಿಕೊಂಡು ಮುಂದೆ ಮರಣಾನಂತರ ತಾನೂ ದೇವನೇ ಆಗು ವನು; ಎನ್ನುವುದು ಒಬ್ಬರ ಪಕ್ಷ.

ವಾಕ್ಯಗಳಲ್ಲಿರುವ ಪದಗಳು ಬೇರೆ ಬೇರೆ ಅರ್ಥವನ್ನು ಕೊಟ್ಟು ಸ್ವತಂತ್ರವಾದ ಪದಾರ್ಥಗಳ ನಡುವಿರುವ ಸಂಬಂಧವನ್ನು ಮಾತ್ರ ತೋರಿಸುತ್ತವೆ. ಇದರಂತೆ 'ನಾನು ಬ್ರಹ್ಮನಿದ್ದೇನೆ' ಎಂಬ ವಾಕ್ಯದಲ್ಲಿ "ನಾನು, ಬ್ರಹ್ಮನು, ಇದ್ದೇನೆ" ಈ ಪದಗಳ ನಡುವೆ ಇರುವ ಸಂಬಂಧವನ್ನು ಮಾತ್ರ ಸೂಚಿಸುತ್ತದೆ. ಆದುರಿಂದ ಅದು ಅದ್ವಿತೀಯ ವಸ್ತುವನ್ನು ಮುಟ್ಟಲಾರದು. ಆದುದರಿಂದ "ನಾನು ಬ್ರಹ್ಮ"ನೆಂದು ಗಂಗಾ ಪ್ರವಾಹದಂತೆ ಒಂದೇ ಸಮನೆ ಅಭ್ಯಾಸಮಾಡುತ್ತಾ ಹೋದರೆ ಆ ಅಭ್ಯಾಸದಬಲದಿಂದ ಮುಂದೆ"ವೇದಾಂತ ವಾಕ್ಯಾರ್ಥದಿಂದ ಭಿನ್ನವಾದ" ಮತ್ತೊಂದು 'ವಿಜ್ಞಾನ' ಅಥವಾ ಅನುಭವವು ಉಂಟಾಗುತ್ತದೆ. ಈ ಅನುಭವವೇ ಅಜ್ಞಾನ ಕತ್ತಲೆಯನ್ನು ಬೇರು ಸಹಿತ ಕಿತ್ತು ಹಾಕುತ್ತದೆ ಎಂದು ಎರಡನೇ ಪಕ್ಷದವರ ಸಿದ್ಧಾಂತ.

**ಖಂಡನೆ :-** ಪ್ರಸಂಖ್ಯಾನ ಅಥವಾ ಧ್ಯಾನವು ಅನಾವಶ್ಯಕವೆಂದು ವೇದಾಂತ ಸಿದ್ಧಾಂತವಲ್ಲ. ಆದರೆ ಅದು ವೇದಾಂತ ವಾಕ್ಯಜನ್ಯ ಜ್ಞಾನ

ವಾಗುವ ಮೊದಲೇ ಬೇಕಾಗುತ್ತದೆ ವಿನಃ ವೇದಾಂತ ವಾಕ್ಯಜನ್ಯ ಜ್ಞಾನವಾದಮೇಲೆ ಆಗತ್ಯತೆ ಇಲ್ಲ.

**ಪ್ರ : 94. ಹಾಗಾದರೆ ಪ್ರಸಂಖ್ಯಾನ ಅಥವಾ ಧ್ಯಾನವೆಂದರೇನು. ?**

ಉ : "ತತ್ರ ಪ್ರತ್ಯಯೈಕ ತಾನತಾ ಧ್ಯಾನಂ"ಹೃದಯದಲ್ಲಿ ಯಾವುದಾದರೊಂದು ದೇವತೆಯನ್ನು ಕಲ್ಪಿಸಿ ಆ ಧ್ಯೇಯವಾದ ಮೂರ್ತಿಗಳ ಆಕಾರದಲ್ಲಿಯೇ ಅಂತಃಕರಣವನ್ನು ನಿಲ್ಲಿಸಬೇಕು. ಅಂತಃಕರಣ ವೃತ್ತಿಯು ಆ ಮೂರ್ತಿ ವಿನಃ ಬೇರೆಕಡೆ ಹೋಗಬಾರದು. ಈ ರೀತಿ ಅಂತಃಕರಣ ವೃತ್ತಿಯು ಒಂದೇ ಕಡೆ ಇರುವುದನ್ನೇ ಪಾತಂಜಲಿ ಋಷಿಗಳು ತಮ್ಮ ಯೋಗ ಸೂತ್ರದ 3 ನೇ ಪಾದದ ೨ ನೆಯ ಸೂತ್ರದಲ್ಲಿ ಧ್ಯಾನವೆಂದು ಹೇಳಿದ್ದಾರೆ.

ಇಷ್ಟದೇವತೆಯ ರೂಪವನ್ನು ತಾಳಿದ ಅಂತಃಕರಣ ವೃತ್ತಿಗಳ ಸಂತತಿ ಅಥವಾ ಪ್ರವಾಹವು ಬೇರೆ ವಿಷಯಕ ವೃತ್ತಿಗಳಿಂದ ಖಂಡವಾಗದೇ ಇದ್ದರೆ ಅದು ಧ್ಯಾನವೆಂದು ಕರೆಯಲ್ಪಡುತ್ತದೆಂದು ಶ್ರೀ ವಿದ್ಯಾರಣ್ಯ ಸ್ವಾಮಿಗಳು ಪಂಚದಶಿಯ ತೃಪ್ತಿದೀಪವೆಂಬ 7 ನೇ ಪ್ರಕರಣದ 119 ನೇ ಶ್ಲೋಕದಲ್ಲಿ ಧ್ಯಾನ ಎಂಬ ಪದಕ್ಕೆ ಅರ್ಥ ಹೇಳಿದ್ದಾನೆ.

ಒಟ್ಟಿನಲ್ಲಿ ಧ್ಯಾನವೆಂಬುದು ಮಾನಸಿಕಕ್ರಿಯೆ. ಈ ಧ್ಯಾನಕ್ಕೆ ಚಿತ್ತದ ಏಕಾಗ್ರತೆಯೇ ಫಲ–ಮೋಕ್ಷವಾಗುವುದು ಬ್ರಹ್ಮಜ್ಞಾನದಿಂದಲೆ.

**ಪ್ರ : 95. ಜ್ಞಾನ, ಧ್ಯಾನಗಳಲ್ಲಿರುವ ವ್ಯತ್ಯಾಸವೇನು ?**

**ಉ :** ೧) ಜ್ಞಾನವು ವಸ್ತುತಂತ್ರ ಧ್ಯಾನವು ಕರ್ತೃತಂತ್ರ.

೨) ಜ್ಞಾನವು ವಿಚಾರದಿಂದ ಉಂಟಾಗುತ್ತದೆ. ಉಪಾಸನೆಯು ಅಥವಾ ಧ್ಯಾನವು ಉಪಾಸಕನ ಇಚ್ಛೆ.

೩) ಜ್ಞಾನವಮಾಡಿಕೊಳ್ಳಲಿಕ್ಕೆ ವಿಚಾರ ಶಕ್ತಿಯು ಆವಶ್ಯಕವಾಗಿ ಬೇಕು. ಧ್ಯಾನಕ್ಕೆ ಅದೇನೂ ಕಾರಣವಿಲ್ಲ. ಗುರುವಿನ ಮೇಲೆ ಶ್ರದ್ಧೆ ಒಂದಿದ್ದರೆ ಸಾಕು.

**ಪ್ರ : 96. ಧ್ಯಾನದ ವಿಷಯದಲ್ಲಿ ಸುರೇಶ್ವರಾಚಾರ್ಯರ ಅಭಿಪ್ರಾಯವೇನು ?**

ಉಪಾಸನೆ ಅಥವಾ ಧ್ಯಾನಕ್ಕೆ ಚಿತ್ತದ ಏಕಾಗ್ರತೆಯೇ ಫಲ. ಧ್ಯಾನವನ್ನು ನಾವು ಮಾಡಬೇಕು; ಆದರೆ ಆ ಧ್ಯಾನವು ಮಂತ್ರ, ಜಪ, ಅಥವಾ ಮೂರ್ತಿ ಚಿಂತನಾರೂಪವಾಗಿರಬಾರದು. ಸಂಸಾರವು ನಿಜವೆಂದೂ, ದೇಹವನ್ನೇ ನಮ್ಮ ಆತ್ಮವೆಂದೂ ನಾವು ವಿಪರೀತವಾಗಿ ತಿಳಿದುಕೊಂಡಿದ್ದೇವೆ. ಈ ತಿಳುವಳಿಕೆಯು ತತ್ತ್ವ ಸಾಕ್ಷಾತ್ಕಾರಕ್ಕೆ ಅಡ್ಡಿಯಾಗಿರುವುದು. ಆದುದರಿಂದ ಅನಾತ್ಮ ವಿಷಯದ ಬಗ್ಗೆ ಇರುವ ಇಂತಹ ನಮ್ಮ ತಿಳುವಳಿಕೆಯನ್ನು ಹೊಡೆದಟ್ಟುವುದಕ್ಕಾಗಿ ನಾವು ಧ್ಯಾನಮಾಡಬೇಕು. ಅಂದರೆ ಆತ್ಮ ಸ್ವರೂಪವನ್ನೇ ಸ್ಫುಟಗೊಳಿಸುವ ವೇದಾಂತ ವಾಕ್ಯಗಳನ್ನು ಪುನಃ ಪುನಃ ಚಿಂತಿಸುತ್ತಿರುವುದೇ ಧ್ಯಾನ. ಈ ರೀತಿ ಮಾಡುವುದರಿಂದ ಬುದ್ಧಿಯ ಏಕಾಗ್ರತೆ ಬೆಳೆದು ಆಗ ನಮಗೆ ಮಹಾ ವಾಕ್ಯಾರ್ಥವನ್ನರಿಯುವ ಸಾಮರ್ಥ್ಯವುಂಟಾಗುತ್ತದೆ. ಇಂತಹ ಧ್ಯಾನವು ಮಹಾ ವಾಕ್ಯ ಜನ್ಯ ಜ್ಞಾನವಾಗುವ ಮೊದಲೇ ಬೇಕಾಗುತ್ತದೆ.

**ಸಾರಾಂಶ :–** ಆದುದರಿಂದ ಶಾಸ್ತ್ರ ಮತ್ತು ಯುಕ್ತಿಗಳನ್ನು ಪುನಃ ಪುನಃ ಚಿಂತಿಸುವುದೇ ಧ್ಯಾನವೆಂದೂ, ಅದು ಮಹಾವಾಕ್ಯೋಪದೇಶದ ಪೂರ್ವದಲ್ಲಿಯೇ ಬೇಕೆಂದು ಸಿದ್ಧವಾಯಿತು.

**ಪ್ರ : 97. ಈ ಧ್ಯಾನಕ್ಕೆ ಏನಾದರೂ ಕ್ರಮ ಇದೆಯೇ ?**

ಉ : ಚಿತ್ತದ ಏಕಾಗ್ರತೆಯೇ ಈ ಧ್ಯಾನಕ್ಕೆ ಫಲ. ಮಂತ್ರಜಪ, ಮತ್ತು ಮೂರ್ತಿ ಧ್ಯಾನಗಳಿಗೆ ಮಾತ್ರ ನಿಯಮ-ಕ್ರಮಗಳು ಅವಶ್ಯಕ. ಆದರೆ ಹಸಿದ ಮನುಷ್ಯನಿಗೆ "ಹೀಗೇ ಊಟಮಾಡು" ಎಂದು ಊಟಮಾಡುವ ನಿಯಮವನ್ನು ಅವನಿಗೆ ಹೇಳಿಕೊಡುವುದು ಹೇಗೆ ನಿರರ್ಥಕವೋ (ಏಕೆಂದರೆ ಹೇಗೆ ಊಟಮಾಡಿದರೂ ಸರಿ ಅವನಿಗೆ ಹೊಟ್ಟೆ ತುಂಬಬೇಕಲ್ಲವೆ.) ಹಾಗೆಯೇ ವಿಪರೀತ ತಿಳುವಳಿಕೆಯು ನಮಗೆ ತತ್ತ್ವ ಸಾಕ್ಷಾತ್ಕಾರವಾಗುವುದಕ್ಕೆ ಅಡ್ಡಬರುತ್ತಿರುವುದರಿಂದ ಅದನ್ನು ಹೇಗಾದರೂ ಮಾಡಿ ಜಯಿಸಬೇಕು. ಅದಕ್ಕೆ ವಿಶಿಷ್ಟಕ್ರಮವನ್ನೇನೂ ಅನುಸರಿಸುವ ಕಾರಣ

ವೇನೂ ಇರುವುದಿಲ್ಲವೆಂದು ವಿದ್ಯಾರಣ್ಯ ಸ್ವಾಮಿಗಳು ಯಥಾರ್ಥವಾಗಿಯೇ ಪಂಚದಶಿಯ 7 ನೇ ಪ್ರಕರಣದ 113 ರಿಂದ 118 ನೇ ಶ್ಲೋಕದ ವರೆಗೆ ಹೇಳಿದ್ದಾರೆ.

**ಸಾರಾಂಶ :–** ಬ್ರಹ್ಮಜಿಜ್ಞಾಸುವು ದೇಶ, ಕಾಲ, ಆಸನ, ನಾಸ ಮೊದಲಾದವುಗಳ ಗೊಂದಕ್ಕೆ ಬೀಳದೆ ಆತ್ಮ ತತ್ತ್ವದ ಚಿಂತನೆ ಮಾಡುತ್ತಿರ ಬೇಕು. ಇಲ್ಲಿ ಯಾವಾಗ ಯಾವಸ್ಥಿತಿಯಲ್ಲಿ ಮನಸ್ಸಿನ ಏಕಾಗ್ರತೆ ಯಾಗು ವಂತಿರುವುದೋ ಆಗ ಕೂಡಲೇ ಬ್ರಹ್ಮ ಚಿಂತೆಯನ್ನು ಮಾಡಬೇಕು. ಹೀಗೆ ಮಾಡುತ್ತಾ ಹೋಗುವುದರಿಂದ ಅನಾತ್ಮದ ಮೇಲಿನ ನಮ್ಮ ಮೋಹವು ಕಡಿ ಮೆಯಾಗಿ ಬುದ್ಧಿಯ ಏಕಾಗ್ರತೆ ಬೆಳೆಯುತ್ತದೆ. ಆದರಿಂದಲೆ ಮುಂದೆ ಮಹಾ ವಾಕ್ಯಾರ್ಥಜ್ಞಾನವಾಗಿ ಮೋಕ್ಷವು ಸಿಕ್ಕುತ್ತದೆ.

**ಖಂಡನೆ :–** ವೇದಾಂತ ವಾಕ್ಯಗಳಿಂದ ಹುಟ್ಟುವ ಜ್ಞಾನವು ತನ್ನ ಒಂದೇ ಏಟಿನಿಂದ ಕರ್ಮ, ಕರ್ತೃ ಮೊದಲಾದ ದ್ವೈತರೂಪದಿಂದ ಭಾಸ ವಾಗುತ್ತಿರುವ ಅಜ್ಞಾನವನ್ನೆಲ್ಲಾ ಚಂಡಾಡಿಬಿಡುತ್ತದೆ. ಆದುದರಿಂದ ಈ ಜ್ಞಾನಕರ್ಮಗಳು ಕೂಡುವುದೆಂತು !

ಇಲ್ಲಿಯವರೆಗೆ ಪ್ರಸಂಖ್ಯಾನ ಮತ ಅಂದರೆ ಅದ್ವೈತಾತ್ಮ ತತ್ತ್ವವ ನ್ನೊಪ್ಪುವವರ ಎರಡು ಮತಗಳ ಖಂಡನ ಮಾಡಿದ್ದಾಯಿತು. ಇದು ಬ್ರಹ್ಮನು ಏಕನು ಎನ್ನುವವರ ಪಕ್ಷ. (ಈ ಪ್ರಸಂಖ್ಯಾನ ಮತದ ಮತ್ತೊಷ್ಟು ವಿವರವು 3 ನೇ ಅಧ್ಯಾಯದಲ್ಲಿ ಚರ್ಚಿಸಲ್ಪಟ್ಟಿದೆ. ವಿವರವನ್ನು ಅಲ್ಲಿ ನೋಡಬಹುದು.)

## ಭೇದಾಭೇದ ಬ್ರಹ್ಮಜ್ಞಾನ ಮತ್ತು ಕರ್ಮಗಳ ಸಮುಚ್ಚಯ ಮಂಡನೆ

ಈ ಭೇದಾಭೇದ ಬ್ರಹ್ಮಜ್ಞಾನವನ್ನು ಒಪ್ಪುವವರು ಬ್ರಹ್ಮನ ಅನೇ ಕತ್ವವನ್ನು ಹೇಳುವುದರಿಂದ ಇವರಿಗೆ ದ್ವೈತಾದ್ವೈತ ಅಥವಾ ಭೇದಾ ಭೇದ ಬ್ರಹ್ಮವನ್ನೊಪ್ಪುವವರ ಪಕ್ಷವೆಂದು ಕರೆಯುತ್ತಾರೆ. ಇವರೂ ಸಹಿತವಾಗಿ ಜ್ಞಾನಕರ್ಮ ಸಮುಚ್ಚಯವಾದಿಗಳು. ಇವರವಾದವನ್ನು

ಅನೇಕಾಂತವಾದವೆಂದೂ ಕರೆಯುತ್ತಾರೆ. ರಾಮಾನುಜಾಚಾರ್ಯರ ವಿಶಿಷ್ಟಾದ್ವೈತವು ಈ ಪಕ್ಷವನ್ನೇ ಆಧಾರವಾಗಿಟ್ಟುಕೊಂಡಿರುವುದು. ಈ ಪಕ್ಷದ ಮೂಲ ಉತ್ಪಾದಕ "ಭರ್ತೃ ಪ್ರಪಂಚ" ಇರಬಹುದೆಂದು ತಿಳಿದು ಬರುತ್ತದೆ.

ಪ್ರ : 98- ಈ ಭೇದಾಭೇದ ಪಕ್ಷವೆಂದರೇನು. ?

ಉ : ಇವರೂ ಅದ್ವೈತವನ್ನೇ ಒಪ್ಪುತ್ತಾರೆ. ಇವರ ಅದ್ವೈತವು ಕೇವಲ ಅದ್ವೈತವಾಗದೆ ದ್ವೈತವನ್ನೊಳಗೊಂಡ ಅದ್ವೈತವಾಗಿದೆ. ಇವರು ಪ್ರತಿಪಾದಿಸುವ ಬ್ರಹ್ಮವನ್ನು ಸಗುಣ ಬ್ರಹ್ಮನಿಗೆ ಹೋಲಿಸಬಹುದು.

ಇವರತತ್ತ್ವ :– ೧) ಒಂದು ಗಿಡಕ್ಕೆ ಹಲವು ಟೊಂಗೆಗಳೂ, ರೆಂಬೆಗಳೂ, ಎಲೆ, ಹೂ, ಕಾಯಿಗಳೂ ಇರುವವಲ್ಲವೆ ? ಗಿಡವೆಂಬ ದೃಷ್ಟಿಯಿಂದ ನೋಡಿದರೆ ಅವೆಲ್ಲ ಕೂಡಿ ಒಂದೇ ವಸ್ತುವಾಗುವುದು. ಅದೇ ಗಿಡವನ್ನೇ ಟೊಂಗೆ, ರೆಂಬೆ, ಎಲೆ, ಹೂ, ಕಾಯಿಗಳ ದೃಷ್ಟಿಯಿಂದ ನೋಡಿದರೆ ಅನೇಕವಾಗಿ ತೋರುವುದು. ಹೀಗೆ ಏಕತ್ತ್ವವೂ ಸತ್ಯವಾಗುವುದು; ಅನೇಕತ್ವವೂ ಸತ್ಯವಾಗುವುದು. ಅಂದರೆ ಭೇದವೂ ಸತ್ಯ-ಅಭೇದವೂ ಸತ್ಯ.

೨) ಸಮುದ್ರವು ನೀರು, ಬುರುಗು, ತೆರೆ, ಗುಳ್ಳೆ ಮೊದಲಾದವುಗಳ ರೂಪದಿಂದ ಅನೇಕವಾಗಿ ಕಾಣುವುದು. ಸಮುದ್ರದ ದೃಷ್ಟಿಯಿಂದ ನೋಡಿದರೆ ಅವೆಲ್ಲಾ ಒಂದೇ ಆಗಿ ಕಾಣುವುವು.

೩) ಮಣ್ಣೆಂಬ ದೃಷ್ಟಿಯಿಂದ ಕೊಡ, ಗಡಿಗೆ ಹರವಿ, ಕುಡಿಕೆ, ಹಣತೆ-ಮೊದಲಾದವುಗಳೆಲ್ಲಾ ಒಂದೇ ಎಂದು ಹೇಳಬಹುದು. ಅವನ್ನೇ ಬೇರೆ ಬೇರೆ ಯಾಗಿ ವಿಚಾರ ಮಾಡಿದರೆ ಅನೇಕವಾಗಿರುವವೆಂದೂ ಹೇಳಬಹುದು.

೪) ಬಂಗಾರವೆಂಬ ದೃಷ್ಟಿಯಿಂದ ವಾಲೆ, ಚೈನು, ಸರ, ಬಳೆ ಮೊದಲಾದವುಗಳೆಲ್ಲಾ ಒಂದೇ ಎಂದೂ ವಾಲೆ, ಚೈನು, ಸರ, ಬಳೆಗಳ ದೃಷ್ಟಿಯಿಂದ ವಿಚಾರಮಾಡಿದರೆ ಅನೇಕವಾಗಿರುವುವೆಂದೂ ಹೇಳಬಹುದು.

ಅಂದರೆ ಅಭ್ಯಸ್ತದೃಷ್ಟಿಯಿಂದ ಅನೇಕತ್ವವೂ ಅಧಿಷ್ಠಾನ ದೃಷ್ಟಿಯಿಂದ ಏಕತ್ವವೂ ಸಿದ್ಧಿಸುತ್ತದೆ. ಹಾಗೆಯೇ ಬ್ರಹ್ಮನೂಕೂಡ ಒಂದು ರೀತಿಯಿಂದ ಏಕವಾಗಿಯೂ ಮತ್ತೊಂದು ರೀತಿಯಿಂದ ಅನೇಕವಾಗಿಯೂ, ಇರುತ್ತಾನೆಂದು ಕಲ್ಪಿಸಬಹುದು.

**ಉದಾ :–** ಜೀವ ಜಗತ್ತುಗಳು ಬ್ರಹ್ಮನ ದೇಹ (ಇದು ಶ್ರೀ ರಾಮಾನುಜರ ಮತ) ವೆಂದು ಕಲ್ಪಿಸಿದ್ದಾರೆ, ಬ್ರಹ್ಮನೊಬ್ಬನೇ ತನ್ನ ಶರೀರದಿಂದ ಸಹಿತನಾಗಿ ಇರುವನೆಂಬ ದೃಷ್ಟಿಯಿಂದ ಬ್ರಹ್ಮನ ಏಕತ್ವವು ನಿಜವಾಗುವುದು.

ಇನ್ನು ಜೀವ, ಜಗತ್ತು, ಈಶ್ವರನೆಂಬ ದೃಷ್ಟಿಯಿಂದ ನಾನತ್ವವು ನಿಜವಾಗುವುದು. ಮತ್ತು ಹೀಗೆ ತಿಳಿಯುವುದರಿಂದ ಕರ್ಮಕಾಂಡಕ್ಕೂ ಅವಕಾಶವನ್ನು ಮಾಡಿಕೊಟ್ಟಂತಾಗುವುದು. ಮತ್ತು ಜ್ಞಾನಕಾಂಡಕ್ಕೂ ಅವಕಾಶ ಮಾಡಿಕೊಟ್ಟಂತಾಗುವುದು.

ಲೌಕಿಕ ವೈದಿಕ ವ್ಯವಹಾರಕ್ಕೆ ಅನೇಕತ್ವದ ಭೇದವು ಅವಶ್ಯಕ. ಬ್ರಹ್ಮನ ಅನೇಕತ್ವ ಕಲ್ಪನೆಯಿಂದ ಈ ಲೌಕಿಕ ವೈದಿಕ ವ್ಯವಹಾರಕ್ಕೆ ಅವಕಾಶಕೊಟ್ಟಂತಾಗುವುದು.

ಇನ್ನು ಮೋಕ್ಷಕ್ಕೆ ಏಕತ್ವದ ಜ್ಞಾನವು ಅವಶ್ಯಕ. ಬ್ರಹ್ಮದ ಏಕತ್ವ ಕಲ್ಪನೆಯಿಂದ ಇದಕ್ಕೂ ಅವಕಾಶ ಕೊಟ್ಟಂತಾಗುವುದು.

ಈ ಎರಡೂ ಈ ಭೇದಾಭೇದ ಪಕ್ಷದಲ್ಲಿ ಇವೆ. ಲೌಕಿಕವೂ ಸಾಧನೆಯಾಗಿ ಮೋಕ್ಷವೂ ಸಾಧಿಸುವುದು. ಆದುದರಿಂದ ಈ ಪಕ್ಷವನ್ನೊಪ್ಪುವುದೇ ಸಮಂಜಸವಾಗುದೆಂದು ಈ ಪಕ್ಷದವರು ಹೇಳುತ್ತಾರೆ.

ಇವರ ಅಭಿಪ್ರಾಯದಂತೆ ಭೇದವೂ ಸತ್ಯ–ಅಭೇದವೂ ಸತ್ಯ. ಆದುದರಿಂದ ಕೊನೆಯವರೆವಿಗೂ ಕರ್ಮ ಮಾಡುತ್ತಲೇ ಇರಬೇಕು.

ಬರೀ ಕರ್ಮ ಮಾಡುತ್ತಾ ಇದ್ದರೆ ದ್ವೈತವೇ ಸತ್ಯವೆಂದು ತಿಳಿದಂತಾಗುತ್ತದೆ. ಆದುದರಿಂದ ಬ್ರಹ್ಮನ ಏಕತ್ವ ಜ್ಞಾನವೂ ಮೋಕ್ಷಕ್ಕೆ ಅವಶ್ಯಕ. ಆದರೆ ಬರೀ ಆ ಜ್ಞಾನ ಒಂದೇ ಆದರೂ ಸಾಲದು. ಆದುದ

ರಿಂದ ಮೋಕ್ಷಕ್ಕೆ ಈ ಕರ್ಮಜ್ಞಾನಗಳೆರಡೂ ಸಮವಾಗಿಯೇ ಅವಶ್ಯಕವೆಂದು ಸಿದ್ಧವಾಯಿತು.

**ಪ್ರ: 99. ಈ ಮತದಲ್ಲಿರುವ ಒಳ ಭೇದಗಳಾವುವು?**

ಉ. ಈ ಪಕ್ಷದವರಲ್ಲಿ ಮೂರು ಒಳ ಭೇದಗಳಿವೆ. ೧) ಬ್ರಹ್ಮವು ಸಂಸಾರಾವಸ್ಥೆಯಲ್ಲಿಯೂ ನಮ್ಮ ಸ್ವರೂಪ ಅಂದರೆ ಜೀವಾತ್ಮರ ಸ್ವರೂಪವೇ ಆಗಿರಬಹುದು

೨) ಬ್ರಹ್ಮವು ಎಂದೂ ಜೀವಾತ್ಮರ ಸ್ವರೂಪವಾಗಲಾರದು

೩) ಸಾಮಾನ್ಯ ರೂಪದಿಂದ ಬ್ರಹ್ಮವು ಜೀವಿಗಳಿಂದ ಅಭಿನ್ನವಾಗಿಯೂ ವಿಶೇಷರೂಪದಿಂದ ಜೀವಿಗಳಿಂದ ಭಿನ್ನವಾಗಿಯೂ ಇದೆ

## ಭೇದಾಭೇದ ಬ್ರಹ್ಮಜ್ಞಾನ ಮತ್ತು ಕರ್ಮಗಳ ಸಮುಚ್ಚಯ ಖಂಡನೆ

ಬ್ರಹ್ಮವು ಜೀವನ ಸ್ವರೂಪವೆಂಬುವ ಮೊದಲನೆ ಅಭೇದ ಪಕ್ಷದವರಿಗೂ, ಬ್ರಹ್ಮವು ಜೀವಾತ್ಮನಸ್ವರೂಪವೇ ಅಲ್ಲವೆಂಬ ಎರಡನೇ ಭೇದ ಪಕ್ಷದವರಿಗೂ ಕರ್ಮವು ಮೋಕ್ಷಕ್ಕೆ ಸಾಧನವಾಗಲಾರದು ಬ್ರಹ್ಮವು ಜೀವಾತ್ಮರಸ್ವರೂಪ ಎಂಬುವ ಪಕ್ಷದವರಿಗೆ ಮೋಕ್ಷವಂತೂ ಪ್ರಾಪ್ತಿಯಾಗುವುದಿಲ್ಲ ಇವರಿಗೆ ಮೋಹವೇ ಕಾರಣವಾಗಿದೆ ಏಕೆಂದರೆ ಬ್ರಹ್ಮ ಸಾಕ್ಷಾತ್ಕಾರವೇ ಮೋಕ್ಷವಲ್ಲವೆ! ಆ ಬ್ರಹ್ಮವಂತೂ ಇವರ ಕಲ್ಪನೆಯಂತೆ ನಮ್ಮ ಸ್ವರೂಪವೇ ಆಗಿದೆ ಆದುದರಿಂದ ನಮ್ಮ ಸ್ವರೂಪವೇ ಆದ ಬ್ರಹ್ಮವನ್ನು ಅರಿಯದೇ ಇರುವುದಕ್ಕೆ ತಿಳಿಗೇಡಿತನವೇ ಕಾರಣವಾಗಿದೆ

ಇನ್ನು ಎರಡನೆಯವರ ಪಕ್ಷದಂತೆ ಬ್ರಹ್ಮವು ಎಂದೂ ಜೀವಾತ್ಮರ ಸ್ವರೂಪವಾಗದೇ ಇದ್ದುದರಿಂದ ಜ್ಞಾನದಿಂದಾಗಲಿ, ಕರ್ಮದಿಂದಾಗಲಿ ಮೋಕ್ಷವೇ ಎಂದಿಗೂ ಸಿಕ್ಕುವುದೇ ಇಲ್ಲ

ಮೊದಲನೇ ಪಕ್ಷದವರಂತೆ ತಾನು ನಿಜವಾಗಿ ಬ್ರಹ್ಮವೇ ಆದರೂ ಆತ್ಮರೂಪವಾದ ಬ್ರಹ್ಮವು ತಾನಾಗಿಯೇ ಸಿಕ್ಕಂತೆ ಆಯಿತಲ್ಲ ಈ ಪಕ್ಷದ

ವರು ಇಂತಹ ಸುಲಭ ಸಾಧ್ಯವಾದ ಬ್ರಹ್ಮನ ಪ್ರಾಪ್ತಿಯಾಗದಿದ್ದರೆ ಅದಕ್ಕೆ ಅವರ ತಿಳಿಗೇಡಿತನ–ರಾಕ್ಷಸತನವೇ ಕಾರಣವಾಗಿದೆ. ಈ ಅಜ್ಞಾನ (ತಿಳಿಗೇಡಿತನ)ವನ್ನು ಕರ್ಮವು ನಾಶಮಾಡಲಾರದು, ಜ್ಞಾನವೇ ಬೇಕು.

ಇನ್ನು ಎರಡನೇ ಪಕ್ಷದವರಂತೆ ಬ್ರಹ್ಮವು ಜೀವನಿಂದ ಬೇರೆ ಎನ್ನುವುದಾದರೆ–ಆತ್ಮನೇ ಜೀವನಾದುದರಿಂದ ಅದಕ್ಕಿಂತ ಭಿನ್ನವಾದ ಬ್ರಹ್ಮವು ಅನಾತ್ಮವಾಯಿತು ಆತ್ಮಕ್ಕಿಂತಲೂ ಭಿನ್ನವಾದ ಅನಾತ್ಮವಾದ ಬ್ರಹ್ಮ ಸಾಕ್ಷಾತ್ಕಾರಕ್ಕೆ (ಮೋಕ್ಷಕ್ಕೆ) ಕರ್ಮವಾಗಲೀ ಜ್ಞಾನವಾಗಲಿ–ಅಥವಾ ಇವರೆಡನ್ನೂ ಕೂಡಿಸುವುದರಿಂದಾಗಲೀ ಮೋಕ್ಷವಾಗಲಾರದು. ಏಕೆಂದರೆ ಸಾಧಕನಾದ ಜೀವನು ಬ್ರಹ್ಮನಿಂದ ಬೇರೆಯಾಗಿರುವನು. ಇದರಿಂದ ಜೀವನಿಂದ ಸಾಧ್ಯನಾದ ಬ್ರಹ್ಮನೂ ಬೇರೆ ಇದ್ದಂತಾಯಿತಲ್ಲವೆ! ಆದ್ದರಿಂದ ಮೋಕ್ಷವಾಗಲಾರದು.

ಎರಡು ವಸ್ತುಗಳೂ ಬೇರೆ ಬೇರೆಯಾಗಿರಲು ಒಂದು ಯಾವುದೇ ಕಾರಣದಿಂದ ಮತ್ತೊಂದರ ರೂಪವನ್ನು ಪಡೆಯಲಾರದಲ್ಲವೆ! ಮತ್ತೊಂದು ವಿಧದಿಂದ ಹೇಳುವುದಾದರೆ ಮೊದಲಿನ ವಸ್ತು ನಾಶವಾಗಿ ಮತ್ತೊಂದು ರೂಪವಾಗುತ್ತದೆನ್ನುವುದಾದರೂ ಮೊದಲೇ ನಾಶವಾದದ್ದು ಮತ್ತೊಂದು ರೂಪವನ್ನೆಂತು ಪಡೆಯಬಲ್ಲದು! ಇದೂ ತಪ್ಪಾಗಬಲ್ಲದು.

**ಮೂರನೆ ಪಕ್ಷದ ಖಂಡನೆ:–** ಇನ್ನು ಭೇದಾಭೇದಬ್ರಹ್ಮವು ಸಂಸಾರದಶೆಯಲ್ಲಿ ಜೀವನ ಆತ್ಮವೂ ಅಲ್ಲ, ಅನಾತ್ಮವೂ ಅಲ್ಲ. ಆದರೆ ಅದು ಆತ್ಮಾನಾತ್ಮ ಎರಡೂ ಇರುವುದೆಂದು ಹೇಳುವ ಮೂರನೆ ಪಕ್ಷದವರಿಗೂ ಸಹ ಜ್ಞಾನದಿಂದಲೇ ಮೋಕ್ಷವೆನ್ನಬಹುದೇ ವಿನಃ ಕರ್ಮದಿಂದ ಮೋಕ್ಷವಾಗಲಾರದು.

ಈ ಮೂರನೇ ಪಕ್ಷದವರು ಬ್ರಹ್ಮ ಸಾಕ್ಷಾತ್ಕಾರಕ್ಕೆ "ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನೋಪಾಸನೆ ಒಂದರಿಂದಲೇ ಮುಕ್ತಿಯನ್ನು ಪಡೆಯಬೇಕು ಅದಲ್ಲದೆ ಆತ್ಮಸಾಕ್ಷಾತ್ಕಾರಕ್ಕೆ ವಿರುದ್ಧವಾದ ಕರ್ಮದಿಂದ ಮುಕ್ತಿದೊರೆಯಲಾರದು. ಏಕೆಂದರೆ ಇಲ್ಲಿ ಬ್ರಹ್ಮವು ಸಾಧ್ಯ–ಜೀವನು ಸಾಧಕ ಇವರಿಬ್ಬರಲ್ಲಿ

ಭೇದವಿದ್ದಲ್ಲಿ ಮಾತ್ರ ಕರ್ಮಕ್ಕೆ ಅವಕಾಶವಿದೆ. ಇವರಿಬ್ಬರಲ್ಲಿ ಈ ಮೂರನೇ ಪಕ್ಷದವರಂತೆ ಭೇದವಿಲ್ಲದ್ದರಿಂದ ಕರ್ಮಕ್ಕೆ ಯಾವ ಕೆಲಸವೂ ಇಲ್ಲ.

**ಮೊದಲನೆ ಪಕ್ಷದವರ ಖಂಡನೆ:–** ಬ್ರಹ್ಮನು ಜೀವನಸ್ವರೂಪವೇ ಎಂದು ಹೇಳುವ ಮೊದಲನೆ ಪಕ್ಷದವರಿಗೆ ಜ್ಞಾನದಿಂದಾಗಲಿ–ಕರ್ಮದಿಂದಾಗಲಿ ಉಪಯೋಗವೇ ಇಲ್ಲ. ಏಕೆಂದರೆ ಜೀವ ಬ್ರಹ್ಮರಲ್ಲಿ ಭೇದವಿಲ್ಲದಿರುವುದರಿಂದ ಈ ಸರ್ವ ವಸ್ತುಜಾಲವೆಲ್ಲಾ ತನ್ನರೂಪವೇ ಆಗಿರುವುದೆಂಬ ಜ್ಞಾನದಿಂದ ಬ್ರಹ್ಮನೊಡನೆ ಒಂದಾದವನಾದ ಮನುಷ್ಯನು ಪುನಃ ಕರ್ಮಮಾಡಲು ಅಗತ್ಯವಾದರೂ ಏನಿದೆ ?

ಅರ್ಥಾತ್ ಬ್ರಹ್ಮನೊಡನೆ ಒಂದಾಗಲು ಕರ್ಮದ ಅಗತ್ಯತೆ ಇದೆ, ಎನ್ನುವುದಾದರೂ ಒಂದಾಗಿಯೇ ಇದ್ದಾನಲ್ಲ ಪುನಃ ಕರ್ಮಮಾಡುವ ಅಗತ್ಯತೆ ಏನಿದೆ !

**ಮತ್ತೊಂದು ವಿಷಯ:–** ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರಾದಿವರ್ಣದವರು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸನ್ಯಾಸಾಶ್ರಮದವರು ಬ್ರಹ್ಮನು ಜೀವನಸ್ವರೂಪನೇ ಆದುರಿಂದ ಜೀವನು ಬ್ರಹ್ಮಸ್ವರೂಪವೇ ಆಗಿರುವುದರಿಂದ ಈ ವರ್ಣಾಶ್ರಮದವರಿಗೂ ಜೀವನಿಗೂ ಭೇದವೇ ಇಲ್ಲದಂತಾಗುವುದು–ಆಗ ಜೀವನು ಎಲ್ಲಾ ಜಾತಿ, ಎಲ್ಲಾ ವರ್ಣ ಮತ್ತು ಎಲ್ಲಾ ಆಶ್ರಮಗಳುಳ್ಳವನೂ ಆಗುವುದರಿಂದ ಬ್ರಾಹ್ಮಣನು ಇಂತಾ ಕರ್ಮಗಳನ್ನೇ ಮಾಡಬೇಕೆಂಬ ನಿತ್ಯಕರ್ಮಾದಿ ವಿಧಿಗಳೂ ಬ್ರಹ್ಮಚಾರಿಯು ಹೀಗೆ ಇರಬೇಕೆಂಬ ಇತ್ಯಾದಿ ವಿಧಿಗಳೂ ಯಾವೂ ಇರುವುದೇ ಇಲ್ಲ. ಆಗ ವರ್ಣಾಶ್ರಮಗಳೂ–ಅವುಗಳ ವ್ಯವಸ್ಥೆಯೂ–ಅವರವರ ಕರ್ಮಗಳೂ ಯಾವುವೂ ಇರಲು ತಕ್ಕವೇ ಇಲ್ಲ. ಆಗ ಸರ್ವಕರ್ಮ ಸಂಕರವೂ ಆಗಬಹುದು.

**ಪೂರ್ವಪಕ್ಷ:–** ಜೀವನು ಬ್ರಹ್ಮನಾಗಿದ್ದರೂ ಆಯಾ ವರ್ಣಾಶ್ರಮದವರು ಆಯಾ ದೇಹದ ಮೇಲಿನ ಅಭಿಮಾನದಿಂದ ತಾನು ಬ್ರಾಹ್ಮಣನೆಂದೂ ಕ್ಷತ್ರಿಯನೆಂದೂ ಇತ್ಯಾದಿ ತಿಳಿದು ಕರ್ಮಗಳನ್ನೇಕೆ ಮಾಡುತ್ತಾ ಹೋಗಬಾರದು ? ಇದರಿಂದ ವೇದದಲ್ಲಿರುವ ಕರ್ಮವೂ ವಿಹಿತವಾಗಲಿಲ್ಲವೆ ! ಇದರಲ್ಲಿ ತಪ್ಪೇನಿದೆ.

**ಸಮಾಧಾನ :—** ದೇಹದ ಮೇಲಿನ ನಾನೆಂಬ ಅಭಿಮಾನ ಇಟ್ಟು ಕೊಂಡು ಕರ್ಮಮಾಡುವುದೂ ಸೂಕ್ತವಾಗಲಾರದು. ದೇಹದ ಮೇಲೆ ನಾನೆಂಬ ಅಭಿಮಾನ ಇರುವವರೆಲ್ಲಾ ರಾಕ್ಷಸರೇ. ಅದು ಜ್ಞಾನಿಯಾದವ ನಲ್ಲಿ ಅಂದರೆ ಜೀವನೇ ಬ್ರಹ್ಮಸ್ವರೂಪ ಎಂಬುವನಲ್ಲಿ ಇರಲಾರದು ಒಂದು ಪಕ್ಷ ಜ್ಞಾನಿಗೆ ದೇಹವೇನಾನೆಂಬ ಅಭಿಮಾನ ಅಂದರೆ ಅಸುರ ಧರ್ಮ ಇರು ವುದಾದರೆ ಬ್ರಹ್ಮಸಾಕ್ಷಾತ್ಕಾರವೆಲ್ಲಾ ನಿರರ್ಥಕವಾದಂತಾಯಿತು.

**ಸಾರಾಂಶ :—** 1) ಜ್ಞಾನವು ವಸ್ತು ತಂತ್ರವು ; ಕರ್ಮವು ಪುರುಷ ತಂತ್ರವು ; 2) ಕರ್ಮವೆಲ್ಲಾ ಅಜ್ಞಾನದಿಂದಲೇ ಹುಟ್ಟುವುದು ಆದುದ ರಿಂದ ಏಕಕಾಲಕ್ಕಾಗಲೀ ಅಂದರೆ ಜ್ಞಾನ ಕರ್ಮಗಳು ಸಮಾನವಾಗಿಯೇ ಆಗಲಿ ಅಂದರೆ ಮುಖ್ಯವಾಗಿದ್ದುಕೊಂಡಾಗಲೀ ; ಕ್ರಮದಿಂದಾಗಲೀ ಅಂದರೆ ಕರ್ಮವು ಮುಖ್ಯವಾಗಿ ಜ್ಞಾನವು ಗೌಣವಾಗಿ ಯಾಗಲಿ ಅಥವಾ ಜ್ಞಾನವು ಮುಖ್ಯವಾಗಿ ಕರ್ಮವು ಗೌಣವಾಗಿ ಯಾಗಾಲಿ ಜ್ಞಾನ ಕರ್ಮಗಳು ಸೇರಿ ಮೋಕ್ಷವನ್ನು ಕೊಡುತ್ತವೆಂದು ಹೇಳುವುದೆಲ್ಲಾ ನಿರರ್ಥಕವು ಎಂಬುದನ್ನು ಇಲ್ಲಿಯವರೆಗೆ ತೋರಿಸಿದ್ದಾಯಿತು.

**ಪೂರ್ವಪಕ್ಷಿ :—** ಇಷ್ಟೆಲ್ಲಾ ಸಿದ್ಧಾಂತಮಾಡಿ ತೋರಿಸಿದರೂ ಮುಳು ಗುವ ಮನುಷ್ಯನು ಹುಲ್ಲುಕಡ್ಡಿಯನ್ನು ಹಿಡಿದು ಬದುಕಿಕೊಳ್ಳಲು ಅಪೇಕ್ಷಿಸು ವಂತೆ ಕರ್ಮವಾದಿಯು ಹೀಗೆ ಪ್ರಶ್ನೆ ಮಾಡುತ್ತಾನೆ.

ಜೀವನೇ ಬ್ರಹ್ಮನೆಂಬ ಜ್ಞಾನವಾದವನೂ ಸಹ ದೇಹಾದಿಯೇ ನಾನಂಬ ಅಭಿಮಾನವನ್ನು ಮತ್ತೆ ಹಿಡಿದು ಕರ್ಮಗಳನ್ನು ಮಾಡಲು ಉದ್ಯುಕ್ತನಾಗಬದುದಲ್ಲಾ ! ಏಕಾಗಬಾರದು ಅದರಲ್ಲಿ ತಪ್ಪೇನಿದೆ !

**ಸಮಾಧಾನ :—** ಅಂತಹ ದೇಹಾಭಿಮಾನವಿರುವವನು ಮೂಢನು— ಸುಳ್ಳಾದ ಜ್ಞಾನಿ ಆಗಿರುತ್ತಾನೆ. ಅವನನ್ನು ಮಿಥ್ಯಾಚಾರಿ ಎಂದು ಗೀತೆ ಕರೆಯುತ್ತದೆ. ಆದ್ದರಿಂದ ಅವನು ಎಂದೂ ಜೀವನೇ : ಬ್ರಹ್ಮನೆಂದು ತಿಳಿದ ಜ್ಞಾನಿ ಅಲ್ಲವೇ ಅಲ್ಲ. ಅವನು ಕರ್ಮಗಳನ್ನೇ ಮಾಡುವವನು ದಡ್ಡನು ಅಂದರೆ ಜ್ಞಾನಿಯು ಅಜ್ಞಾನಿಯಾಗುತ್ತಾನೆಂಬುದು ಉಪಹಾಸ್ಯ ವಾದುದು.

ಮತ್ತು ಈ ಜೀವನೇ ಬ್ರಹ್ಮಸ್ವರೂಪವೆಂಬುವವರ ಪಕ್ಷದೂರ ಅಭಿಪ್ರಾಯದಂತೆ ಸಾಧಕನಾದ ಜೀವನಿಗೆ ಕರ್ಮವು ಸಿದ್ಧವೇ ಆಗಿದೆ. ಅದುದರಿಂದ ಅದು ಸಾಧ್ಯ (ಮೋಕ್ಷ)ವಾಗಲಾರದು.

**ಪ್ರ : 100. ಸಾಧಕನಾದವನು ಕರ್ಮವನ್ನು ಮಾಡಬಹುದಲ್ಲ.**

**ಉ :** ಇವರ ಅಭಿಪ್ರಾಯದಂತೆ ಸಾಮಾನ್ಯ ಮತ್ತು ವೈಶಿಷ್ಟ್ಯಗಳು ಬ್ರಹ್ಮನ ಧರ್ಮಗಳು ಬ್ರಹ್ಮನೆಂಬ ದೃಷ್ಟಿಯಿಂದ ಎಂದರೆ ಸಾಮಾನ್ಯ ದೃಷ್ಟಿಯಿಂದ ಒಂದಾಗಿಯೂ ಜೀವ, ಜಗತ್ತು ಈಶ್ವರ ಎಂಬ ವಿಶೇಷ ದೃಷ್ಟಿಯಿಂದ ಅನೇಕವಾಗಿಯೂ ಇರುತ್ತದೆ ಇದರಂತೆ ಕರ್ಮವೂ ಸಹ ಎಲ್ಲಾ ವಸ್ತುಗಳಂತೆ ಸಾಮಾನ್ಯವಾಗಿ ಯಾಗಲೀ ಅಥವಾ ವಿಶಿಷ್ಟವಾಗಿಯಾಗಲೀ ಎರಡರಲ್ಲೊಂದು ಇರಲೇಬೇಕು. ಹೀಗೆ ಬ್ರಹ್ಮಕ್ಕೆ ಇರುವ ಸಾಮಾನ್ಯ, ವೈಶಿಷ್ಟ್ಯಗಳು ಕರ್ಮಕ್ಕೂ ಇದ್ದಂತಾಗಿ ಕರ್ಮಸ್ವರೂಪವೇ ಬ್ರಹ್ಮನೆಂದಂತಾಯಿತು. ಇವರ ಪಕ್ಷದಂತೆ ಬ್ರಹ್ಮನೇ ಜೀವಸ್ವರೂಪನಾದುದರಿಂದ ಕರ್ಮವೂ ಜೀವನಸ್ವರೂಪವೇ ಆದಂತಾಯಿತು. ಆಗ ಉಸಿರು ಬಿಡುವುದೂ ತೆಗೆದುಕೊಳ್ಳುದೂ ತನ್ನ ಸ್ವರೂಪವೇ ಆದಂತಾಯಿತು. ಈ ರೀತಿ ಕರ್ಮವು ತನ್ನ ಸ್ವರೂಪವಾದಾಗಲೂ ತಮ್ಮ ತಮ್ಮ ಸ್ವರೂಪ ಪ್ರಾಪ್ತಿಗಂತೂ ಜ್ಞಾನದ ಹೊರತು ಯಾವ ಕರ್ಮವೂ ಸಹಾಯವಾಗಲಾರದು. ಹಾಗೆ ಕರ್ಮವು ಸ್ವರೂಪಪ್ರಾಪ್ತಿಗೆ ಸಹಾಯಮಾಡುವುದಾಗಿದ್ದರೆ. ಅದೇ ತನ್ನ ಸ್ವರೂಪವಾಗಿಯೇ ಇದೆ, ಆದರೂ ಆತ್ಮಜ್ಞಾನವಾಗಿಲ್ಲ. ಆದ್ದರಿಂದ ಕರ್ಮದಿಂದ ಮೋಕ್ಷವಾಗಲಾರದು. ಆದುದರಿಂದ ಕರ್ಮವನ್ನು ಮಾಡಲೇಬೇಕೆಂದ ನಿನ್ನ ಮತ ಖಂಡಿಸಿದ್ದಾಯಿತು.

## ಮೂರನೇ ಭೇದಾಭೇದ ಜ್ಞಾನದಖಂಡನೆ

**ಪೂರ್ವಪಕ್ಷ :–** ಹಿಂದೆ ಹೇಳಿದಂತೆ ಬ್ರಹ್ಮನು ಜೀವಾತ್ಮನ ಸ್ವರೂಪವೂ ಅಹುದು ಮತ್ತು ಜೀವಾತ್ಮನ ಸ್ವರೂಪವು ಅಲ್ಲ ಎಂಬ ಮೂರನೇ ಪಕ್ಷದಂತೆ ಭೇದಾಭೇದ ಸ್ವರೂಪದ ಬ್ರಹ್ಮವಿರುವುದೆಂದೂ, ಆದುದರಿಂದಲೇ

ಜ್ಞಾನಕರ್ಮಗಳೆರಡೂ ಅವಶ್ಯಕವೆಂದೂ, ಹೇಳಿದ್ದಾಗಿದೆ. ಜ್ಞಾನಕ್ಕೆ ಅಭೇದ ರೂಪವು ವಿಷಯ ; ಕರ್ಮಕಾಂಡಕ್ಕೆ ಭೇದರೂಪವು ವಿಷಯವು ಆಗಬಹುದಲ್ಲ. ಇದರಲ್ಲಿ ತಪ್ಪೇನಿದೆ.

**ಸಮಾಧಾನ :–** ಈ ಭೇದಾಭೇದ ಪಕ್ಷವನ್ನು ಕಲ್ಪಿಸುವುದೇ ಶಕ್ಯವಿಲ್ಲ. ಏಕೆಂದರೆ ಈ ಭೇದಾಭೇದವು ಒಂದೇ ಕಾಲಕ್ಕೆ ಒಂದು ರೀತಿಯಿಂದ ಕೂಡುವುದು ಈ ಜಗತ್ತಿನಲ್ಲಿ ಎಲ್ಲೆಲ್ಲಿಯೂ ಇಲ್ಲವೇ ಇಲ್ಲ. ಮತ್ತು ಇದಕ್ಕೆ ಯಾವ ಪ್ರಮಾಣವೂ ಇಲ್ಲ.

**ಪೂರ್ವಪಕ್ಷ :–** ಈ ಭೇದಾಭೇದವು ಒಂದೇ ರೀತಿಯಿಂದ ಒಂದೇ ಕಾಲಕ್ಕೆ ಕೂಡುವುದು ಶಕ್ಯವಿಲ್ಲದೆ ಹೋದರೂ ಈ ಭೇದಾಭೇದ ಬ್ರಹ್ಮನನ್ನು ಕಲ್ಪಿಸುವುದರಲ್ಲಿ ತಪ್ಪೇನಿದೆ. ಈ ರೀತಿ ಕಲ್ಪಿಸುವುದರಿಂದ ಆ ಕಲ್ಪನೆಯು ಅಪ್ರಸಿದ್ಧವಾದರೂ ಅಥವಾ ವಿಚಿತ್ರ ಕಲ್ಪನೆಯಾದರೂ ಇದರಿಂದ ವೇದದಲ್ಲಿರುವ ಕರ್ಮಕಾಂಡ ಮತ್ತು ಜ್ಞಾನಕಾಂಡಗಳೆರಡ ಸಾರ್ಥಕವಾಗುತ್ತವೆಯಲ್ಲವೆ ?

**ಸಮಾಧಾನ :–** ಇದರಿಂದಲೂ ದೋಷವಿದೆ. ಸಾಮಾನ್ಯರೂಪದಿಂದ ಬ್ರಹ್ಮವು ಜೀವಿಗಳಿಂದ ಭಿನ್ನವಾಗಿಲ್ಲವೆಂದೂ, ವಿಶೇಷರೂಪದಿಂದ ಬ್ರಹ್ಮವು ಜೀವಿಗಳಿಂದ ಭಿನ್ನವಿರುವುದೆಂದೂ ಕಲ್ಪಿಸಿದರೂ ನಿನ್ನ ಬ್ರಹ್ಮವು ನಿಜವಾಗಿಯೂ ದುಃಖಿಯಾಗಬೇಕಾಗುವುದು. ಇಷ್ಟೆ ಅನರ್ಥವಲ್ಲ ಆ ಬ್ರಹ್ಮದಲ್ಲಿ ದುಃಖಿಗಳಾದ ಎಲ್ಲಾ ಜೀವಿಗಳೂ ಒಂದಾಗುವುದರಿಂದ ಎಲ್ಲಾ ಜೀವಿಗಳ ದುಃಖವೂ ಒಟ್ಟಾಗಿ ಅದರಲ್ಲಿ ಸೇರುವುದರಿಂದ ಎಲ್ಲಾ ಸಂಸಾರಿಕ ಜೀವಿಗಳಿಗಿಂತ ಬ್ರಹ್ಮವೇ ಹೆಚ್ಚು ದುಃಖಮಯವಾಗುತ್ತದೆ. ಇಂತಹ ದುಃಖಮಯವಾದ ಬ್ರಹ್ಮಪ್ರಾಪ್ತಿಯನ್ನಾದರೂ ಜನರು ಬಯಸಿಯಾರೆ! ಮತ್ತು ಇಂತಹ ಆತ್ಮವರ್ಣನೆಯನ್ನು ಮಾಡುವ ನಿನ್ನ ಬುದ್ಧಿಯಾದರೂ ಎಂತಹದ್ದು !

# ಭೇದಾಭೇದ ಬ್ರಹ್ಮಜ್ಞಾನದ ಖಂಡನೆಯ ಉಪಸಂಹಾರ

ಸೂರ್ಯನೊಡನೆ ಹೇಗೆ ಕತ್ತಲೆಯ ಸ್ನೇಹ ಆಗಲಾರದೋ ; ಬೆಂಕಿಯೊಡನೆ ಹೇಗೆ ಚಳಿಯ ಸ್ನೇಹವಾಗಲಾರದೊ ; ಉಷ್ಣತೆಯೊಡನೆ ಹೇಗೆ ತಣ್ಣೀರಿನ ಸ್ನೇಹವಾಗಲಾರದೋ ಹಾಗೆ ಕರ್ಮವು ಜ್ಞಾನದ ಭಾಗವಾಗಲಾರದು. ಮತ್ತು ಅವುಗಳ ಗೆಳೆತನವೂ ಕೂಡಲಾರದು.

# ಮೀಮಾಂಸಕರ (ಭಾಟ್ಟ-ಪ್ರಭಾಕರ) ಮತ ಖಂಡನೆ

ಈ ಹಿಂದೆಯೇ ಈ ಮೀಮಾಂಸಕರ ಮತವನ್ನು ಖಂಡಿಸಿದ್ದಾಗಿದೆ ಆದರೂ ಪ್ರತಿ ಪತ್ತಿಕ ಕರ್ಮದಂತೆ ಪೂರ್ವಪಕ್ಷದವರು ಮುಂದೆ ಮಾಡಿರುವ ನ್ಯಾಯಗಳನ್ನು ಪುನಃ ಖಂಡಿಸುತ್ತಾರೆ.

**ಪ್ರ : 101. ಪ್ರತಿ ಪತ್ತಿ ಕರ್ಮ ಎಂದರೇನು ?**

ಉ : ಯಾವುದಾದರೊಂದು ಕರ್ಮಕ್ಕೆ ಉಪಯುಕ್ತವಾದ ಕೆಲವು ದ್ರವ್ಯಗಳನ್ನು ಉಪಯೋಗಿಸಿ ಆ ಕರ್ಮವು ಮುಗಿದಮೇಲೆ ಉಪಯೋಗಿಸಿದ ಆ ದ್ರವ್ಯಗಳನ್ನು ಅಲ್ಲಿ ಇಲ್ಲಿ ಬಿಸಾಡದೆ ಸರಿಯಾದ ಸ್ಥಳದಲ್ಲಿ ಬಿಸಾಡುವುದು ಸಂಪ್ರದಾಯವಲ್ಲವೆ.

**ಉದಾ :–** ಶ್ರಾದ್ಧಾ ಎಂಬುವುದೊಂದು ಕರ್ಮ. ಅ ಶ್ರಾದ್ಧಾ ಕರ್ಮವು ಮುಗಿದು ಹೋದಮೇಲೆ ಅದಕ್ಕಾಗಿ ಉಪಯೋಗಿಸಿದ್ದ ಎಳ್ಳು–ದರ್ಭೆ ಪಿಂಡ ಮೊದಲಾದ ವಸ್ತುಗಳಿಂದ ಆಗಬೇಕಾದ ಕೆಲಸವೇನೂ ಇರುವುದಿಲ್ಲ ಅದರೂ ಶ್ರಾದ್ಧಾಮುಗಿದ ಮೇಲೆ ಆ ದ್ರವ್ಯಗಳನ್ನು ಅಲ್ಲಿಯೇ ಚೆಲ್ಲಿ ಬಿಡಲಾರದು. ಮತ್ತೊಬ್ಬರು ಅವುಗಳನ್ನು ತುಳಿಯದಂತೆ, ತುಳಿದು ಅಪವಿತ್ರ ಮಾಡದಂತೆ ಅವುಗಳನ್ನು ನದಿಯಲ್ಲಿ ಹಾಕಬೇಕು. ಈ ರೀತಿ ಆ ದ್ರವ್ಯಗಳಿಂದ ಮುಖ್ಯ ಕೆಲಸವೆಲ್ಲಾ ಮುಗಿದು ಹೋಗಿದ್ದರೂ ಅವುಗಳನ್ನು ವ್ಯವಸ್ಥಾ ರೀತಿ ಯಾವುದಾದರೊಂದು ಸ್ಥಾನಕ್ಕೆ ಹಾಕಬೇಕಲ್ಲವೇ ಈ ವ್ಯವಸ್ಥೆಗೆ ಪ್ರತಿಪತ್ತಿ ಕರ್ಮವೆಂದು ಹೇಳುತ್ತಾರೆ.

ಹಾಗೆಯೇ ಇಲ್ಲಿ ಮುಖ್ಯ ಖಂಡನೆಯು ಈ ಮೊದಲೇ ಆಗಿ ಹೋಗಿದೆ. ಆದರೂ ಅವರು ತಂದಿರುವ ಪೂರ್ವ ಪಕ್ಷಗಳನ್ನೂ ಸಹಿತ ಯೋಗ್ಯ ರೀತಿಯಿಂದ ಖಂಡಿಸಬೇಕಲ್ಲವೆ. ಹಿಂದೆ ಮಾಡಿರುವ ಖಂಡನೆಯು ಒಟ್ಟಾಗಿದೆ. ಈಗ ಅವುಗಳನ್ನು ಯೋಗ್ಯರೀತಿಯಿಂದ ಖಂಡಿಸಲಾಗುವುದು.

ಪ್ರ : 102. **ಭಾಟ್ಟ ಮೀಮಾಂಸಕರ ಮತ ವೇನು ?**

ಉ : 1) ಕರ್ಮದಿಂದಲೇ ಮೋಕ್ಷವು ಸಿಕ್ಕುವುದೆಂದ ಮೇಲೆ ಜ್ಞಾನದ ಗೊಂದಲವೇಕೆ ? ಎಂಬುದೇ ಅವರ ಮತ.

ಪ್ರ : 103. **ಹಾಗಾದರೆ ಕರ್ಮದಿಂದ ಹೇಗೆ ಮೋಕ್ಷವಾಗುತ್ತದೆ ?**

2) ಕಾಮ್ಯಕರ್ಮವನ್ನು ಮಾಡಬಾರದು ಈ ಕಾಮ್ಯಕರ್ಮ ಮಾಡುವುದರಿಂದ ಪುಣ್ಯದೊರೆಯುತ್ತದೆ. ಆ ಪುಣ್ಯದಿಂದ ಸ್ವರ್ಗಸಿಕ್ಕುತ್ತದೆ. ಇದನ್ನು ಬಿಡುವುದರಿಂದಸ್ವರ್ಗಲೋಕಕ್ಕೆ ಹೋಗುವ ಭಯವಿಲ್ಲ.

3) ಇನ್ನು ನಿಷಿದ್ಧಕರ್ಮ ಮಾಡಬಾರದು. ಈ ನಿಷಿದ್ಧಕರ್ಮದಿಂದ ಪಾಪವು ಬರುತ್ತದೆ. ಈ ಪಾಪದ ಫಲವಾದ ನರಕವು ದೊರೆಯುತ್ತದೆ. ಈ ನಿಷಿದ್ಧಕರ್ಮ ಬಿಡುವುದರಿಂದ ನರಕದ ಭಯವಿಲ್ಲ.

4) ಇನ್ನು ಪ್ರಾರಬ್ಧವು ಜ್ಞಾನಿಗಳಿಗಿರುವಂತೆ ಕರ್ಮಿಗಳಿಗೂ ಇರುತ್ತದೆ. ಅವರು ಕೊಟ್ಟ ಉತ್ತರವನ್ನೇ ಇವರೂ ಕೊಡುತ್ತಾರೆ. ಈ ಪ್ರಾರಬ್ಧಕರ್ಮವನ್ನು ದೇಹ ಇರುವವರೆಗೆ ಅನುಭವಿಸಿಯೇ ತೀರಬೇಕು.

5) ನಿತ್ಯ ಕರ್ಮವನ್ನು ಮಾಡುತ್ತಾ ಇರಬೇಕು. ಇದನ್ನು ಬಿಟ್ಟರೆ ಪಾಪ ಬರುತ್ತದೆ. ಮಾಡಿದರೆ ಪುಣ್ಯ ಬರುವುದಿಲ್ಲ. ಕಾಮ್ಯಕರ್ಮವನ್ನು ಬಿಡುವುದರಿಂದ ಸ್ವರ್ಗದ ಗೊಂದಲವಿಲ್ಲ. ನಿಷಿದ್ಧಕರ್ಮ ಬಿಡುವುದರಿಂದ ಅದರ ಫಲವಾದ ನರಕದ ಭಯವಿಲ್ಲ ನಿತ್ಯಕರ್ಮ ಮಾಡುತ್ತಿರುವುದರಿಂದ ಪಾಪಪುಣ್ಯಗಳೂ, ಅವುಗಳ ಫಲವಾದ ಸ್ವರ್ಗ ನರಕಗಳ ಭಯವಿಲ್ಲ. ಇನ್ನು ಪ್ರಾರಬ್ಧ ಇರುವವರೆಗೆ ದೇಹ ಇದ್ದು ಪ್ರಾರಬ್ಧ ಮುಗಿದನಂತರ ದೇಹವೂ ಬಿದ್ದು ಹೋಗುತ್ತದೆ.

ಈ ರೀತಿಯಿಂದ ಕರ್ಮದಿಂದಲೇ ಮೋಕ್ಷವೇ ವಿನಃ ಬೇರೆ ಮಾರ್ಗವಿಲ್ಲ ಇದೇ ಭಾಟ್ಟ ಮೀಮಾಂಸಕರ ಮತ

## ಭಾಟ್ಟಮತದ ಖಂಡನೆ

ಕಾಮ್ಯ ಮತ್ತು ನಿಷಿದ್ಧಕರ್ಮಗಳನ್ನು ಬಿಡಲು ಆಗುವುದೇ ಇಲ್ಲ ಪ್ರಾರಬ್ಧಕರ್ಮವನ್ನು ಭೋಗಿಸಿಯೇ ಮುಗಿಸಬೇಕು ಫಲೋನ್ಮುಖವಾಗದ ಸಂಚಿತ ಕರ್ಮಗಳನ್ನು ಪ್ರಾಯಶ್ಚಿತ್ತದಿಂದ ನಿವಾರಣೆ ಮಾಡಿಕೊಳ್ಳಬಹುದು ಇದಲ್ಲದೆ ಆತ್ಮನು ನಿಷ್ಕ್ರಿಯನೆಂಬ ಜ್ಞಾನದಿಂದಲೂ ಈ ಎಲ್ಲಾ ಕರ್ಮಗಳು ನಿವಾರಣೆಯಾಗುತ್ತವೆ ಅದನ್ನು ನೀನು ಒಪ್ಪಲಾರೆ ಸಂಚಿಂತ ಕರ್ಮವನ್ನು ಬಿಟ್ಟುಬಿಡುವುದು ಯಾವನಿಗೂ ಸಾಧ್ಯವಿಲ್ಲ ಅವುಗಳ ಫಲ ಆರಂಭವಾದ ಕೂಡಲೇ ಬಿಡಬೇಕೆಂದರೂ ಆಗಲೂ ಬಿಡಲಾಗುವುದಿಲ್ಲ ಏಕೆಂದರೆ ಇವುಗಳನ್ನು ಉಪಭೋಗಿಸಿಯೇ ಮುಗಿಸಬೇಕು ಇಲ್ಲವೇ ಪ್ರಾಯಶ್ಚಿತ್ತದಿಂದ ನಿವಾರಣ ಮಾಡಿಕೊಳ್ಳಬಹುದು

ಒಂದು ವೇಳೆ ನಮ್ಮ ಮನಸ್ಸಿನೊಳಗೆ ಏನಾದರೊಂದು ಕರ್ಮವನ್ನು ಮಾಡಬೇಕೆಂದು ನಿಶ್ಚಯಿಸಿ ಅದನ್ನು ಮಾಡುವುದಕ್ಕೂ ಬಿಡುವುದಕ್ಕೂ ನಿನಗೆ ಸ್ವಾತಂತ್ರ್ಯವಿದೆ. ಆದರೆ ಆ ಕೆಲಸ ಮುಗಿದುಹೋಯಿತೆಂದರೆ ಆತರದ ಸ್ವಾತಂತ್ರ್ಯ ಇರುವುದಿಲ್ಲ ಆದ್ದರಿಂದ ನೀನು ಸಿದ್ಧಮಾಡಲಿರುವ ಕರ್ಮತ್ಯಾಗವನ್ನು ರೂಢಿಯಲ್ಲಿ ತರುವುದು ಸಾಧ್ಯವಿಲ್ಲ ಅದರಂತೆ ಮುಂದೆ ಮಾಡಬಹುದಾದ ಕರ್ಮಗಳನ್ನು ತ್ಯಾಗಮಾಡಲೂ ಆಗುವುದಿಲ್ಲ ಏಕೆಂದರೆ ಜೀವವಿರುವವರೆಗೆ ಕಾಮ್ಯಕರ್ಮಗಳನ್ನು—ನಿಷಿದ್ಧಕರ್ಮವನ್ನು "ನಾನು ಮಾಡುವುದೇ ಇಲ್ಲ"ವೆಂದು ಒಳ್ಳೇ ಬುದ್ಧಿಶಾಲಿಗಳೂ ಪ್ರತಿಜ್ಞಾಪೂರ್ವಕವಾಗಿ ಹೇಳಲಾರರು

ಮತ್ತು ಇಂತಹ ಕರ್ಮತ್ಯಾಗದ ಬಗ್ಗೆ ವೇದದ ಪ್ರಮಾಣವಾದರೂ ಎಲ್ಲಿಯೂ ಇಲ್ಲ ಮೋಕ್ಷಾಪೇಕ್ಷೆಯುಳ್ಳವನು ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾತ್ರ ಮಾಡಬೇಕೆಂದೂ, ಕಾಮ್ಯಕರ್ಮ ಮತ್ತು ನಿಷಿದ್ಧಕರ್ಮಗಳನ್ನು ಬಿಡಬೇಕೆಂದೂ, ಪ್ರಾರಬ್ಧ ಕರ್ಮಗಳನ್ನು ಭೋಗಿಸಿ ನಾಶಪಡಿಸ

ಬೇಕೆಂದೂ ಪ್ರಮಾಣವಾದ ವೇದವಾದರೂ ಎಲ್ಲಿಯೂ ಹೇಳಿಲ್ಲ. ಆದುದರಿಂದ ಈ ರೀತಿಯಿಂದಲೂ ಕರ್ಮತ್ಯಾಗವು ಸರಿಯಾಗಲಾರದು.

ಸಂಸಾರವು ಅನಾದಿಯಾದುದು. ಕರ್ಮಗಳು ಅನಂತವಾಗಿರುವುವು. ಆದುದರಿಂದ ಈ ಸಂಚಿತ ಕರ್ಮಗಳಿಗೆ ಕೊನೆ ಎಲ್ಲಿಂದಬರಬೇಕು. ಆದುದರಿಂದಲೂ ಕರ್ಮತ್ಯಾಗವು ಶಕ್ಯವಿಲ್ಲ.

ಕಾಮ್ಯಕರ್ಮಗಳನ್ನು ಕಾಮ್ಯಕರ್ಮಗಳಿಂದಲೂ, ನಿಷಿದ್ಧಕರ್ಮಗಳನ್ನು ನಿಷಿದ್ಧಕರ್ಮಗಳಿಂದಲೂ ನಾಶಮಾಡಲಾಗುವುದಿಲ್ಲ. ಏಕೆಂದರೆ ಸಂಚಿತದಲ್ಲಿರುವ ಕಾಮ್ಯಕರ್ಮಗಳಿಗೆ ಈಗ ಮಾಡುವ ಕಾಮ್ಯಕರ್ಮಗಳು ವಿರೋಧವಾಗಲಾರವು. ಆದುದರಿಂದ ಕಾಮ್ಯಕರ್ಮಗಳನ್ನು ಕಾಮ್ಯಕರ್ಮಗಳಿಂದ ನಾಶಪಡಿಸಲಾಗುವುದಿಲ್ಲ. ಅದರಂತೆಯೇ ಸಂಚಿತವಾದ ನಿಷಿದ್ಧ ಪಾಪಕರ್ಮಗಳೂ ಈಗ ಮಾಡಬೇಕೆಂದಿರುವ ನಿಷಿದ್ಧಕರ್ಮಗಳಿಗೆ ಸಮಾನವಾಗಿರುವುದರಿಂದ ಅಂದರೆ ಸಜಾತೀಯವಾಗಿರುವುದರಿಂದ ಅವು ಒಂದನ್ನೊಂದು ನಾಶಪಡಿಸಲಾರವು.

ಸಾರಾಂಶವೇನೆಂದರೆ ಸಂಚಿತ ಕಾಮ್ಯಕರ್ಮಗಳು, ಸಂಚಿತ ನಿಷಿದ್ಧ ಕರ್ಮಗಳು ಅನಂತವಾಗಿರುವುದರಿಂದ ಅವನ್ನು ಸಂಪೂರ್ಣ ತೊರೆಯಲು ಶಕ್ಯವಾಗುವುದೇ ಇಲ್ಲ.

**ಪೂರ್ವಪಕ್ಷ :-** ಈ ಜನ್ಮದಲ್ಲಿ ಮಾಡಿರುವ ನಿಷಿದ್ಧಕರ್ಮ ರೂಪ ಪಾಪಗಳು ಪ್ರಾಯಶ್ಚಿತ್ತ ಕರ್ಮದಿಂದ ನಿವಾರಣೆಯಾದಂತೆ, ಹಿಂದೆ ಅನಂತ ಜನ್ಮಗಳಲ್ಲಿ ಮಾಡಿದ ಕಾಮ್ಯ ಮತ್ತು ನಿಷಿದ್ಧಕರ್ಮವು ನಿತ್ಯಕರ್ಮ ಮಾಡುವುದರಿಂದ ನಿವಾರಣೆಯಾಗಬಹುದಲ್ಲ.

**ಸಮಾಧಾನ :–** ನಿತ್ಯಕರ್ಮಕ್ಕೆ ಭಾವರೂಪವಾದ ಫಲವೇ ಇಲ್ಲವೆಂದ ಮೇಲೆ ಅನಂತ ಜನ್ಮಗಳಲ್ಲಿ ಮಾಡಿದ ನಿಷಿದ್ಧಕರ್ಮಗಳು ಮತ್ತು ಕಾಮ್ಯ ಕರ್ಮಗಳು ಹೇಗೆ ನಾಶವಾಗಬಲ್ಲವು ! ಇದಕ್ಕೆ ಯಾವ ವೇದಾಂತ ವಾಕ್ಯದ ಪ್ರಮಾಣವೂ ಇಲ್ಲ.

**ಪೂರ್ವಪಕ್ಷ :–** ಹಿಂದಿನ ಜನ್ಮದಲ್ಲಿ ಮಾಡಿದ ಕಾಮ್ಯಕರ್ಮವು ಈ ಜನ್ಮದಲ್ಲಿ ಮಾಡುವ ಕಾಮ್ಯಕರ್ಮದಿಂದ ನಾಶವಾಗಬಹುದಲ್ಲ !

**ಸಮಾಧಾನ :-** ಅವು ಪರಸ್ಪರ ವಿರುದ್ಧವಾಗದೆ ಇರುವುದರಿಂದ ಒಂದು ಪಾಪವನ್ನು ಮತ್ತೊಂದು ಪಾಪವು ಹೇಗೆ ಕಳೆಯಲಾರದೋ ಹಾಗೆಯೇ ಒಂದು ಕಾಮ್ಯ ಕರ್ಮವು ಮತ್ತೊಂದು ಕಾಮ್ಯಕರ್ಮದಿಂದ ನಿವಾರಣೆಯಾಗಲಾರದು.

## ಪ್ರಾಭಾಕರ ಮತದ ಖಂಡನೆ

**ಪ್ರ : 104 ಪ್ರಾಭಾಕರ ಮತದ ತತ್ತ್ವಗಳೇನು ?**

ಉ : 1) ನಿತ್ಯ ಸಿದ್ಧವಾದ ಆತ್ಮವನ್ನು ಇದ್ದಕ್ಕಿದ್ದಂತೆ ವರ್ಣಿಸುವ ಜ್ಞಾನವೇ ವೇದದಲ್ಲಿ ಇರುವುದಿಲ್ಲ.

2) ಶ್ರುತಿ ಸ್ಮೃತಿಗಳೆಲ್ಲಾ ಒಂದೇ ಅಭಿಪ್ರಾಯದಿಂದ ಕರ್ಮವನ್ನೇ ಮಾಡಬೇಕೆಂದು ಹೇಳುತ್ತವೆ. ಆದುದರಿಂದ ಮೋಕ್ಷಕ್ಕೆ ಕರ್ಮವೇ ಸಾಕಷ್ಟು ಸಾಧನ.

3) ಶಾಸ್ತ್ರ ವಿಧಿಯಿಲ್ಲದೆಯೇ ಪರಲೋಕವು ಸಿಕ್ಕಬೇಕೆಂದು ಯಾವ ಕರ್ಮ ಮಾಡಲ್ಪಡುವುದೋ ಅದು ಅಗ್ನಿಯೊಳಗೆ ಹಾಕಿದ ಆಹುತಿಯಂತೆ ಸಾಧಕನಿಗೆ ಯಾವ ಉಪಕಾರವನ್ನು ಮಾಡಲಾರದು. ಆದ್ದರಿಂದ ಶಾಸ್ತ್ರ ವಿಧಿ ಬೇಕೇಬೇಕು.

4) ವೇದವೆಲ್ಲಾ ಕರ್ಮಪರವಾಗಿರುವುದರಿಂದ ವೇದದಲ್ಲಿ ಕರ್ಮವೇ ಇದಿಯೇ ವಿನಃ ಮತ್ತಾವುದೂ ಇಲ್ಲ ಎಂದು ವೇದ ಬಲ್ಲವನಾದ ಸಾಕ್ಷಾತ್ ಜೈಮಿನಿಯೇ ಹೇಳಿರುವನಲ್ಲ !

5) ಮತ್ತು ವೇದದ ಹೊರತು ನಮಗೆ ಬೇರೆ ಪ್ರಮಾಣವೇ ಇಲ್ಲವಲ್ಲ.

6) ಮತ್ತು ಈಶಾವಾಸ್ಯೋಪನಿಷತ್ತಿನಲ್ಲಿ ಮುಮುಕ್ಷುವು ಸಂಪೂರ್ಣವಾಗಿ ಕರ್ಮಾನುಷ್ಠಾನದಲ್ಲಿಯೇ ಕಳೆದು ಹೋಗಬೇಕೆಂಬುದನ್ನು ಹೇಳಿದೆಯಲ್ಲ!!

7) ಮತ್ತು ವೇದಾಂತ ಮಹಾವಾಕ್ಯಗಳಲ್ಲಿ ಕ್ರಿಯಾಪದವೇ ಇಲ್ಲವಲ್ಲ !

8) ಕರ್ಮವು ಮೋಕ್ಷಕ್ಕೆ ಮುಖ್ಯ ಸಾಧನವಾಗಿ ಜ್ಞಾನವು ಅದರ ದೊಂದು ಭಾಗವಾಗಬಹುದು. ಜ್ಞಾನವು ಮೋಕ್ಷಕ್ಕೆ ಮುಖ್ಯಸಾಧನವಾಗಿ ಕರ್ಮವು ಅದರದೊಂದು ಭಾಗವಾಗಬಹುದು – ಇಲ್ಲವೇ ಅವುಗಳನ್ನು ಕೂಡಿಯೇ ಆಚರಿಸುವುದರಿಂದ ಮುಕ್ತಿಯು ದೊರಕಬಹುದು.

**ಪ್ರ : 105. ಪ್ರಾಭಾಕರರು ಮಂಡಿಸುವ ಎಂಟು ವಿಷಯಗಳಲ್ಲಿ ಬರುವ ದೋಷವೇನು ?**

ಉ : 1) ಈ ಲೋಕದಲ್ಲಿ ಕಾಮನೆಗಳನ್ನು, ಇಚ್ಛೆಗಳನ್ನು ಪೂರ್ಣ ಮಾಡಿಕೊಳ್ಳಬೇಕೆಂದು ಬಯಸುವವರೇ ಅನಂತವಾಗಿರುವರು. ಆದುದರಿಂದ ಅಂತವರಿಗಾಗಿ ವೇದದಲ್ಲಿ ಒಳ್ಳೇ ಪ್ರಯತ್ನ ಪೂರ್ವಕವಾಗಿ ನಮಗೆ ಬೇಕಾದ ಎಲ್ಲಾ ವಸ್ತುಗಳನ್ನು ದೊರಕಿಸಿಕೊಡಬಲ್ಲ ಕರ್ಮಕಾಂಡವನ್ನೇ ಹೆಚ್ಚಾಗಿ ವಿವರಿಸುತ್ತವೆ. ಆದುದರಿಂದ ಶ್ರುತಿ ಸ್ಮೃತಿಗಳು ಒಂದೇ ಅಭಿಪ್ರಾಯದಿಂದ ಕರ್ಮವನ್ನೇ ಮಾಡಬೇಕೆಂದು ಹೇಳುತ್ತವೆ.

2) ವಾಕ್ಯಗಳು ಬಹಳವಾದರೆ ಅವೇ ಪ್ರಮಾಣವಾಗಬೇಕೆಂಬ ನಿಯಮವೇನೂ ಇಲ್ಲ. ಏಕೆಂದರೆ ಪ್ರಮಾಣಗಳೆಲ್ಲಾ ಒಂದೆಡೆಗೇ ಕೂಡಿಕೊಂಡು ಒಂದು ವಸ್ತುವಿನ ಬಗ್ಗೆ ಪ್ರಾಮಾಣ್ಯವನ್ನು ಹೊಂದುವುದಿಲ್ಲ. ಆದರೆ ಒಂದೊಂದು ಪ್ರಮಾಣವು ಒಂದೊಂದು ವಿಶಿಷ್ಟವಸ್ತುವಿನ ಬಗ್ಗೆ ಪ್ರಮಾಣವಾಗುತ್ತವೆ.

3) ಕರ್ಮದಿಂದ ಮೋಕ್ಷವಾಗುವುದಿಲ್ಲವೆಂದು ಕರ್ಮಕೃತವಾದ ಲೋಕಗಳನ್ನು ಪರಿಕ್ಷಿಸಿ ಅಗತ್ಯವಾದ ಮೋಕ್ಷವು, ಕೃತವಾದ ಕರ್ಮದಿಂದ ಆಗುವುದಿಲ್ಲ ಎಂದು ತಿಳಿದು, ಆ ಅಕೃತವಾದ ತನ್ನ ಸ್ವರೂಪವನ್ನು ತಿಳಿದುಕೊಳ್ಳುವುದಕ್ಕಾಗಿ ಸಮಿತ್ತುಗಳನ್ನು ಹಿಡಿದುಕೊಂಡು ಶ್ರೋತ್ರೀಯನಾದ ಬ್ರಹ್ಮನಿಷ್ಠನಾದ ಗುರುವನ್ನೇ ಹೊಂದಬೇಕೆಂದು ಮುಂಡಕೋಪನಿಷತ್ತಿನ ಮೊದಲನೆ ಮುಂಡಕದ ಎರಡನೇ ಖಂಡದ 12 ನೇ ಮಂತ್ರ ಹೇಳುತ್ತಿರುವಾಗ ನಿನಗೆ ಅದು ತಿಳಿಯಲಿಲ್ಲವೆ ! ಹೀಗೆ ಜ್ಞಾನವೇ ಶ್ರೇಷ್ಠವೆಂದು ಉಸುರುವ ಆತ್ಮಜ್ಞಾನವನ್ನು ವಿಧಿಸುವ ಉತ್ತಮವಾದ ವೇದ ವಚನಗಳು ಬೇಕಾದಷ್ಟಿದ್ದರೂ ನಿನಗೆ ತಿಳಿಯದಿರುವುದು ಆಶ್ಚರ್ಯವಲ್ಲವೆ !

**ಆಕ್ಷೇಪ** - ಬೃಹದಾರಣ್ಯಕ ಉಪನಿಷತ್ತಿನ ೧-೪-೭ ನೇ ಮಂತ್ರ ದಲ್ಲಿ "ಆತ್ಮೇತ್ಯೇವೋಪಾಸೀತ್" ಆತ್ಮನೆಂದೇ ಉಪಾಸನೆ ಮಾಡಬೇಕು "ಆತ್ಮಾವಾಅರೆದ್ರಷ್ಟವ್ಯಃ"ಆತ್ಮನನ್ನೇ ದರ್ಶನಮಾಡಬೇಕು ಎಂಬ ಅಪೂರ್ವ ವಿಧಿಯು ಶ್ರುತಿಯಲ್ಲಿರುವುದರಿಂದ ಪುರುಷನು ಆತ್ಮಸಾಕ್ಷಾತ್ಕಾರವೆಂಬ ಕರ್ಮವನ್ನು ನೆರವೇರಿಸತಕ್ಕದೆಂದು ನಿಶ್ಚಿತವಾಗಲಿಲ್ಲವೆ !

**ಸಮಾಧಾನ :-** ಇಲ್ಲ ಸರ್ವಾನರ್ಥಗಳಿಗೆ ಬೀಜವಾದ ಅಜ್ಞಾನ ವನ್ನು ಬೇರುಸಹಿತ ಕಿತ್ತುಹಾಕುವ ನಿಜವಾದ ಜ್ಞಾನವು ಯಾವ ಪುರು ಷನಿಗೂ ಅಧೀನವಾಗದೇ ಇರುವುದರಿಂದ ಅದು ಯಾವ ವಿಧಿಯೂ ಅಲ್ಲ ಒಂದು ಪಕ್ಷ ವಿಧಿ ಎಂದು ತಿಳಿದರೂ ಅದು ಅಪೂರ್ವ ವಿಧಿಯಂತೂ ಅಲ್ಲ

**ಪ್ರ : 106 ವಿಧಿ ಎಂದರೆ ಏನು ? ವಿಧಿಗಳಲ್ಲಿ ಎಷ್ಟು ವಿಧ ?**

ಉ **" ಅಜ್ಞಾತಾರ್ಥಜ್ಞಾಪಕೋ ವೇದಭಾಗೋವಿಧಿಃ "** ಎರಡನೆಯ ಯಾವುದೇ ಪ್ರಮಾಣಗಳಿಂದ ನಮಗೆ ತಿಳಿಯದಿದ್ದ ವಿಷಯ ಗಳನ್ನು ತಿಳಿಸಿಕೊಡುವುದೇ ವಿಧಿ ಎಂದು ಅರ್ಥ

ಇದರಲ್ಲಿ ಅಪೂರ್ವವಿಧಿ, ನಿಯಮವಿಧಿ, ಮತ್ತು ಪರಿಸಂಖ್ಯಾವಿಧಿ ಎಂದು ವಿಧಿಯಲ್ಲಿ ಮೂರು ವಿಧ

**೧) ಅಪೂರ್ವ ವಿಧಿ :- "ಅತ್ಯಂತಂ ಅಪ್ರಾಪ್ತೌ ಅಪೂರ್ವ ವಿಧಿಃ"** ಸ್ವೇಚ್ಛೆಯಿಂದಾಗಲಿ ಅಥವಾ ಸಾಧನಾಂತರಗಳಿಂದಾಗಲಿ ಯಾವುದು ತೀರಾ ಅಪ್ರಾಪ್ತವಾದ ಮಾತಾಗಿರುವುದೋ ಅಂತಹದನ್ನು ತಿಳಿಸುವ ವಾಕ್ಯವು ಅಪೂರ್ವವಿಧಿಯು **ಉದಾ :-** ಸ್ವರ್ಗಾಪೇಕ್ಷಿಯು ಯಜ್ಞವನ್ನು ಮಾಡಬೇಕು ಇದು ನಮಗೆ ಪ್ರತ್ಯಕ್ಷ ಅನುಮಾನ ಮೊದಲಾದ ಬೇರೆ ಪ್ರಮಾಣಗಳಿಂದ ತಿಳಿಯುವುದು ಶಕ್ಯವಿಲ್ಲ.

**೨) ನಿಯಮವಿಧಿ :-** ನಮಗೆ ಇಷ್ಟವಾದ ಒಂದೇ ಕೆಲಸವನ್ನು ಬೇರೆ ಬೇರೆ ಸಾಧನಗಳಿಂದ ಮಾಡಬಹುದು **ಉದಾ :** ಹಸಿವೆಯನ್ನು ಹಿಂಗಿಸಿಕೊಳ್ಳಲು ಫಲಹಾರ ಮಾಡಬಹುದು ಇಲ್ಲವೆ ಊಟಮಾಡಬಹುದು. 2) ನೀರನ್ನು ಕೈಯಿಂದ ಕುಡಿಯಬಹುದು, ಇಲ್ಲವೆ ಕಪ್ಪಿನಿಂದ ಕುಡಿಯ ಬಹುದು ನದಿಯನ್ನು ನಾವೆಯಿಂದ ಇಲ್ಲವೆ ಈಸಿದಾಟಬಹುದು ಬಹಳ

ಮಡು ಇವೆ ನಾವೆಯಲ್ಲಿ ದಾಟು ಎಂದು ಹೇಳುವುದು ಈಸಿದಾಟುತ್ತೇನೆ ನ್ನುವವನಿಗೆ ಹೇಳುವ ನಿಯಮವಿಧಿ.

ಅಪೂರ್ವ ವಿಧಿಯಲ್ಲಿ ಅದನ್ನು ಕೇಳುವ ಮೊದಲು ಯಾವ ಪಕ್ಷವೂ ಪ್ರಾಪ್ತವಾಗಿರುವುದಿಲ್ಲ. ಎಲ್ಲವೂ ಅಪ್ರಾಪ್ತವೆ. ಆದರೆ ನಿಯಮ ವಿಧಿಯಲ್ಲಿ ಒಂದು ಪ್ರಾಪ್ತವಾಗಿದ್ದು ಮತ್ತೊಂದು ಅಪ್ರಾಪ್ತವಾಗಿರುತ್ತದೆ. ಈಸುವುದು ಪ್ರಾಪ್ತಿ. ನಾವೆಯಲ್ಲಿ ಹೋಗುವುದು ಅಪ್ರಾಪ್ತಿ. ಇಲ್ಲಿ ಪ್ರಾಪ್ತವಾದುದನು ಬಿಟ್ಟು ಅಪ್ರಾಪ್ತವಾದ ಪಕ್ಷವನ್ನೇ ಅನುಸರಿಸೆಂದು ಹೇಳುವುದೇ ನಿಯಮ ವಿಧಿಯು.

೩) **ಪರಿಸಂಖ್ಯಾ ವಿಧಿ :-** ಮಾಂಸಾಹಾರ, ಸಸ್ಯಾಹಾರ ಈ ಎರಡೂ ಪ್ರಾಪ್ತವಾಗಿವೆ. ಕ್ಷುಧಾನಿವಾರಣೆ ಸಾಧ್ಯವಾಗಿದ್ದು ಅದಕ್ಕೆ ಇವೆ ರಡೂ ಸಾಧನಗಳಾಗಿವೆ. ಮತ್ತು ಎರಡೂ ಒಮ್ಮೆಲೇ ಪ್ರಾಪ್ತವಾಗಿರುತ್ತವೆ. ಆದುದರಿಂದ ಈ ಎರಡರಲ್ಲಿ ಒಂದನ್ನು ಅಲ್ಲಗಳೆಯುವುದೇ ಪರಿಸಂಖ್ಯಾವಿ ಧಿಯ ಉದ್ದೇಶವು. ಎಂದರೆ ಒಮ್ಮೆಲೇಪ್ರಾಪ್ತವಾದ ಎರಡು ಪಕ್ಷಗಳಲ್ಲಿ ಒಂದನ್ನು ವರ್ಜಿಸುವುದೇ ಪರಿಸಂಖ್ಯಾವಿಧಿಯ ಲಕ್ಷಣವು. "**ಪಂಚಪಂಚ ನಖಾಭಕ್ಷ್ಯ**" ಎಂಬಲ್ಲಿ ಪಂಚನಖಭಕ್ಷ್ಯ (ಮಾಂಸಭಕ್ಷ್ಯ) ಹೇಳುವುದು ಮುಖ್ಯ ಹೇತುವಲ್ಲ. ಪಂಚನಖಭಕ್ಷ್ಯಣ ನಿವೃತ್ತಿಯೇ ಮುಖ್ಯ ಅರ್ಥವು.

ಪ್ರ : 107. **ಆತ್ಮನೆಂದೇ ಉಪಾಸನೆಮಾಡಬೇಕು. ಆತ್ಮನನ್ನೇ ನೋಡತಕ್ಕದ್ದು ಎಂಬ ವಿಷಯದಲ್ಲಿ ಉಪಾಸಕರ ಅಭಿಪ್ರಾಯವೇನು?**

ಉ : "**ಆತ್ಮನೆಂದೇ ಉಪಾಸನೆ ಮಾಡಬೇಕು**" **ಆತ್ಮವನ್ನೇ ನೋಡತಕ್ಕದ್ದು "ಅವನನ್ನೇಕುರಿತು ಶ್ರವಣಮನನ ನಿಧಿಧ್ಯಾಸಗಳನ್ನು ಮಾಡತಕ್ಕದ್ದು"** ಎಂದು ಮೊದಲಾಗಿ ಉಪನಿಷತ್ತುಗಳಲ್ಲಿ ವಿಧಿಯೇ ಹೇಳ ಲ್ಪಟ್ಟಿದೆ. ಸ್ವರ್ಗಾಪೇಕ್ಷಿಯು ಹೇಗೆ ಯಜ್ಞಯಾಗಾದಿಗಳನ್ನು ಮಾಡಬೇಕಾ ಗಿರುತ್ತದೆಯೋ ಹಾಗೆಯೇ ಮೋಕ್ಷಾಪೇಕ್ಷಿಯೂ ಆತ್ಮೋಪಾಸನೆಯನ್ನು ಮಾಡಬೇಕೆಂದು ಶಾಸ್ತ್ರವು ವಿಧಿಸುತ್ತದೆ. ಮೋಕ್ಷದಾಯಕವಾದ ಆತ್ಮೋ ಪಾಸನೆಯಂತೂ ಎರಡನೆ ಯಾವ ಪ್ರಮಾಣಗಳಿಂದಲೂ ಗೊತ್ತಾಗದಿರುವ ಮಾತು. ಯಾವ ಪ್ರಮಾಣಗಳಿಂದಲೂ ಆತ್ಮೋಪಾಸನೆ ಆಗದಿರುವುದು

ಅಪ್ರಾಪ್ತವು. ಆದುದರಿಂದ ಇದು ಅಪ್ರಾಪ್ತಪ್ರಾಪಕವಾಗಿರುವುದರಿಂದ ಇದು ಅಪೂರ್ವ ವಿಧಿಯೇ ಸರಿ ಎಂಬುದು ಉಪಾಸನಾವಾದಿಯ ಅಭಿಪ್ರಾಯ.

**ಪ್ರ: 108. ಇದಕ್ಕೆ ಸಿದ್ಧಾಂತಮತದವರು ಕೊಡುವ ಉತ್ತರವೇನು ?**

ಉ : ವೇದಾಂತ ಅಥವಾ ಉಪನಿಷತ್ತುಗಳೆಲ್ಲಾ ಸಿದ್ಧ ಬ್ರಹ್ಮವಸ್ತುವಿನ ಪ್ರತಿಪಾದನೆ ಮಾಡಿರುತ್ತವೆ. ಮುಕ್ತಿಗೆ ಈ ಬ್ರಹ್ಮಜ್ಞಾನವೇ ಕಾರಣ. ಈ ಬ್ರಹ್ಮಜ್ಞಾನವು ವಸ್ತುತಂತ್ರ ಅಂದರೆ ಪುರುಷಾಧೀನವಲ್ಲ. ಕರ್ಮವೆಲ್ಲಾ ಪುರುಷ ತಂತ್ರ. ಆದುದರಿಂದ ಜ್ಞಾನವು ಕರ್ಮವಾಗಲರಿಯದು.

ಒಂದುವೇಳೆ ಮೇಲೆ ಹೇಳಿದ ವೇದಾಂತ ವಾಕ್ಯಗಳು "ಆತ್ಮನೆಂದೇ ಉಪಾಸನೆಮಾಡು" ಮುಂತಾಗಿರುವ ವಾಕ್ಯಗಳು ವಿಧಿಯನ್ನೇ ಹೇಳುವವೆಂದು ಒಪ್ಪಿಕೊಂಡರೂ ಅದು ಅಪೂರ್ವ ವಿಧಿಯಂತೂ ಅಲ್ಲವೇ ಅಲ್ಲ. ಒಂದು ಪಕ್ಷ ಅದು ನಿಯಮ ಅಥವಾ ಪರಿಸಂಖ್ಯಾವಿಧಿ ಆಗಬಹುದು. ಹೇಗೆಂದರೆ ಮುಕ್ತಿಯು ಸಾಧ್ಯ; ಆತ್ಮಜ್ಞಾನವು, ಅನಾತ್ಮ ಜ್ಞಾನವು ಈ ಎರಡು ಅದಕ್ಕೆ ಸಾಧನಗಳೆಂದು ಸಾಮಾನ್ಯ ಜನರು ತಿಳಿಯಬಹುದು. ಆದರೆ ಮನುಷ್ಯನ ಪ್ರವೃತ್ತಿಯು ಸ್ವಾಭಾವಿಕವಾಗಿ ಅನಾತ್ಮದ ಕಡೆಗೇ ಇರುವುದರಿಂದ ಅವನು ಅನಾತ್ಮ ದರ್ಶನವನ್ನೇ ತನ್ನ ಗುರಿಯನ್ನಾಗಿ ಇಟ್ಟುಕೊಳ್ಳುವನು. ಆತ್ಮಜ್ಞಾನದ ಕಡೆ ಅವನು ಇಣಿಕಿಯೂ ನೋಡುವುದಿಲ್ಲ. ಆಗ ಜ್ಞಾನವು ಅಪ್ರಾಪ್ತವಾದಂತಾಯಿತು. ಇಂತಹ ಅನಾತ್ಮದಕಡೆ ಜೋಲು ಹಿಡಿದಿರುವ ಮನುಷ್ಯನನ್ನು ಕುರಿತು, ಮೇಲಿನ ವೇದವಾಕ್ಯಗಳು "ಆತ್ಮ ದರ್ಶನವನ್ನೇ ಮಾಡಿಕೊಳ್ಳತಕ್ಕದ್ದು'' ಎಂದು ಹೇಳುವುವು. ಆದುದರಿಂದ ಅವುಗಳನ್ನು ನಿಯಮವಿಧಿ ಎಂದು ತಿಳಿಯಬಹುದು.

ಇಲ್ಲವೇ ''ಆತ್ಮದರ್ಶನವು ಸರಿಯಾದುದೋ, ಅನಾತ್ಮದರ್ಶನ ಸರಿಯಾದುದೋ" ಎಂದು ದಡ್ಡನಾದ ಮನುಷ್ಯನು ಚಿಂತಿಸುತ್ತಿದ್ದರೆ ಅಂತವನನ್ನು ಕುರಿತು ಅನಾತ್ಮದರ್ಶನವು ಸರಿಯಾದುದಲ್ಲ ಅದನ್ನು ನೀನು ತ್ಯಾಗ ಮಾಡಬೇಕು ಎಂದು ವೇದವಾಕ್ಯಗಳು ಹೇಳುವವೆಂದೂ ಅರ್ಥ ಮಾಡಬ

ಹುದು. ಇಲ್ಲಿ ಆತ್ಮದರ್ಶನ–ಅನಾತ್ಮದರ್ಶನ ಎರಡೂ ಪ್ರಾಪ್ತವಾಗಿದ್ದು ಅವುಗಳಲ್ಲಿ ಅನಾತ್ಮದರ್ಶನವನ್ನು ತ್ಯಾಗಮಾಡಬೇಕೆಂದು ಹೇಳುವುದು ಪರಿಸಂಖ್ಯಾವಿಧಿ.

ಹೀಗೆ ಒಟ್ಟಿನ ಮೇಲಿಂದ ವೇದಾಂತದಲ್ಲಿ ೧) ವಿಧಿ ಪರವಾದ ವಾಕ್ಯಗಳೇ ಇಲ್ಲ ೨) ಇದ್ದರೂ ಅವು ಅಪೂರ್ವ ವಿಧಿಯಲ್ಲ. ಎಂಬುದು ಸಿದ್ಧಾಂತ ಮತದ ಮಂಡನೆ.

ಒಟ್ಟಿನಲ್ಲಿ ಶಂಕರರ ಅಭಿಪ್ರಾಯದಂತೆ ವೇದಾಂತ ವಾಕ್ಯಗಳು ವಿಧಿಗಳೇ ಅಲ್ಲ; ವಿಧಿಯ ಆಭಾಸಗಳು. ಅಂದರೆ ಕಣ್ಣಿಗೆ ವಿಧಿಯಂತೆ ಕಾಣತಕ್ಕಂತವುಗಳು. ಅಂದರೆ ಸ್ವಾಭಾವಿಕವಾಗಿಯೇ ವಿಷಯಗಳ ಬೆನ್ನು ಹತ್ತಿದವನ ದೃಷ್ಟಿಯನ್ನು ಆ ವಿಷಯಗಳಿಂದ ತಿರುಗಿಸಿ ಆತ್ಮನಕಡೆ ಕಳಿಸುವುದೇ ಆ ವೇದವಾಕ್ಯಗಳ ಉದ್ದೇಶವಾಗಿದೆ. ಸುಖದ ಇಚ್ಛೆಯಿಂದ ವಿಷಯಗಳನ್ನು ಆಶ್ರಯಿಸಿಕೊಂಡಿರುವವನಿಗೆ ಅತ್ಯಂತಿಕ ಸುಖಸಿಕ್ಕಲಾರದು. ಇವನು ಬಯಸುವುದು ಶಾಶ್ವತಸುಖ–ಅದಕ್ಕಾಗಿ ಬೆನ್ನು ಹತ್ತಿರುವುದು ತುಚ್ಛವಾದ ವಿಷಯಗಳನ್ನು ಇಂತವನನ್ನು. ಕುರಿತು "ಆತ್ಮನನ್ನೇ ನೋಡಬೇಕು"ಎಂದು ಮೊದಲಾಗಿ ವೇದವಾಕ್ಯಗಳು ಉಪದೇಶಮಾಡುತ್ತವೆ. ಹೊರಗೆ ವಿಷಯಗಳಲ್ಲಿ ಸುಖ ಸಿಕ್ಕಲಾರದು, ನಿನ್ನ ಅಂತಃಕರಣ ವೃತ್ತಿಯನ್ನು ಅಂತರ್ಮುಖ ಮಾಡು ಆಗ ನಿನಗೆ ಬೇಕಾದ ಶಾಶ್ವತಸುಖ ಅಲ್ಲಿ ಸಹಜವಾಗಿಯೇ ಸಿಕ್ಕುವುದು. ಎಂದು ಈ ವಾಕ್ಯೋಪದೇಶದ ಸಾರಾಂಶವೆಂಬುದು ಶ್ರೀ ಶಂಕರರ ಅಭಿಪ್ರಾಯ.

**ಪ್ರ : 109. ಹಾಗಾದರೆ ಇವುಗಳ ನಿಜವಾದ ಮರ್ಮವೇನು?**

ಉ : ಸ್ವಾಭಾವಿಕವಾಗಿಯೇ ವಿಷಯಗಳ ಬೆನ್ನು ಹತ್ತಿರುವ ಬಹಿರ್ಮುಖ ದೃಷ್ಟಿಯವನನ್ನು ಆಕಡೆಯಿಂದ ತಿರುಗಿಸಿ ಆತ್ಮನಕಡೆ ಹೊರಳಿಸುವುದು. ಸುಖದ ಆಸೆಯಿಂದ ಮನುಷ್ಯನು ವಿಷಯಗಳ ಬೆನ್ನು ಹತ್ತುವವನಲ್ಲವೆ, ಆದರೆ ಅವನಿಗೆ ಅಲ್ಲಿ ಅತ್ಯಾಂತಿಕ ಸುಖಸಿಕ್ಕಲಾರದು. ಹೀಗೆ ಶಾಶ್ವತ ಸುಖಾಪೇಕ್ಷಿಯಾಗಿ ಬಾಹ್ಯವಿಷಯಗಳಲ್ಲಿ ತೊಳಲಾಡುತ್ತಿರುವವನಿಗೆ "ಆತ್ಮವನ್ನು ನೋಡಲೇಬೇಕು" ಎಂದು ಮೊದಲಾಗಿ ವೇದವಾಕ್ಯಗಳು ಉಪದೇಶ

ಮಾಡುತ್ತನೆ. ಹೊರಗೆ ಸುಖಸಿಕ್ಕಲಾರದು ವೃತ್ತಿಯನ್ನು ಒಳಗೆ ತಿರುಗಿಸಿ ನೋಡು, ಆಗ ನಿನಗೆ ಶಾಶ್ವತಸುಖ ಸಹಜವಾಗಿಯೇ ಸಿಕ್ಕುವುದು ಎಂದು ಈ ವೇದಾಂತವಾಕ್ಯೋಪದೇಶಗಳ ಸಾರಾಂಶವೆಂದು ಶ್ರೀ ಶಂಕರ ಭಗವತ್ಪಾದರು ಯಾಥಾರ್ಥವಾಗಿಯೇ ಹೇಳಿದ್ದಾರೆ.

5 **ನೇ ಶಂಕೆಗೆ ಸಮಾಧಾನ :–** ವೇದದ ವಿನಃ ಬೇರೆ ಯಾವ ಪ್ರಮಾಣಗಳ ಮೇಲೂ ನಮಗೆ ವಿಶ್ವಾಸವಿಲ್ಲೆಂದು ಹೇಳಿದಿರಿ.

ನಾವು ಯಾವುದೇ ಪ್ರಮಾಣಗಳ ಆಧಾರದಮೇಲೂ ಆತ್ಮನ ಏಕತ್ವವನ್ನು ಪ್ರತಿಪಾದಿಸುವುದಿಲ್ಲ. ಅದು ಕೇವಲ ಅನುಭವ ರೂಪವಾದುದರಿಂದ ಆತ್ಮನುಸ್ವತಃಸಿದ್ಧನು. ಎಲ್ಲಾ ಪ್ರಮಾಣಗಳೂ ಅನುಭವದ ಆಧಾರದ ಮೇಲೆಯೇ ಅವಲಂಬಿಸಿರುವುದರಿಂದ ಅನುಭವರೂಪನಾದ ಸ್ವತಃಸಿದ್ಧನಾದ ಆತ್ಮನ ಬಗ್ಗೆ ಯಾವ ಪ್ರಮಾಣವೂ ಇರಲಾರದು. ಪ್ರಮಾಣಗಳೆಲ್ಲಾ ಅವನಿಂದ ಸಿದ್ಧವಾಗಬೇಕು. ಅವನು ಸ್ವತಃಸಿದ್ಧ ಅಪ್ರಮೇಯನು. "ನಾನು ಇಲ್ಲ"ವೆಂದು ಯಾರೂ ಒಪ್ಪಿಕೊಳ್ಳಲಾರರಲ್ಲವೆ ! ಹೀಗೆ ಯಾವ ಪ್ರಮಾಣಕ್ಕೂ ನಿಲುಕದೆ ಸ್ವತಃಸಿದ್ಧವಾಗಿರುವ ಆತ್ಮನ ಬಗ್ಗೆ ಅಪನಂಬಿಕೆ ಇಡುವುದು ಸರಿಯಾಗಲಾರದು.

**ಮೂರನೇ ಶಂಕೆಗೆ ಸಮಾಧಾನ :–** ಕಾಲಾಂತರದ ಫಲವನ್ನು ಕೊಡುವ ಕರ್ಮಗಳಿಗೆ ಮಾತ್ರ ಈ ಮಾತು ಸರಿಯಾಗಬಹುದು. ಆದರೆ ಹುಟ್ಟಿದೊಡನೆಯೇ ಫಲವನ್ನು ಕೊಡುವ ಆತ್ಮಜ್ಞಾನದ ಬಗ್ಗೆ ಇದು ಸಮಂಜಸವಾಗಲಾರದು. ಸಂಸಾರ ನಾಶರೂಪವಾದ ಆತ್ಮಜ್ಞಾನ ಫಲವು ಪ್ರತ್ಯಕ್ಷವಾಗಿ ಸಿಕ್ಕುತ್ತಿರಲು ಆತ್ಮಾಜ್ಞಾನವು ಮುಮುಕ್ಷುವಿಗೆ ಯಾವ ಉಪಕಾರವನ್ನು ಮಾಡಲಾರದೆಂದು ಹೇಳುವುದು ಸರಿಯಾದುದಲ್ಲ.

**ನಾಲ್ಕನೆ ಶಂಕೆಗೆ ಸಮಾಧಾನ :– ಜೈಮುನಿಯವರ ನಿಜವಾದ ಆಶೆ :–** ವೇದವೆಲ್ಲಾ ಕರ್ಮಪರವೇ ಆಗಿರುವುದೆಂಬುದು ಜೈಮುನಿಯವರ ನಿಜವಾದ ಅಭಿಪ್ರಾಯ ವಿದ್ದರೆ, ಬಾದರಾಯಣರು ನಿಜವಾಗಿ ಬ್ರಹ್ಮನ ಸ್ವರೂಪವನ್ನು ಮಾತ್ರ ಇದ್ದಕಿದ್ದಂತೆ ವರ್ಣಿಸುವ ಮತ್ತು ಆಳವಾದ ನ್ಯಾಯಗಳಿಂದ ಕೂಡಿಕೊಂಡು ಎಲ್ಲಾ ವೇದಾಂತ ಅರ್ಥಗಳನ್ನು ಸಮನ್ವಯಮಾಡಿ

ವಿವರಿಸುವ ಉತ್ತರಮೀಮಾಂಸ ಶಾಸ್ತ್ರದ ಆಗತ್ಯತೆ ಏನಿತ್ತು ಮತ್ತು ಈ ಉತ್ತರ ಮೀಮಾಂಸೆ ಮತ್ತು ಪೂರ್ವ ಮೀಮಾಂಸೆಗಳು ಸ್ವತಂತ್ರವಾಗಿಯೂ. ಬೇರೆ ಬೇರೆಯಾಗಿಯೂ, ಭಿನ್ನ ಕರ್ತೃಗಳಾಗಿಯೂ ಇದ್ದರೂ ಅವು ಒಂದ ಕ್ಕೊಂದು ವಿರುದ್ಧವಾಗಿರದೆ ಒಂದಕ್ಕೊಂದು ಪೂರಕಗಳಾಗಿಯೇ ಇರುವು ವೆಂದು ಹೇಳಬಹುದು. ಎರಡೂ ಮೀಮಾಂಸೆಗಳಿಗೂ ವೇದವೇ ಪ್ರಮಾ ಣವು; ಮತ್ತು ವೇದವೇ ವಿಷಯುವು. ಎರಡೂ ವೇದದ ಅರ್ಥವನ್ನು ಹೇಳಿ ಕೊಡುವುದಕ್ಕಂಡೇ ಹೊರಟಿವೆ. ಆದರೆ ಒಂದು ಮೀಮಾಂಸೆಗೆ ವೇದದ ಕರ್ಮಕಾಂಡವು ವಿಷಯವಾಗಿದ್ದರೆ, ಇನ್ನೊಂದಕ್ಕೆ ಬ್ರಹ್ಮವು ವಿಷಯುವಾ ಗಿದೆ. ಕರ್ಮಕಾಂಡವು ಇಹಲೋಕದ ಪರಲೋಕದ ಸುಖ ಸಾಧನವನ್ನು ಹೇಳುತ್ತದೆ. ಜ್ಞಾನಕಾಂಡವು ಪರಮಪುರುಷಾರ್ಥವು. ಐಹಿಕ–ಪಾರಲೌಕಿಕ ಸುಖವಲ್ಲ ಅದು ಸಂಸಾರದಿಂದ ಮನುಷ್ಯನ ಬಿಡುಗಡೆಮಾಡಿ ಮೋಕ್ಷವನ್ನೇ ಕೊಡುತ್ತದೆ. ಇದು ಬ್ರಹ್ಮಜ್ಞಾನದಿಂದ ಆಗುತ್ತದೆಯೇ ವಿನಃ ಕರ್ಮದಿಂದ ಆಗುವುದಿಲ್ಲ.

ಹೀಗೆ ಒಟ್ಟಿನ ಮೇಲೆ ಆವೆರಡೂ ಕೂಡಿ ಇಡೀ ವೇದದೊಳಗಿರುವ ವಿಷಯುಗಳನ್ನೇ ಸುವ್ಯವಸ್ಥೆಯಿಂದ ವಿಮರ್ಶಿಸುತ್ತವೆ. ಆದುದರಿಂದ ಇವೆ ರಡು ಪರಸ್ಪರ ವಿರುದ್ಧವಲ್ಲ. ಕರ್ಮ ಮತ್ತು ಜ್ಞಾನ ಎರಡೂ ವೇದದಲ್ಲಿ ಹೇಳಲ್ಪಟ್ಟಿವೆ. ಆದುದರಿಂದಲೇ ಕರ್ಮಮೀಮಾಂಸೆಯನ್ನು ಜೈಮಿನಿ ಮಹರ್ಷಿಯೂ, ಬ್ರಹ್ಮಮೀಮಾಂಸೆಯನ್ನು ವ್ಯಾಸರೂ ಬರೆದಿರುತ್ತಾರೆ. ಆದರೆ ಕರ್ಮ ಒಂದೇ ವೇದದ ವಿಷಯುವೆಂದು ನಿಜವಿದ್ದರೆ ವ್ಯಾಸರು ಬ್ರಹ್ಮ ಸೂತ್ರಗಳನ್ನು ರಚಿಸುವ ಅಗತ್ಯತೆ ಇರುತ್ತಿರಲಿಲ್ಲ. ಮತ್ತು ಬ್ರಹ್ಮಸೂತ್ರ ಗಳಿಗೂ ಬಾಧೆ ಬರುತ್ತಿತ್ತು. ಆದುದರಿಂದ ಅಭ್ಯುದಯದ ಬೆನ್ನು ಹತ್ತಿದ ವರಿಗೆ ಕರ್ಮಕಾಂಡವೂ,ನಿಃಶ್ರೇಯುಸವು ಬೇಕೆನ್ನುವವರಿಗೆ ವೇದಾಂತಸೂತ್ರ ಗಳೂ ಹೇಳಲ್ಪಟ್ಟಿವೆ.

ಕರ್ಮಕಾಂಡವು ಅಂತಃಕರಣ ಶುದ್ಧಿಗೂ, ಜ್ಞಾನಕಾಂಡವು ಆತ್ಮಸಾಕ್ಷಾ ತ್ಕಾರಕ್ಕೂ ಪ್ರಮಾಣವಾಗಿರುವುದೆಂಬುದೇ ನಿಜವಾದ ಅಭಿಪ್ರಾಯು.

ಮತ್ತೊಂದು ವಿಶೇಷ–ಮಾಡು, ಬಿಡು ಎಂದು ಹೇಳುವ ವಿಧಿ–ನಿಷೇ ಧಗಳನ್ನು ಹೇಳುವ ವೇದ ಭಾಗವೆಲ್ಲಾ ಕರ್ಮಪರವಾಗಿರುವುದೆನ್ನಬಹುದು.

ಆದರೆ "ತತ್ತ್ವಮಸಿ" (ಛಾಂ ೬-೮-೭) ಮೊದಲಾದ ವಾಕ್ಯಗಳೂ ಸಹ ಕರ್ಮಪರವಾಗಿವೆ ಎಂದು ತೋರಿಸಿಕೊಡುವುದಾದರೂ ಹೇಗೆ !!

**ಆರನೆ ಶಂಕೆಗೆ ಸಮಾಧಾನ :-** ಈಶಾವಾಸ್ಯೋಪನಿಷತ್ತಿನ ೨ ನೇ ಮಂತ್ರವು ಮುಮುಕ್ಷುವು ತನ್ನ ಆಯುಷ್ಯವನ್ನೆಲ್ಲಾ ಸಂಪೂರ್ಣವಾಗಿ ಕರ್ಮಾನುಷ್ಠಾನದಲ್ಲಿಯೇ ಕಳೆದು ಹೋಗಬೇಕೆಂದು ಹೇಳಿರುವುದು. ಈಶಾವಾಸ್ಯೋಪನಿಷತ್ತಿನ ನಿಜವಾದ ಅರ್ಥವಲ್ಲ.

ಮೀಮಾಂಸಕರು ಜ್ಞಾನವನ್ನೇ ಪ್ರತಿಪಾದನೆ ಮಾಡುವ ಈಶಾವಾಸ್ಯೋಪನಿಷತ್ತಿನ ಆಧಾರದ ಮೇಲೆ ಜ್ಞಾನಪಕ್ಷವನ್ನೇ ಖಂಡಿಸಲು ಹೊರಟಿರುತ್ತಾರೆ. ವಿಮರ್ಶಾತ್ಮಕ ದೃಷ್ಟಿಯಿಂದ ನೋಡಿದರೂ ಆ ಮಂತ್ರ ಅವರಿಗೆ ಅನುಕೂಲವಾಗುವಂತಿಲ್ಲ.

ಆತ್ಮನು ನಿಜವಾಗಿ ಕರ್ತೃವೆಂದಾಗಲಿ, ಅವನಿಗೆ ಕರ್ಮದಲ್ಲಿ ಅಧಿಕಾರವಿರುವುದೆಂದಾಗಲೀ ಅಥವಾ ಅವನು ಭೋಕ್ತೃವೆಂದಾಗಲೀ, ಅವನಿಗೆ ಭೋಗಸಾಧನಗಳೊಡನೆ ಸಂಬಂಧವಿರುವುದೆಂದಾಗಲೀ ಎಂದೂ ಸಿದ್ಧವಾಗುವುದಿಲ್ಲ. ಆದುದರಿಂದ ಈಶಾವಾಸ್ಯೋಪನಿಷತ್ತು ಅವರಿಗೆ ಎಷ್ಟು ಮಾತ್ರವೂ ಸಹಾಯಕವಾಗಲಾರದು. ಅದು ಅಜ್ಞಾನಾವಸ್ಥೆಯಲ್ಲಿದ್ದ ಜೀವಿಗಳನ್ನು ಕುರಿತು ಹೇಳಲ್ಪಟ್ಟಿದೆ,

ಸ್ವರ್ಗಕ್ಕೆ ಹೋಗಬೇಕೆನ್ನುವವನು ಯಥಾವಿಧಿಯಾಗಿ ಅಗ್ನಿಹೋತ್ರವನ್ನು ಮಾಡಬೇಕು-ಎಂಬುದು ನಿಮ್ಮ ಕರ್ಮಸಿದ್ಧಾಂತ. ಆದರೆ ಜೈಮುನಿಯು ದೇಹಕ್ಕಿಂತ ಆತ್ಮನು ಭಿನ್ನವಾಗಿರುವನೆಂದು ಹೇಳಿದ್ದಾನಲ್ಲವೆ! ದೇಹಕ್ಕಿಂತ ಭಿನ್ನವಾದ ಆತ್ಮನು ನಿತ್ಯನು. ಅವನು ನೂರುವರ್ಷ ಇರುವುದು ನೂರುವರ್ಷ ಕರ್ಮಮಾಡುವುದು ಇವೆಲ್ಲಾ ಅವನಿಗೆ ಹೇಗೆ ಸಿದ್ಧಿಸುತ್ತವೆ ! ಆದ್ದರಿಂದ ಆತ್ಮನುಕರ್ತೃವೂ ಅಲ್ಲ ಭೋಕ್ತೃವೂ ಅಲ್ಲ.

ಮತ್ತು ಕರ್ಮಕ್ಕೆ ಅವಶ್ಯಕ ಸಾಧನಗಳಾದ ಶರೀರ-ಹಣ-ತುಪ್ಪ ಇತ್ಯಾದಿ ವಸ್ತುಗಳು ಯಾವೂ ತನ್ನ ಸ್ವಭಾವವಲ್ಲವೆಂದೂ, ತಾನು ಇವೆಲ್ಲಕ್ಕಿಂತ ಭಿನ್ನವಾದ ಆತ್ಮನೆಂದೂ ಹೇಳುವ ಕರ್ಮವಾದಿಗೆ ಕರ್ಮಾಧಿಕಾರವೇ ಇಲ್ಲವಲ್ಲ.

**ಪ್ರ : 110. ಅಹಂಕಾರವು ಆತ್ಮಧರ್ಮವಲ್ಲವೆ ! ಆದ್ದರಿಂದ "ನಾನು" ಎನ್ನುವುದು ಏಕೆ ಕರ್ಮಮಾಡಲಾಗುವುದಿಲ್ಲ. ಆಗ ಆ ಕರ್ಮವು ಆತ್ಮನಿಗೆ ಸಂಭವಿಸಲಿಲ್ಲವೆ !**

ಉ : ಅಹಂಕಾರವೆಂಬ ಒಂದು ಸಾಧನದಿಂದ ವ್ಯವಹರಿಸುತ್ತಿರುವ ಆತ್ಮರೂಪನಾದ ತಾನು ವಸ್ತುತ ಎಲ್ಲಾ ಜಡ ಧರ್ಮಗಳಿಂದಲೂ ಬೇರೆಯೇ ಆಗಿರುವನೆಂದೂ, ಎಲ್ಲಾ ಪ್ರಮಾಣಗಳಿಗೂ ಅಗೋಚರನಾಗಿರುವನೆಂದೂ ತಿಳಿಯುವ ಮೀಮಾಂಸಕರಿಗೆ ಈ ಕರ್ಮಕಾಂಡದೊಳಗೆ ಪ್ರವೇಶವೇ ಇಲ್ಲವಲ್ಲ !

ಯಾವುದಾದರೊಂದು ಕರ್ಮವನ್ನು ಮಾಡಬೇಕಾದರೆ ಏನಾದರೊಂದು ಕಾರಣವಿರಬೇಕಲ್ಲವೆ ! ಆದರೆ ದೇಹಭಿನ್ನನಾದ ಆತ್ಮನನ್ನು ಒಪ್ಪುವ ಮೀಮಾಂಸಕರಾದ ನೀವು ದೇಹಭಿನ್ನನಾದ ಆತ್ಮನು ಕರ್ಮಪ್ರವೃತ್ತನಾಗುತ್ತಾನೆಂದು ಹೇಗೆ ಹೇಳುವಿರಿ! ಕರ್ಮಪ್ರವೃತ್ತಿಗೆ ಏನಾದರೊಂದು ಕಾರಣವಿರಬೇಕು. ದೇಹಭಿನ್ನನಾದ ಆತ್ಮನಿಗೆ ಯಾವ ಕಾರಣವೂ ಇಲ್ಲ. ಯಾವ ಕಾರಣವೂ ಇಲ್ಲದ ದೇಹ ಭಿನ್ನನಾದ ಆತ್ಮನು ಹೇಗೆ ಕರ್ಮದಲ್ಲಿ ಪ್ರವೃತ್ತನಾದಾನು !

**ಪ್ರ : 111. ಆತ್ಮನಿಗೆ ಸುಖದುಃಖ ಸಂಬಂಧವಿರುವುದರಿಂದ ಕರ್ಮ ಪ್ರವೃತ್ತನಾಗುತ್ತಾನಲ್ಲವೆ ?**

ಉ : ಸುಖದುಃಖ ಇರುವುದು ಅಂತಃಕರಣದಲ್ಲಿ; ಅಂತಃಕರಣವು ಹೊರಗಿರುವುದು. ಆತ್ಮನು ಪ್ರತ್ಯಗ್ರೂಪನು; ಅಂತಃಕರಣಕ್ಕಿಂತ ಒಳಗಿರುವವನು. ಅಂದರೆ ಅಹಂಕಾರವು ಅಂತಃಕರಣಕ್ಕಿಂತ ಒಳಗಿನದು. ಅಹಂಕಾರರೂಪ ಆತ್ಮನು ವಿಷಯಿ ಒಳಗಿದ್ದಾನೆ—ಸುಖದುಃಖಗಳು ವಿಷಯ ಹೊರಗಿವೆ. ವಿಷಯಿಯಾದ ಅಹಂಕಾರರೂಪ ಆತ್ಮನಿಗೆ ವಿಷಯವಾದ ಸುಖದುಃಖಗಳು ಸಂಬಂಧಿಸುವುದಿಲ್ಲ. ತನ್ನನ್ನು ತಾನೇ ನೋಡುವಂತೆಯೂ ಇಲ್ಲ. ಆದುದರಿಂದ ವಿಷಯಿ ಯಾದ ಆತ್ಮನಿಗೆ ವಿಷಯವಾದ ಸುಖದುಃಖಗಳ ಸಂಬಂಧವು ಅನುಭವಕ್ಕೆ ಬರುವಂತಿಲ್ಲ. ಭೋಕ್ತೃತ್ವವೇ ಅನುಭವದಲ್ಲಿಲ್ಲದವನು ಕರ್ಮದಲ್ಲಿ ಹೇಗೆ ತೊಡಗುವನು ?

**ಪ್ರ : 112. ಭೋಗಕ್ಕೆ ಅವಶ್ಯಕ ಸಾಧನವಾದ ಶರೀರದೊಡನೆಯಾದರೂ ಆತ್ಮನು ಎಡೆಬಿಡದೆ ಕೂಡಿಕೊಂಡಿರುವುದರಿಂದ ಸುಖದುಃಖ ಅವನಿಗೂ ಸಂಭವಿಸಬಹುದಲ್ಲ.**

ಉ : ಇದೂ ಇಲ್ಲ. ನಾನೆಂಬ ಅಹಂಕಾರಕ್ಕೂ ಆತ್ಮನಿಗೂ ಸಂಬಂಧವಿಲ್ಲವೆಂದ ಮೇಲೆ ಹೊರಗಿನ ದೇಹಕ್ಕೂ ಆತ್ಮನಿಗೂ ಸಂಬಂಧವಿಲ್ಲೆಯುದು. ಆದುದರಿಂದ ಸ್ವರ್ಗಾದಿಲೋಕಗಳಲ್ಲೂ ಆತ್ಮನಿಗೆ ಸುಖದ ಅನುಭವಮಾಡಿಕೊಡಲಾರವು.

**ಸಾರಾಂಶ:**—ಕರ್ಮಕ್ಕೆ ಸಾಧನವಾದ ದೇಹಾದಿ ಕರ್ಮಸಾಧನಗಳನ್ನೇ ಅವಿದ್ಯೆಯಿಂದ ಆತ್ಮವೆಂದು ತಿಳಿದು–ತಾನು ನಿಜವಾಗಿ ಮನುಷ್ಯನೆಂದು ಅಭಿಮಾನಪಡುವ ಅಜ್ಞಾನಿಗಳನ್ನು ಕುರಿತು ಕರ್ಮವನ್ನು ಮಾಡುತ್ತಿರಬೇಕೆಂದು ಈಶಾವಾಸ್ಯೋಪನಿಷತ್ತಿನ ಮಂತ್ರವು ಹೇಳುತ್ತದೆ. ಆತ್ಮಸಾಕ್ಷಾತ್ಕಾರ ಪಡೆಯಲು ಹೊರಟಿರುವವನಿಗೆ, ಪಡೆದವನಿಗೆ ಆ ಮಾತು ಸಂಬಂಧವಿಲ್ಲ.

**ಏಳನೆ ಶಂಕೆಗೆ ಸಮಾಧಾನ:— ವೇದಾಂತ ಮಹಾವಾಕ್ಯಗಳಲ್ಲಿ ಕ್ರಿಯಾಪದವೇ ಇಲ್ಲವಲ್ಲ ! ಕ್ರಿಯಾ ಪದವಿಲ್ಲದೆ ಯಾವ ವಾಕ್ಯವೂ ಯಾರಿಗೂ ಜ್ಞಾನವಮಾಡಲಾರದು.**

ವೇದಾಂತ ವಾಕ್ಯಗಳಲ್ಲಿ ಅವಶ್ಯಕತೆ ಇದ್ದಲ್ಲಿ ಕ್ರಿಯಾಪದವನ್ನು ಅಧ್ಯಾಹಾರಮಾಡಬೇಕು.

**ಪ್ರ : 113. ವಾಕ್ಯವೆಂದರೇನು ?**

ಉ : ವಾಕ್ಯದೊಳಗೆ ಇರುವ ಪದಗಳು ಒಂದಕ್ಕೊಂದು ಹೊಂದಿಕೊಂಡಿರಬೇಕು. ಸಂಶಯ ವಿಪರ್ಯಯಭಾವನೆ ಬರದಂತೆ, ಅರ್ಥವು ಪೂರ್ಣವಾಗುವಂತೆ ಇರುವ ಪದಗಳ ಸಮೂಹವು ವಿಷಯವನ್ನು ತಿಳಿಸಿಕೊಡುವುದಾವುದೋ ಅದೇ ವಾಕ್ಯ.

ಕ್ರಿಯಾಪದವು ಇರಲೇಬೇಕೆಂಬುದು ಪ್ರಭಾಕರರವಾದ. ಆದರೆ ಭಾಟ್ಟರು,ನೈಯ್ಯಾಯಿಕರೂ, ವೇದಾಂತಿಗಳೂ ಆಯಾ ಪದಗಳ ನಡುವೆ ಹೊಸದಾಗಿ ಉತ್ಪನ್ನವಾದ ವಿಶಿಷ್ಟ ಸಂಬಂಧದಿಂದಲೇ ವಾಕ್ಯಾದ ಅರ್ಥವನ್ನು ನಿಶ್ಚಯಿಸಬೇಕೆಂದು ಹೇಳುತ್ತಾರೆ.

ಕ್ರಿಯಾಪದವಿಲ್ಲದೆ ವಾಕ್ಯದೊಳಗಿನ ಬೇರೆ ಬೇರೆ ಪದಗಳು ಕೂಡಲಾರವೆಂಬುದೂ ನಿಜವೆ. ಆದರೆ ಎಲ್ಲೆಲ್ಲಿಬೇಕೋ ಅಲ್ಲಲ್ಲಿ, ಬೇಕುಬೇಕಾದ ಕ್ರಿಯಾಪದ ತೆಗೆದುಕೊಳ್ಳುವುದು ಒಳ್ಳೆಯದಲ್ಲ. ಯಾವ ಕ್ರಿಯಾಪದ ಹಾಕಿದರೆ ವಕ್ತೃವಿನ ತಾತ್ಪರ್ಯಕ್ಕೆ ಅನುಗುಣವಾಗಿ ಅರ್ಥವಾಗುವುದೋ ಯಾವುದು ವಾಕ್ಯದ ಆಕಾಂಕ್ಷೆಯನ್ನು ಪೂರ್ಣಮಾಡುವುದೋ ಅಂತಹ ಕ್ರಿಯಾಪದವನ್ನೇ ಅಧ್ಯಾಹಾರವೆಂದು ಸ್ವೀಕರಿಸಬೇಕಾಗುವುದು.

ವೇದಾಂತವು ಷಡ್ಭಾವವಿಕಾರವಿಲ್ಲದವನಾದ ಸ್ವಯಂಪ್ರಕಾಶನಾದ ಆತ್ಮನ ಜ್ಞಾನವನ್ನೇ ಮಾಡಿಕೊಡುವುದು. ಆ ರೀತಿ ಆತ್ಮಜ್ಞಾನಮಾಡಿಕೊಡುವ ವಾಕ್ಯಗಳಲ್ಲಿ ಇದ್ದೇನೆ, ಇದ್ದೀಯೆ ಮುಂತಾದ ಕ್ರಿಯಾಪದಗಳು ಉಪಯೋಗವಾಗಿವೆ. ಪ್ರಜ್ಞಾನಂ ಬ್ರಹ್ಮ, ಅಯಮಾತ್ಮಾ ಬ್ರಹ್ಮ, ಸೋಽಹಂ, ಇತ್ಯಾದಿವಾಕ್ಯಗಳಲ್ಲಿ ಇಂತಹ ಕ್ರಿಯಾಪದಗಳು ಇಲ್ಲದೆ ಹೋದಾಗ್ಯೂ ಅಲ್ಲಿ ತಾತ್ಪರ್ಯಕ್ಕೆ ಅನುಕೂಲವಾದ ಕ್ರಿಯಾಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

**ಉದಾ :-** ದಾನಕೊಡುವಾಗ "ಓಡಬೇಕು"ಎಂಬ ಕ್ರಿಯಾಪದವು ಹೇಗೆ ಹೊಂದಲಾರದೋ ಹಾಗೆಯೇ ಸಿದ್ಧವಸ್ತುವಾದ ಆತ್ಮನ ಬಗ್ಗೆ ಹೇಳುವವಾಕ್ಯಗಳಲ್ಲಿ ವಿಪರೀತವಾದ ಅರ್ಥವನ್ನು ಪ್ರತಿಪಾದಿಸುವುದರಲ್ಲಿ ತಾತ್ಪರ್ಯವುಳ್ಳ ಕ್ರಿಯಾಪದವನ್ನು ಅಂಗೀಕರಿಸಬಾರದು.

**ಪ್ರ : 114. ವೇದಾಂತ ವಾಕ್ಯಗಳ ಮುಖ್ಯ ನಿಶ್ಚಿತವಾದ ಅರ್ಥ ಯಾವುದು ?**

ಉ : "ತತ್ತ್ವಮಸಿ" ಇತ್ಯಾದಿ ವೇದಾಂತ ಮಹಾವಾಕ್ಯಗಳು ಸ್ವತಃ ಸಿದ್ಧವಸ್ತುವಾದ ಆತ್ಮನ ಜ್ಞಾನವನ್ನು ಮಾಡಿಕೊಡುತ್ತವೆ. ಮೀಮಾಂಸಕರು ಯಾವುದೊಂದು ಗ್ರಂಥದ ತಾತ್ಪರ್ಯವನ್ನು ನಿರ್ಣಯಿಸಲು ಆರು ಲಿಂಗಗಳ ಮೂಲಕ ವಿಚಾರ ಮಾಡುತ್ತಾರೆ. ಈ ರೀತಿಯಿಂದ ವೇದಾಂತ ಅಥವಾ ಉಪನಿಷತ್ತುಗಳನ್ನೆಲ್ಲಾ ವಿಚಾರಮಾಡಿ ನೋಡಿದರೆ ಅವುಗಳಲ್ಲೆಲ್ಲಾ ಬ್ರಹ್ಮಜ್ಞಾನವೇ ತಾತ್ಪರ್ಯವಾಗಿರುವುದೆಂದು ಸಹಜವಾಗಿ ಸಿದ್ಧವಾಗುತ್ತದೆ. ಈ ಮಾತನ್ನು ಶಂಕರರು ತಮ್ಮ ಉಪನಿಷದ್ಭಾಷ್ಯಗಳಲ್ಲಿ ಸಿದ್ಧಮಾಡಿದ್ದಾರೆ.

ಈ ರೀತಿ ಷಡ್ಲಿಂಗಗಳಿಂದ ತಾತ್ಪರ್ಯವನ್ನು ನಿರ್ಣಯಮಾಡಿ ವೇದಾಂತ ಮಹಾವಾಕ್ಯಗಳು ಆತ್ಮಜ್ಞಾನ ಮಾಡಿಕೊಡುವಲ್ಲಿ ಆ ವೇದಾಂತ ವಾಕ್ಯಗಳಿಗೆ ಬೇರೆ ಅರ್ಥವನ್ನು ಹಚ್ಚುವುದು ದೇವತೆಗಳಿಂದಲೂ ಆಗುವುದಿಲ್ಲ.

## ಉಪಸಂಹಾರ

**ಎಂಟನೆ ಶಂಕೆಗೆ ಸಮಾಧಾನ : ಎಲ್ಲಾ ಆಶ್ರಮಗಳಿಗೂ ವಿಹಿತವೆಂದು ಹೇಳಿದ ಕಾಯಿಕ, ವಾಚಿಕ, ಮಾನಸಿಕ ಕರ್ಮಗಳನ್ನೆಲಾ ಯಥಾಶಕ್ತಿಯಾಗಿ ಒಳ್ಳೇ ರೀತಿಯಿಂದ ಆಚರಿಸಿದರೆ ಮಾತ್ರ ಮೋಕ್ಷವಾದೀತೇ ಹೊರತು ಬೇರೆ ಯಾವ ಸಾಧನದಿಂದಲೂ ಆಗಲಾರದು.**

ಮೇಲೆ ಹೇಳಿದ ರೀತಿಯಲ್ಲಿ ಯಾವ ಆಶ್ರಮದವರಿಗೂ ತ್ರಿಕರಣಪೂರ್ವಕವಾಗಿ ಕರ್ಮಗಳನ್ನು ಚನ್ನಾಗಿ ಮಾಡಿದರೂ ಮುಕ್ತಿಯಾಗಲಾರದು. ಏಕೆಂದರೆ ಆ ಮುಕ್ತಿಯು ಜ್ಞಾನದಿಂದಲೇ ಆಗುವುದು.

ಆ ಕಾರಣದಿಂದಲೇ ತಮ್ಮ ತಮ್ಮ ಮನಸ್ಸಿನೊಳಗೆ ಇಲ್ಲದ ಸಲ್ಲದ ಕಲ್ಪನೆಗಳನ್ನು ಮಾಡುತ್ತಾ ತಾವೇ ಜಾಣರೆಂದು ಉಬ್ಬಿನಿಂದ ಮೆರೆಯುವ ಇಂತಹ ಶ್ರೋತ್ರೀಯ ಕರ್ಮಠರಿಗೆ ಮಾತ್ರ ಕರ್ಮಸಂಬಂಧ ಮಾತುಗಳು ಶೋಭಿಸುವವಲ್ಲದೆ ಆತ್ಮಜ್ಞಾನಿಗಳಲ್ಲಿ ಅಂತಹ ಮಾತುಗಳು ಎಂದೂ ಶೋಭಿಸುವುದಿಲ್ಲ.

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ
ಶ್ರೀಮಚ್ಛಂಕರ ಭಗವತ್ಪಾದಶಿಷ್ಯ ಶ್ರೀ ಸುರೇಶ್ವರಾಚಾರ್ಯ
ವಿರಚಿತಾಯಾಂ ನೈಷ್ಕರ್ಮ್ಯಸಿದ್ಧೌ ಸಸಂಬಧೋಕ್ತೌ
ಪ್ರಥಮೋಽಧ್ಯಾಯಃ

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವ ಶಿಷ್ಯತೇ ॥

ಓಂ ಶಾಂತಿಃ ಶಾಂತಿಃ ಶಾಂತಿಃ



ನಮೋ ಭಗವತೇ ಶಂಕರಾನಂದಾಯ

# ನೈಷ್ಕರ್ಮ್ಯಸಿದ್ಧಿ

## ಎರಡನೇ ಅಧ್ಯಾಯ

## ಆರು ನೀನೆಂದು ವಿಚಾರಿಸು

### ಭಾಗ ೧

### ಅ ವ ತ ರ ಣಿ ಕೆ

**ಪ್ರ : 1. ಈ ಎರಡನೇ ಅಧ್ಯಾಯವು ಪ್ರಾರಂಭವಾಗಲು ಕಾರಣವೇನು ?**

ಉ : ಪ್ರತ್ಯಕ್ಷಾದಿ ಪ್ರಮಾಣಗಳಾದ ಶ್ರೋತ್ರಾದಿ ಇಂದ್ರಿಯಗಳು ತಾವು ಯಾವ ಮಹಾ ಭೂತಗಳಿಂದ ಹುಟ್ಟಿರುವವೋ ಆಯಾ ಮಹಾ ಭೂತಗಳ ವಿಷಯಗಳಾದ ಶಬ್ದಾದಿ ವಿಷಯಗಳನ್ನು ಮಾತ್ರ ತಿಳಿಸಿಕೊಡುತ್ತವೆಯೇ ವಿನಃ ನಿರ್ವಿಷಯನಾದ ಆತ್ಮನನ್ನು ತಿಳಿಸಿಕೊಡಲಾರವು. ಏಕೆಂದರೆ ಆತ್ಮನು ಅಪ್ರಮೇಯನು. ಆದುದರಿಂದ ಆ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಆತ್ಮನು ದೊರೆಯಲಾರನು. ಈ ರೀತಿ ಪ್ರತ್ಯಕ್ಷಾದಿ ಪ್ರಮಾಣಗಳಾದ ಶ್ರೋತ್ರಾದಿ ಇಂದ್ರಿಯಗಳೂ, ಆ ಇಂದ್ರಿಯಗಳ ವಿಷಯಗಳಾದ ಶಬ್ದಾದಿಗಳೂ ಮತ್ತು ಅವುಗಳ ಗುಣಿಗಳಾದ ಆಕಾಶಾದಿ ಮಹಾ ಭೂತಗಳೂ ಇವೆಲ್ಲಾ ಸೇರಿ ಜಗತ್ತೆಂದೂ, ಬಂಧವೆಂದೂ, ಅನರ್ಥವೆಂದೂ ಕರೆಸಿಕೊಳ್ಳುತ್ತವೆ.

**ಪ್ರ : 2. ಈ ಅನರ್ಥರೂಪ ಬಂಧ ಅಥವ ಜಗತ್ತು ಕಾಣಿಸಿ ಕೊಳ್ಳಲು ಕಾರಣವೇನು ?**

ಉ : ಈ ಅನರ್ಥ ರೂಪಬಂಧವು ಕಾಣಿಸಿಕೊಳ್ಳಲು ಒಂದೇ ಒಂದು ಕಾರಣ ಅಜ್ಞಾನ.

**ಪ್ರ : 3. ಈ ಅಜ್ಞಾನವು ಹೇಗೆ ನಿವಾರಣೆಯಾಗುತ್ತದೆ.**

ಉ : ಈ ಅಜ್ಞಾನವು ಜ್ಞಾನ ಸೂರ್ಯನಿಂದಲೇ ನಿವಾರಣೆಯಾಗುತ್ತದೆ. ಆ ಜ್ಞಾನವು "ತತ್ತ್ವಮಸಿ" ಇತ್ಯಾದಿ ಮಹಾ ವಾಕ್ಯಗಳ ಶ್ರವಣದಿಂದಲೇ ಉದಯವಾಗುತ್ತದೆ. ಈ ವಿಷಯವು ಮೊದಲನೇ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿದೆ. ಆತ್ಮನು ನಮ್ಮ ಸ್ವರೂಪವೇ ಆಗಿದ್ದರೂ ಆ ಜ್ಞಾನವಾಗದೇ ಇರುವುದೂ ಅಜ್ಞಾನದಿಂದಲೆ.

**ಪ್ರ : 4. ಈ ಅಜ್ಞಾನಕ್ಕೆ ಕಾರಣವೇನು ?**

ಉ : ಈ ಅಜ್ಞಾನಕ್ಕೆ ಅವಿಚಾರವೇ ಕಾರಣ. ಶ್ರೀ ವಿದ್ಯಾರಣ್ಯಸ್ವಾಮಿಗಳು ಪಂಚದಶಿಯ ಧ್ಯಾನ ದೀಪದ 31 ನೆಯ ಶ್ಲೋಕದಲ್ಲಿ "ಅವಿಚಾರೋಽಪರೋಕ್ಷಸ್ಯ ಜ್ಞಾನಸ್ಯ ಪ್ರತಿಬಂಧಕ" ಆತ್ಮನ ಅಪರೋಕ್ಷ ಜ್ಞಾನವಾಗದೇ ಇರುವುದಕ್ಕೆ ಅವಿಚಾರವೇ ಪ್ರತಿಬಂಧಕವೆಂದು ಹೇಳಿದ್ದಾರೆ,

**ಪ್ರ : 5. ಈ ಅವಿಚಾರವು ಹೇಗೆ ನಿವಾರಣೆಯಾಗುತ್ತದೆ ?**

ಉ : ''ಅವಿಚಾರೇಣ ಕೃತೋಽಬಂಧಃ ವಿಚಾರೇಣನಿವರ್ತತೇ'' ಅವಿಚಾರದಿಂದ ಬಂದಿರುವ ಈ ಬಂಧವು ವಿಚಾರದಿಂದ ನಿವಾರಣೆಯಾಗುತ್ತದೆ. ಶ್ರೀ ವಿದ್ಯಾರಣ್ಯ ಸ್ವಾಮಿಗಳೂ ಅದೇ ಧ್ಯಾನದೀಪದ 30ನೇ ಶ್ಲೋಕದಲ್ಲಿ ''ಬ್ರಹ್ಮಸಾಕ್ಷಾತ್ಕೃತಿಸ್ತ್ವೇವಂ ವಿಚಾರೇಣ ವಿನಾನ್ಯಥಾ'' ಬ್ರಹ್ಮಸಾಕ್ಷಾತ್ಕಾರ ಅಥವಾ ಅಪರೋಕ್ಷಜ್ಞಾನವಾದರೋ ವಿಚಾರದಿಂದಲೇ ನಿವಾರಣೆಯಾಗುತ್ತದೆ ಎಂದು ಹೇಳಿದ್ದಾರೆ. ಆದುದರಿಂದ ವಿಚಾರವೇ ಬ್ರಹ್ಮಸಾಕ್ಷಾತ್ಕಾರಕ್ಕೆ ಮುಖ್ಯ ಸಾಧನ. ವಿಚಾರ ಮಾಡಲು ಶಕ್ತಿ ಇಲ್ಲದವರು ಮಾತ್ರ ಉಪಾಸನೆಗೆ ಅಧಿಕಾರಿಗಳು.

**ಪ್ರ : 6. ಉಪಾಸನೆಯನ್ನು ಯಾರು ಮಾಡಬೇಕು ?**

ಉ : ಯಾರ ಅಂತಃಕರಣದಲ್ಲಿ ಮಲ ವಿಕ್ಷೇಪ ದೋಷಗಳಿದ್ದು ಶ್ರವಣವು ಸರಿಯಾಗಿ ಅರ್ಥವಾಗುವುದಿಲ್ಲವೋ ಅವರು ಉಪಾಸನೆ ಮಾಡಬೇಕು. ಅವರಿಗೆ "ತತ್ತ್ವಂ" ಪದಗಳ ವಿಚಾರದಿಂದ ಅಪರೋಕ್ಷಜ್ಞಾನ ಉಂಟಾಗುವುದಿಲ್ಲ. ಈ ಕಾರಣದಿಂದ ಅಂತಹ ಚಿತ್ತಚಾಂಚಲ್ಯಉಳ್ಳವರು ಧ್ಯಾನ–ಜಪ–ತಪಗಳನ್ನು ಮಾಡಲೇಬೇಕು.

**ಪ್ರ : 7. ವಿಚಾರಕ್ಕೆ ಯೋಗ್ಯರು ಯಾರು ?**

ಉ : ಯಾರು ತಮ್ಮ ಅಂತಃಕರಣಲ್ಲಿರುವ ಮಲ, ವಿಕ್ಷೇಪ ದೋಷಗಳನ್ನು ಶ್ರೀ ಗುರುಪಾದ ಸೇವೆಯಿಂದಲಾಗಲೀ, ನಿಷ್ಕಾಮಕರ್ಮ ಮತ್ತು ಉಪಾಸನೆಯಿಂದಲಾಗಲೀ ಅಥವಾ ಶ್ರೋತ್ರೀಯ ಬ್ರಹ್ಮನಿಷ್ಠ ಮಹಾತ್ಮರ ವೇದಾಂತ ವಚನಗಳನ್ನು ಶ್ರವಣ ಮಾಡುವುದರಿಂದಲಾಗಲೀ ನಿವಾರಣೆ ಮಾಡಿಕೊಂಡು ಆವರಣ ದೋಷ ಒಂದಿದ್ದಾಗ ವಿಚಾರಮಾಡಲು ಅರ್ಹರಾಗುತ್ತಾರೆ. ಅಂಥಹ ಮುಮುಕ್ಷುಗಳು ಪುನಃ ಪುನಃ ವಿಚಾರಮಾಡಿ, ಅವಿಚಾರವನ್ನು ನಿವಾರಣೆ ಮಾಡಿಕೊಳ್ಳಬೇಕು.

**ಪ್ರ : 8. ಪುನಃ ಪುನಃ ಏಕೆ ವಿಚಾರಮಾಡಬೇಕು ? ಒಂದೇ ಸಾರಿ ವಿಚಾರಮಾಡಿದರೆ ಸಾಲದೆ ?**

ಉ : ಒಂದೇ ಸಾರಿ ವಿಚಾರ ಮಾಡಿದರೆ ಸಾಲದು. ಪುನಃ ಪುನಃ ವಿಚಾರಮಾಡಬೇಕು. ಶ್ರೀ ವಿದ್ಯಾರಣ್ಯ ಸ್ವಾಮಿಗಳು ಪಂಚದಶಿಯ ಧ್ಯಾನ ದೀಪದ 32 ನೆಯ ಶ್ಲೋಕದಲ್ಲಿ "ಅಪರೋಕ್ಷ್ಯಾವಸಾನತ್ವಾದ್ಭೂಯೋ ಭೂಯೋ ವಿಚಾರಯೇತ್" ವಿಚಾರ ಮಾಡಿದಾಗ್ಯೂ ಬ್ರಹ್ಮಸಾಕ್ಷಾತ್ಕಾರವಾಗದೆ ಇದ್ದರೆ ಅಪರೋಕ್ಷಜ್ಞಾನವೇ ವಿಚಾರಕ್ಕೆ ಗುರಿಯಾದುದರಿಂದ ಪದೇ ಪದೇ "ತತ್ತ್ವಂ" ಪದಾರ್ಥಗಳ ವಿಚಾರವನ್ನೇ ಮಾಡತಕ್ಕದೆಂದು ಹೇಳಿದ್ದಾರೆ.

**ಪ್ರ : 9. ಒಂದೇ ಸಾರಿ "ತತ್ತ್ವಂ" ಪದಾರ್ಥಗಳ ವಿಚಾರ ಮಾಡುವುದರಿಂದ ಬ್ರಹ್ಮ ಸಾಕ್ಷಾತ್ಕಾರ ಏಕೆ ಆಗುವುದಿಲ್ಲ ? ಮತ್ತು**

**ವಿಚಾರಮಾಡದೇ ವಾಮದೇವನು ಗರ್ಭದಲ್ಲಿದ್ದಾಗಲೇ ಅಪರೋಕ್ಷ ಜ್ಞಾನ ಪಡೆದನೆಂದು ಉಪನಿಷತ್ತು ಹೇಳುತ್ತಿದೆಯಲ್ಲಾ ?**

ಉ : ಹಿಂದಿನ ಜನ್ಮದಲ್ಲಿ ವಿಚಾರಮಾಡಿದ ಸಂಸ್ಕಾರದಿಂದ, ಆ ವಿಚಾರವು ಅಪರೋಕ್ಷಜ್ಞಾನವನ್ನು ಕೊಡಲು ಪೂರ್ಣವಾಗದೆಇರುವುದರಿಂದ ಮತ್ತೊಂದು ಜನ್ಮವನ್ನೆತ್ತಿದ್ದ ವಾಮದೇವನು ತಾನು ಗರ್ಭದಲ್ಲಿರುವಾಗಲೇ "ನಾನು ನನ್ನನ್ನು ತಿಳಿಯುತ್ತೇನೆ" ಎಂಬ ಬ್ರಹ್ಮ ಸಾಕ್ಷಾತ್ಕಾರ ರೂಪ ಅಪರೋಕ್ಷಜ್ಞಾನವನ್ನು ಹೊಂದಿದನೆಂದು ಉಪನಿಷತ್ತು ಹೇಳುತ್ತದೆಯೇ ವಿನಃ "ತತ್ತ್ವಂ" ಪದಗಳ ವಿಚಾರವಿಲ್ಲದೆ ಅಪರೋಕ್ಷ ಜ್ಞಾನವಾಯಿತೆಂದು ಎಲ್ಲಿ ಹೇಳಿದೆ ! ಹಿಂದಿನ ಜನ್ಮದಲ್ಲಿಯೇ ಬ್ರಹ್ಮ ಸಾಕ್ಷಾತ್ಕಾರ ಪಡೆಯಲು ಅವನಿಗೆ ಪ್ರತಿ ಬಂಧಗಳಿದ್ದವು. ಆ ಪ್ರತಿ ಬಂಧಕಗಳ ನಿವಾರಣೆಗಾಗಿ ಪುನಃ ಜನ್ಮ ಧರಿಸಬೇಕಾಯಿತು. ಆದುದರಿಂದ ಯಾರ ಅಂತಃಕರಣದಲ್ಲಿ ಪ್ರತಿಬಂಧಕಗಳಿರುವುವೋ ಅವರು ಪುನಃ ವಿಚಾರಮಾಡಲೇಬೇಕು.

**ಪ್ರ : 10. ಪ್ರತಿಬಂಧಕಗಳು ಯಾವುವು ?**

ಉ : ಭೂತ ಪ್ರತಿಬಂಧಕ, ವರ್ತಮಾನ ಪ್ರತಿಬಂಧಕ, ಭಾವೀ ಪ್ರತಿಬಂಧಕ, ಕುತರ್ಕ, ವಿಷಯಾಸಕ್ತಿ, ದಡ್ಡತನ, ವಿಪರೀತ ತಿಳುವಳಿಕೆ, ದುರಾಗ್ರಹ ಮತ್ತು ಶ್ರೀಗುರುಗಳ ಅಭಾವ. ಇವು ಒಂಬತ್ತು ಪ್ರತಿಬಂಧಕಗಳು. ಈ ಪ್ರತಿಬಂಧಕಗಳಲ್ಲಿ ಒಂದು ಇದ್ದರೂ ಅಪರೋಕ್ಷ ಜ್ಞಾನವಾಗಲಾರದು. ಆದ್ದರಿಂದ ಆ ಪ್ರತಿಬಂಧಕಗಳನ್ನು ಕಳೆಯಲು ಪದೇ ಪದೇ "ತತ್ತ್ವಂ" ಪದಾರ್ಥಗಳ ವಿಚಾರವನ್ನು ಆತ್ಮಸಾಕ್ಷಾತ್ಕಾರವಾಗುವವರೆಗೂ ಮಾಡುತ್ತಿರಬೇಕು. ಛಾಂದೋಗ್ಯ ಉಪನಿಷತ್ತಿನಲ್ಲಿ ಶ್ವೇತಕೇತುವಿಗೆ ಉದ್ದಾಲಕ ಮಹಾ ಮುನಿಯು ಈ ಒಂಬತ್ತು ಪ್ರತಿಬಂಧಕಗಳ ನಿವಾರಣೆಗೆ ಒಂಬತ್ತು ಸಾರಿ "ತತ್ತ್ವಮಸಿ" "ತತ್ತ್ವಮಸಿ" ಎಂದು ಉಪದೇಶಿಸಿರುತ್ತಾರೆ.

ಈ ಪ್ರತಿಬಂಧಕಗಳ ನಿವಾರಣೆಗಾಗಿ ವೇದಾಂತ ವಾಕ್ಯಗಳ ಶ್ರವಣ, ಮನನಗಳನ್ನು ಮಾಡುತ್ತಿರಬೇಕು.

**ಪ್ರ : 11. ಶ್ರವಣ ವೆಂದರೇನು ?**

ಉ : ವೇದಾಂತ ವಾಕ್ಯಗಳು ಆತ್ಮನನ್ನೇ ಬ್ರಹ್ಮವೆಂದು ತಿಳಿಸುತ್ತ ವೆಂದು ಪುನಃ ಪುನಃ ಕೇಳಿ ತಿಳಿದುಕೊಳ್ಳುವುದೇ ಶ್ರವಣ.

**ಪ್ರ : 12. ಮನನವೆಂದರೇನು ?**

ಉ : ಅನುಮಾನರೂಪ ತರ್ಕದಿಂದ ಜೀವಬ್ರಹ್ಮರ ಏಕತೆಯನ್ನು ಪುನಃ ಪುನಃ ವಿಚಾರಿಸಿ ತಿಳಿಯುವುದೇ ಮನನ.

ಹೀಗೆ ಈ ವಿಚಾರವನ್ನು ಆತ್ಮ ಸಾಕ್ಷಾತ್ಕಾರವಾಗುವವರೆಗೂ ಮಾಡುತ್ತಾ ಹೋಗಬೇಕು. ಶ್ರೀ ವಿದ್ಯಾರಣ್ಯಸ್ವಾಮಿಗಳು ಚಿತ್ರದೀಪ ವಿವೇಕದ 15ನೇ ಶ್ಲೋಕದಲ್ಲಿ"ತತ್ರಾಪರೋಕ್ಷ ವಿದ್ಯಾಪ್ತೌ ವಿಚಾರೋಽಯಂ ಸಮಾಪ್ಯತೇ'' ಅಪರೋಕ್ಷಜ್ಞಾನ ಪ್ರಾಪ್ತಿಯಾದನಂತರ ಈ ವಿಚಾರವು ಸಮಾಪ್ತಿಯನ್ನು ಹೊಂದುತ್ತದೆಂದು ಹೇಳಿದ್ದಾರೆ.

**ಪ್ರ : 13. "ಶ್ರೀ ಗುರು ವಚನೋಪದೇಶವನಾಲಿಸಿದಾಗಳೆ ಹುದು ನರರಿಗೆ ಮುಕುತಿ"ಎಂದು ಶ್ರೀ ನಿಜಗುಣ ಶಿವಯೋಗಿಗಳು ಹೇಳಿದ್ದಾರಲ್ಲ. ತತ್ತ್ವಂಪದಗಳ ವಿಚಾರಮಾಡಬೇಕೆಂದು ಹೇಳಿಲ್ಲ ವಲ್ಲಾ ?**

ಉ : ಅದು ಸರಿಯೆ. ಶ್ರೀ ಗುರುಗಳು "ತತ್ತ್ವಮಸಿ" ಮಹಾ ವಾಕ್ಯವನ್ನು ಉಪದೇಶಿಸಿದಕೂಡಲೇ ನರರಿಗೆ ಮುಕುತಿ ಎಂದು ಹೇಳಿದ್ದಾರೆಯೇ ವಿನಃ ವಾನರರಿಗೆ ಮುಕುತಿ ಎಂದು ಹೇಳಲ್ಲವಲ್ಲ !

**ಪ್ರ : 14. ಹಾಗಾದರೆ ನರರು ಯಾರು ?**

ಉ : ಯಾರು ಅಂತಃಕರಣದಲ್ಲಿರುವ ಮಲವಿಕ್ಷೇಪಗಳನ್ನು ಕಳೆದು ಕೊಂಡು ಆವರಣದೋಷ ಒಂದಿದ್ದಾಗ ಸಾಧನ ಚತುಷ್ಟಯ ಸಂಪನ್ನನಾಗಿ ಅಪರೋಕ್ಷಜ್ಞಾನಕ್ಕೆ ಅಡ್ಡಿಯಾದ ಪ್ರತಿಬಂಧಕಗಳನ್ನು ನಿವಾರಿಸಿಕೊಂಡು ಶ್ರೀ ಗುರುಗಳ ಸನ್ನಿಧಿಯನ್ನು ಸೇರಿ ಅವರ ಪಾದ ತಳದಲ್ಲಿ ಕುಳಿತು ಮಹಾ ವಾಕ್ಯ ವಿಚಾರಮಾಡಲು ಶಕ್ತಿವುಳ್ಳವನೇ ನರ. ಅಂತಹ ನರನಿಗೆ "ನೀನು ಬ್ರಹ್ಮ" ಎಂದು ಉಪದೇಶಮಾಡಿದಕೂಡಲೇ ಅಪರೋಕ್ಷಜ್ಞಾನವಾಗು ವುದು ಸಹಜವೆ.

ಆದುದರಿಂದ ಈ ಎರಡನೇ ಅಧ್ಯಾಯವು ''ತತ್ತ್ವಮಸಿ" ಮಹಾ ವಾಕ್ಯವನ್ನು ಕೇಳಿದಕೂಡಲೇ ಮೋಕ್ಷವಾಗ ವುದಿಲ್ಲ–ಅದಕ್ಕೆ ಕಾರಣ ಪ್ರತಿ ಬಂಧಕಗಳು–ಅಂತಹ ಪ್ರತಿಬಂಧಕಗಳನ್ನು ದೂರಮಾಡುವುದಕ್ಕಾಗಿಯೇ ಪ್ರಾರಂಭಿಸಲ್ಪಟಿದೆ ಎಲ್ಲಿಯುವರಗೆ "ತತ್ತ್ವಮಸಿ" ಮಹಾ ವಾಕ್ಯದಲ್ಲಿರುವ "ತ್ವಂ" ಪದದ ಅರ್ಥ ಸರಿಯಾಗಿ ತಿಳಿಯುವುದಿಲ್ಲವೋ ಅಲ್ಲಿಯವರೆಗೆ ಅಪರೋಕ್ಷ ಜ್ಞಾನವಾಗಲಾರದು ಸೂರ-ರುಸಾರಿ "ತತ್ತ್ವಮಸಿ" ಎಂದು ಹೇಳಿದರೂ ಕೇಳುವವನಿಗೆ ಯಾವ ಪ್ರಯೋಜನವೂ ಆಗಲಾರದು. ಸಂಸ್ಕೃತ ಅಧ್ಯಯನ ವಿಲ್ಲದ ಇಂಗ್ಲೀಷ್ ಅಧ್ಯಯನದ ಅಧಿಕಾರಿಯನು ಒಬ್ಬನು "ನೀನು ಮೂರ್ಖ" ಎಂದ ಆ ಮಾತು ಹೇಗೆ ಆ ಅಧಿಕಾರಿ ಯನ್ನು ಪರಿಣಾಮಾಡಲಾರದೋ ಹಾಗೆಯೇ ಈ "ತತ್ತ್ವಮಸಿ'' ಯಹ "ತ್ವಂ" ಪದದ ಅರ್ಥ ಗೊತ್ತಾಗದೆ ಹೋದಲ್ಲಿ ಯಾವ ಪರಿಣಾಮವನ್ನು ಉಂಟುಮಾಡಲಾರದು ಅಂದರೆ ಅಂತಃಕರಣಲ್ಲಿ ಪ್ರತಿಬಂಧಕಗಳಿದ್ದವ ರಿಗೆ ವಾಕ್ಯಶ್ರವಣವು ಪ್ರಯೋಜನವಾಗಲಾರದು ಎಂದು ಅರ್ಥ

**ಉದಾ :-** ಸಾಮಾನ್ಯವಾಗಿ ಸೂಜಿಗಲ್ಲಿಗೆ ಸೂಜಿಯನ್ನು ಆಕರ್ಷಿ ಸುವ ಶಕ್ತಿ ಇದೆ ಆ ಸೂಜಿಯು ತುಕ್ಕುಹಿಡಿದದ್ದರೆ ಆ ಸೂಜಿಗಲ್ಲು ಎಂತಹ ಉತ್ತಮವಾಗಿದ್ದರೂ ಆ ಸೂಜಿಯನ್ನು ಆಕರ್ಷಿಸಲಾರದು. ಇದು ಸೂಜಿಯ ದೋಷವೇ ವಿನಃ ಸೂಜಿಗಲ್ಲಿನ ದೋಷವಲ್ಲ ಅದರಂತೆ ಯಾರಿಗೆ ''ತತ್ತ್ವಮಸಿ'' ಮಹಾ ವಾಕ್ಯವನ್ನು ಬೋಧಿಸಿದರೂ ಅದರಲ್ಲಿರುವ ತತ್, ತ್ವಂ, ಅಸಿಗಳ ಅರ್ಥವು ಆಗದೆ ಹೋದಲ್ಲಿ ಯಾವ ಪ್ರಯೋಜನವೂ ಆಗಲಾ ರದು. ಯಾವ ಪ್ರಯೋಜನವೂ ಆಗದೆ ಇರುವುದು ಮಹಾ ವಾಕ್ಯದ ದೋಷವಲ್ಲ ಕೇಳುವವನ ದೋಷ ಆ ವಾಕ್ಯವನ್ನು ಕೇಳುವವನಿಗೆ ಮೊದಲು ಆ ಪದಗಳ ಅರ್ಥ ಆಗಿರಬೇಕು ಆಗಲೇ ಅದು ಪ್ರಯೋಜನ ವಾಗುವುದು

ಆ ದೃಷ್ಟಿಯಿಂದ ಆ "ತತ್ತ್ವಮಸಿ'' ಮಹಾ ವಾಕ್ಯದಲ್ಲಿರುವ 'ತ್ವಂ' ಪದದ ಅಂದರೆ "ನೀನು" ಎಂದರೆ ಏನು ? ಎಂಬ ವಿಷಯವನ್ನು ಈ ಅಧ್ಯಾಯದಲ್ಲಿ ಪ್ರತಿಪಾದನೆ ಮಾಡುತ್ತಾರೆ. ಅದಕ್ಕಾಗಿಯೇ ಈ ಅಧ್ಯಾ ಯವು ಪ್ರಾರಂಭವಾಗಿದೆ

ಸಾಮಾನ್ಯವಾಗಿ ನಾವು ಮಾತಾಡುವಾಗ, ಹೋಗುವಾಗ, ಬರುವಾಗ 'ನಾನು' 'ನೀನು' ಎಂಬ ಪದವನ್ನು ಬಳಸುತ್ತೇವೆ. ಈ 'ನಾನು' 'ನೀನು' ಎಂಬ ಪದಗಳು ಒಂದೆ. ಬೇರೆ ಬೇರೆ ಅಲ್ಲ. ಯಾವುದಕ್ಕೆ "ನಾನು" ಎನ್ನುತ್ತೇನೆಯೋ ಅದಕ್ಕೆ ಮತ್ತೊಬ್ಬ "ನೀನು" ಎನ್ನುತ್ತಾನೆ. ಹಾಗಾದರೆ ಈ 'ನಾನು' "ನೀನು" ಎಂಬ ಪದಗಳ ತಾತ್ಪರ್ಯವೇನು ? ದಾರಿ ನಡೆದ ಮನುಷ್ಯ 'ನಾನು ನಡೆದೆ' ಎನ್ನುತ್ತಾನೆ. ಆಗ "ನಾನು" ಎಂಬುದನ್ನು ಕಾಲಿನಲ್ಲಿ ಆರೋಪಮಾಡಿದ. "ನಾನು ಕೇಳಿದೆ" ಎಂದಾಗ ಆ 'ನಾನು' ಎಂಬುದನ್ನು ಕಿವಿಯ ಮೇಲೆ ಆರೋಪಮಾಡಿದ ಮಾತನಾಡುವಾಗ ಬಾಯಿಯೇ 'ನಾನು' ಆಗುತ್ತದೆ. ಯೋಚಿಸುವಾಗ ನಾನು ಯೋಚಿಸಿದೆ. ಆಗ ಆ "ನಾನು" ಎನ್ನುವುದು ಮನಸ್ಸಾಯಿತು. ನಾನು ನಿದ್ದೆ ಮಾಡಿದೆ. ಆಗ ಅಂತಃಕರಣವೇ "ನಾನು" ಎಂಬ ಪದಕ್ಕೆ ಅರ್ಥವಾಯಿತು. ಹಾಗಾದರೆ ಇಷ್ಟು ಅರ್ಥಗಳಲ್ಲಿ ಆ "ನಾನು" ಎಂಬ ಪದದ ನಿಜವಾದ ಅರ್ಥ ಯಾವುದು ? ಕಾಲು ನಾನೇ, ಕೈನಾನೆ, ಮನಸ್ಸು ನಾನೇ, ಅಂತಃಕರಣ ನಾನೇ ನಮಗೆ ಎಲ್ಲಾ ಪದಗಳ ಅರ್ಥವೂ ತಿಳಿದಿದೆ. ಆದರೆ ಪ್ರತಿಕ್ಷಣವೂ ಬಳಸುವ ಆ "ನಾನು" ಎಂಬ ಪದದ ಅರ್ಥವೇ ತಿಳಿದಿಲ್ಲ ಅರ್ಥವನ್ನು ತಿಳಿಯದೆಯೇ ಆಪದವನ್ನು ಬಳಸುತ್ತೇವೆ.

ಶ್ರೀ ಸುರೇಶ್ವರಾಚಾರ್ಯರು ಈ ಅಧ್ಯಾಯದಲ್ಲಿ "ನಾನು" ಎಂಬ ಪದದ ಅರ್ಥವನ್ನು ತಿಳಿಸಿಕೊಡುತ್ತಾರೆ. "ನಾನು" ಎಂಬ ಪದದ ಅರ್ಥವು ಸರಿಯಾಗಿ ತಿಳಿದಾಗಲೇ "ನಾನು ಬ್ರಹ್ಮನಿದ್ದೇನೆ" ಎಂಬ ಮಹಾವಾಕ್ಯವು ಅರ್ಥವಾಗುವುದು. ಮಹಾ ವಾಕ್ಯ ಪ್ರಮಾಣವಿಲ್ಲದೆ ಯಾರಿಗೂ ಆತ್ಮಸಾಕ್ಷಾತ್ಕಾರವಾಗಲಾರದು.

**ಪೂರ್ವಪಕ್ಷಿ:— ಉಪನಿಷತ್ತುಗಳಲ್ಲಿ ಮಹಾ ವಾಕ್ಯದ ಅಪೇಕ್ಷೆಯಿಲ್ಲದೇ ಆತ್ಮಸಾಕ್ಷಾತ್ಕಾರ ಪಡೆದವರ ಉದಾಹರಣೆಗಳು ಸಿಕ್ಕುತ್ತವೆ. ನೀವು, ಮಹಾ ವಾಕ್ಯದಿಂದಲೇ ಬ್ರಹ್ಮಸಾಕ್ಷಾತ್ಕಾರವಾಗುತ್ತದೆ ಎಂದು ಹೇಳುವಿರಿ. ಇದು ಪರಸ್ಪರ ವಿರೋಧವಾಗಲಿಲ್ಲವೆ !**

**ಉ :–** ಮಹಾ ವಾಕ್ಯದ ವಿನಃ ಯಾರಿಗೂ ಜ್ಞಾನವಾಗಿಯೇ ಇಲ್ಲವಲ್ಲ. ಹಾಗಾದರೆ ಮಹಾ ವಾಕ್ಯವಿಲ್ಲದೆ ಉಪನಿಷತ್ತಿನಲ್ಲಿ ಎಲ್ಲಿಎಲ್ಲಿ ಯಾರು ಯಾರು "ಜ್ಞಾನ ಪಡೆದಿರುತ್ತಾರೆ ?"

**ಪೂರ್ವಪಕ್ಷ :—** 1) ಬೃಹದಾರಣ್ಯಕೋಪನಿಷತ್ತಿನ 1 ನೇ ಅಧ್ಯಾಯದ 4 ನೇ ಅರಣ್ಯಕದ 2 ನೇ ಮಂತ್ರದಲ್ಲಿ "**ಯನ್ಮದನ್ಯನ್ನಾಸ್ತಿ ಕಸ್ಮಾನ್ನು ಬಿಭೇಮೀತಿ ತತ ಏವಸ್ಯ ಭಯಂ ವಿಹಾಯ**" ಪ್ರಜಾಪತಿಯು "ನನಗಿಂತ ಬೇರೆ ಯಾರೂ ಇಲ್ಲವೇ ಇಲ್ಲ, ನಾನು ಏತಕ್ಕೆ ಹೆದರುವೆನೋ ! ಎಂದುಕೊಂಡನು ; ಆದರಿಂದಲೇ ಅವನ ಭಯವು ಹೋಗಿ ಬಿಟ್ಟಿತು "ಮತ್ತು" **ಕಸ್ಮಾದ್ಧ್ಯಭೇಷ್ಯದ್ ದ್ವಿತೀಯಾದ್ವೈ ಭಯಂ ಭವತಿ**" ಅವನು ಏತಕ್ಕೆ ಭಯಪಟ್ಟನು ? ಎರಡನೆಯದರಿಂದಲೇ ಅಲ್ಲವೆ ಭಯವಾಗುತ್ತದೆ ? ಎಂದು ಹೇಳಿದೆ.

ಹೀಗೆ ತನಗಿಂತ ಬೇರೆ ವಸ್ತುವು ಇಲ್ಲವೇ ಇಲ್ಲವೆಂದು ತಿಳಿದುಕೊಂಡಕೂಡಲೇ ಅವನಭಯ ನಿವಾರಣೆಯಾಯಿತು. ಆ ಪ್ರಜಾಪತಿಗೆ, ಆದಿಪುರುಷನಿಗೆ ಮಹಾವಾಕ್ಯೋಪದೇಶವಿಲ್ಲದೆಯೇ ಜ್ಞಾನವಾಯಿತಲ್ಲ ! ಆ ವಿರಾಟ್ ಪುರುಷನಿಗೆ ಏಕತ್ವ ಜ್ಞಾನವು ಹೇಗೆ ಆಯಿತು? ಆ ಆದಿಪುರುಷನಿಗೆ ಮಹಾವಾಕ್ಯೋಪದೇಶವಿಲ್ಲದೇ ಜ್ಞಾನವು ಆಯಿತು ಎನ್ನುವುದಾದರೆ ನಮ್ಮಂತವರಿಗೂ ವಾಕ್ಯೋಪದೇಶವಿಲ್ಲದೆ ಹಾಗೆಯೇ ಜ್ಞಾನ ಆಗ ಬಹುದಲ್ಲ!

ಮತ್ತು "ಹಿಂದಿನ ಜನ್ಮದಿಂದಾದ ಸಂಸ್ಕಾರದಿಂದ ಅವನಿಗೆ ಈ ಜನ್ಮದಲ್ಲಿ ಜ್ಞಾನವಾಯಿತು" ಎನ್ನುವುದಾದರೆ ಹಿಂದಿನ ಜನ್ಮದಲ್ಲಾದ ಏಕತ್ವಜ್ಞಾನವು ವ್ಯರ್ಥವಾಯಿತು. ಆ ಮಹಾವಾಕ್ಯಾರ್ಥ ಏಕತ್ವ ಜ್ಞಾನದಿಂದ ಆತ್ಮ ಸಾಕ್ಷಾತ್ಕಾರವಾಗುವುದಿದ್ದರೆ ಹಿಂದಿನ ಜನ್ಮದಲ್ಲೇ ಆಗಬೇಕಾಗಿತ್ತು. ಮತ್ತು ಹಿಂದಿನ ಜನ್ಮದಲ್ಲಾದ ಏಕತ್ವಜ್ಞಾನವು ಅವಿದ್ಯೆಯನ್ನು ತೊಲಗಿಸಲು ಸಮರ್ಥವಾಗಲಿಲ್ಲ. ಆದ್ದರಿಂದಲೇ ಅವನು ಅವಿದ್ಯಾಯುಕ್ತನಾಗಿ ಹುಟ್ಟಿ ಅವನು ಭಯಪಟ್ಟನು. ಆ ಕಾರಣದಿಂದ ಮಹಾವಾಕ್ಯದ ಏಕತ್ವ ಜ್ಞಾನವು ವ್ಯರ್ಥವೇ ಆಯಿತು.

2) ಇನ್ನು ತೈತ್ತಿರೀಯೋಪನಿಷತ್ತಿನ ಭೃಗುವಲ್ಲಿಯಲ್ಲಿ ಭೃಗುವು ತನ್ನ ತಂದೆಯಾದ ವರುಣನನ್ನು "ಅಧೀಹಿ ಭಗವೋ ಬ್ರಹ್ಮೇತಿ" ಎಂದು ಪ್ರಶ್ನೆ ಮಾಡಿದನು. ತಂದೆಯು ಅವನಿಗೆ ಜಗದಾದಿ ಕಾರಣವನ್ನು ತಿಳಿಯಲು, ತಪಸ್ಸನ್ನು ಮಾಡಿ ಅದನ್ನು ತಿಳಿದಿಕೋ ಅದೇ ಬ್ರಹ್ಮ ಎಂದನು. ಆಗ ವಾರುಣಿಯು ತಂದೆ ಹೇಳಿದ ವಾಕ್ಯವನ್ನು ಸ್ಮರಣೆ ಮಾಡಿಕೊಂಡು ಮತ್ತೆ ಮತ್ತೆ ತಪಸ್ಸು ಮಾಡಿ ಆತ್ಮ ಸಾಕ್ಷಾತ್ಕಾರ ಪಡೆದುಕೊಂಡನಲ್ಲ. ಭೃಗುವು ಮಹಾವಾಕ್ಯವನ್ನು ಕೇಳಿಂಬೇ ಇಲ್ಲವಲ್ಲ.? ಆದುದರಿಂದ ಮಹಾವಾಕ್ಯೋಪದೇಶದಿಂದ ಆತ್ಮಸಾಕ್ಷಾತ್ಕಾರವೆಂಬ ನಿಮ್ಮ ಮಾತಿಗೆ ಬಲವಿಲ್ಲವಾಯಿತು.

3) ಛಾಂದೋಗ್ಯ ಉಪನಿಷತ್ತಿನಲ್ಲಿ ಉದ್ದಾಲಕ ಮುನಿಯು ತನ್ನ ಶಿಷ್ಯನೂ ಮಗನೂ ಆದ ಶ್ವೇತಕೇತುವಿಗೆ ಒಂಬತ್ತು ಸಾರಿ "ತತ್ತ್ವಮಸಿ ಉಪದೇಶಿಸಿದನು. ಈ ರೀತಿ ಶ್ವೇತಕೇತುವಿಗೆ ಮತ್ತೆ ಮತ್ತೆ ಯುಕ್ತಿಗಳನ್ನು ಹೇಳಿ ವಾಕ್ಯವನ್ನು ಸ್ಮರಣೆ ಮಾಡಿದ್ದರಿಂದ ಅವನಿಗೆ ಮುಕ್ತಿಯಾಯಿತು. ಅಂದರೆ ಮಹಾವಾಕ್ಯವನ್ನು ನೆನಪಿಗೆ ತಂದುಕೊಡುವುದೆಂದರೆ ಜ್ಞಾನಾಭ್ಯಾಸದಿಂದ ಶ್ವೇತಕೇತುವಿಗೆ ಮುಕ್ತಿಯಾಯಿತೇ ವಿನಃ ಮಹಾವಾಕ್ಯದಿಂದ ಮುಕ್ತಿಯಾಗಲಿಲ್ಲ. ಮಹಾವಾಕ್ಯ ಶ್ರವಣದಿಂದ ಮುಕ್ತಿ ಆಗುವುದಿದ್ದರೆ ಒಂದೇ ಸಾರಿ ಕೇಳಿದ್ದರೂ ಸಾಕಾಗಬೇಕಾಗಿತ್ತು. ಹಾಗೆ ಆಗಿಲ್ಲ. ಆದ್ದರಿಂದ ಮಹಾವಾಕ್ಯದಿಂದ ಬ್ರಹ್ಮ ಸಾಕ್ಷಾತ್ಕಾರವಾಗುವುದಿಲ್ಲ.

4) ಒಂದಾನೊಂದು ಕಾಡಿನಲ್ಲಿ ಪಿಶಾಚಕನೆಂಬುವನು ಸಹಜವಾಗಿಯೇ ಅಡ್ಡಾಡುತ್ತಿದ್ದ. ಒಬ್ಬ ಮಾಂತ್ರಿಕ "ತತ್ತ್ವಮಸಿ" ಎಂದ. ಆ ಮಹಾವಾಕ್ಯವು ಪಿಶಾಚಕನ ಅಂತಃಕರಣಕ್ಕೆ ಸೇರಿದಕೂಡಲೇ ಆ ಪಿಶಾಚಕನಿಗೆ ಬ್ರಹ್ಮಸಾಕ್ಷಾತ್ಕಾರವಾಗಿ ಮುಕ್ತಿಯಾಯಿತು.

ಈ ರೀತಿಯಿಂದ ಬ್ರಹ್ಮಸಾಕ್ಷಾತ್ಕಾರವು ಮಹಾವಾಕ್ಯದಿಂದಲೂ ಆಗಬಹುದು – ಮಹಾವಾಕ್ಯವಿಲ್ಲದೆಯೂ ಆಗಬಹುದು ಎಂಬುದು ಸ್ಪಷ್ಟವಾಯಿತು. ಮಹಾವಾಕ್ಯದಿಂದಲೇ ಬ್ರಹ್ಮಸಾಕ್ಷಾತ್ಕಾರವೆಂಬ ನಿಮ್ಮ ಮಾತಿಗೆ ಬಲವಿಲ್ಲವಾಯಿತು.

**ಸಿದ್ಧಾಂತಿಯ ಸಮಾಧಾನ**— ಮಹಾವಾಕ್ಯವಿಲ್ಲದೆ ಯಾರಿಗೂ ಜ್ಞಾನವಾಗಲಾರದು ಮೇಲೆ ಹೇಳಿದ ನಾಲ್ಕು ಜನರಿಗೂ ಮಹಾವಾಕ್ಯ ದಿಂದಲೇ ಜ್ಞಾನವಾಗಿರುವುದು.

1) ಆ ಪ್ರಜಾಪತಿಯು ಭಯಪಟ್ಟನು. ಪುರುಷವಿಧನಾದ, ಶರೀರಕರಣವಂತನಾದ ಆ ಪ್ರಜಾಪತಿಯು ತಾನು ನಾಶವಾಗುವನೆಂಬ ತಪ್ಪು ತಿಳುವಳಿಕೆ ಉಳ್ಳವನಾದ್ದರಿಂದ ಭಯಪಟ್ಟನು ಆತ್ಮನಿಗೆ ನಾಶವಿಲ್ಲ— ಶರೀರದ ನಾಶವನ್ನು ಆತ್ಮನಲ್ಲಿ ಆರೋಪಮಾಡಿದ ತಪ್ಪುತಿಳುವಳಿಕೆಯೇ ಅಂಜಿಕೆಗೆ ಕಾರಣವಾಗುತ್ತದೆ ಆ ತಪ್ಪುತಿಳುವಳಿಕೆಯೇ ಆ ವಿರಾಡಾತ್ಮನನ್ನು ಹೆದರಿಸಿತು ಈಗಲೂ ಒಂಟಿಗನು ಭಯಪಡುತ್ತಾನೆ ನಂತರ ವಿರಾಡಾತ್ಮನು ಇದ್ದದ್ದು ಇದ್ದಂತೆ ತಿಳಿಸುವ ಆತ್ಮದರ್ಶನದ ವಿಚಾರ ಮಾಡಿದನು ಅವನಿಗೆ ಭಯಬಂದದ್ದು ಅವಿಚಾರದಿಂದ, ಅದಕ್ಕೆ ವಿಚಾರದಿಂದ ಉತ್ಪತ್ತಿಯಾಗುವ ವಿದ್ಯೆಯೇ ನಿವೃತ್ತಿರೂಪವು ಹೀಗೆ ವಿಚಾರ ಮಾಡಿದನು "ನನಗಿಂತ ಭಿನ್ನವಾದ ಮತ್ತೊಂದು ವಸ್ತುವು ಇಲ್ಲವೇ ಇಲ್ಲವಲ್ಲ—ನಾನು ಏತಕ್ಕ ಹೆದರಬೇಕು" ಎಂದು ವಿಚಾರಮಾಡಿದನು. ಆಗ ಇದ್ದದ್ದು ಇದ್ದಂತೆಯೇ ಆತ್ಮದ ಏಕತ್ವವನ್ನು ತಿಳಿದುಕೊಂಡಿದ್ದರಿಂದಲೇ ಆ ಪ್ರಜಾಪತಿಗೆ ಭಯವು ಹೋಗಿಬಿಟ್ಟಿತು

ಇಲ್ಲಿ ಏಕತ್ವಜ್ಞಾನವೇ ಮಹಾವಾಕ್ಯದ ತಾತ್ಪರ್ಯವಾದುದರಿಂದ ಪ್ರಜಾಪತಿಗೆ ವಿಚಾರರೂಪ ಮಹಾವಾಕ್ಯದಿಂದಲೇ ಆತ್ಮಸಾಕ್ಷಾತ್ಕಾರವಾಯಿತು

2) ಭೃಗುವು ತಂದೆಯ ಉಪದೇಶವನ್ನು ಕೇಳಿ ವಿಚಾರಮಾಡ ಹತ್ತಿದನು ಅನ್ನ ರೂಪವಾದ ದೇಹಾದಿ ಪ್ರಪಂಚವು ಬ್ರಹ್ಮವ ? ಅಲ್ಲ ಏಕೆ ? ಅನ್ನಕ್ಕೆ ಉತ್ಪತ್ತಿನಾಶವಿದೆ. "ಯತೋವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ಪ್ರಯತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ । " ಯಾವುದರಿಂದ ಈ ಎಲ್ಲಾ ಪ್ರಾಣಿಗಳು ಹುಟ್ಟುತ್ತವೆಯೋ, ಹುಟ್ಟಿದ ಎಲ್ಲಾ ಭೂತಗಳು ಯಾವುದರಿಂದ ಜೀವಿಸುತ್ತವೆಯೋ ಯಾವುದನ್ನು ಕುರಿತು ಹೋಗುತ್ತ ಪ್ರವೇಶಿಸುವವೋ

ಅದನ್ನು ತಿಳಿದಿಕೋ; ಅದೇ ಬ್ರಹ್ಮ ಎನ್ನುವ ತನ್ನ ತಂದೆಯ ವಾಣಿಯನ್ನು ಕೇಳಿ ವಿಚಾರಿಸಿದ. ಅನ್ನದಿಂದ ಎಲ್ಲಾ ಪ್ರಾಣಿಗಳು ಹುಟ್ಟಿ, ಇದ್ದು, ಅದರಲ್ಲೇ ಪ್ರವೇಶಿಸುತ್ತವೆ. ಆದ್ದರಿಂದ 'ಅನ್ನ' ಬ್ರಹ್ಮವಾದೀತೇ ? ಇಲ್ಲ. ಏಕೆಂದರೆ- ಅನ್ನಕ್ಕೆ ಉತ್ಪತ್ತಿನಾಶಗಳಿವೆ. ಇನ್ನು ಪ್ರಾಣವು ಬ್ರಹ್ಮವಾದೀತೇ ? ಎಂದು ವಿಚಾರ ಮಾಡಿದ. ಪ್ರಾಣವೂ ಉತ್ಪತ್ತಿನಾಶಗಳುಳ್ಳದ್ದು—ಅದೂ ಬ್ರಹ್ಮವಾಗಲಾರದು. ಮನಸ್ಸು ಉತ್ಪತ್ತಿನಾಶಗಳುಳ್ಳದ್ದು. ಆದ್ದರಿಂದ ಮನಸ್ಸು ಬ್ರಹ್ಮವಲ್ಲ ಎಂದು ತೀರ್ಮಾನಿಸಿದ- ಇನ್ನು ಬುದ್ಧಿಯೂ ಒಂದುಕಾಲದಲ್ಲಿದ್ದು ಮತ್ತೊಂದು ಕಾಲದಲ್ಲಿ ಇರಲಾರದು ಆದೂ ಬ್ರಹ್ಮವಲ್ಲ. ಇವೆಲ್ಲಕ್ಕೂ ಕಾರಣವಾದ ಆನಂದವು ಬ್ರಹ್ಮವಾದೀತೇ ? ಆನಂದವೂ ಸಹ ಪ್ರಿಯ, ಮೋದ, ಪ್ರಮೋದ ರೂಪದಿಂದ ಇರುವುದರಿಂದ ಅದಕ್ಕೂ ಹುಟ್ಟು,ಸಾವುಗಳಿವೆ. ಎಂದು ವಿಚಾರಮಾಡಿದ, ಇವೆಲ್ಲ ಪದಾರ್ಥಗಳಿಗೂ ಇರುವಿಕೆಗೆ "ನಾನೇ" ಕಾರಣ. ಹಗ್ಗದ ಇರುವಿಕೆಯಿಂದಲೇ ಸರ್ಪವು ಹುಟ್ಟಿ, ಇದ್ದು ಹಗ್ಗದ ಜ್ಞಾನದ ನಂತರ ಸರ್ಪವೂ ನಾಶವಾಗುವಂತೆ ಈ ಎಲ್ಲಾ ಭೂತಗಳೂ ನನ್ನ ಅಧಿಷ್ಠಾನದಲ್ಲಿ, ನನ್ನನ್ನು ನಾನು ತಿಳಿಯದಿರುವ ಅಜ್ಞಾನದಿಂದ ಹುಟ್ಟಿದಂತೆ-ಇರುವಂತೆ - ಲಯವಾಗುವಂತೆ ಕಾಣುತ್ತವೆ. ಆದ್ದರಿಂದ ಇರುವುದು ಒಂದೇ ವಸ್ತು "ಅದೇ ನಾನು—ಅದೇ ಬ್ರಹ್ಮ" ಎಂದು ಭೃಗುವು ವಿಚಾರಮಾಡಿ ಆತ್ಮ ಸಾಕ್ಷಾತ್ಕಾರ ಪಡೆದನು. ಅವನು ತನ್ನ ತಂದೆಯನ್ನು ಕೇಳಿದ್ದು "ಬ್ರಹ್ಮ"ವನ್ನು ತೋರಿಸೆಂದು; ಅದಕ್ಕೆ ಉತ್ತರವಾಗಿ ದೊರೆತಿದ್ದು "ನಾನು". ಆದ್ದರಿಂದ ಯಾವುದಕ್ಕೆ 'ನಾನು' ಎನ್ನುತ್ತೇನೆಯೋ ಅದೇ ಬಾಧ ಸಾಮಾನಾಧಿಕರಣ್ಯದಿಂದ ಬ್ರಹ್ಮ ಎಂದು ತಿಳಿದನು.

ಇಲ್ಲಿ ಭೃಗುವು "ಅಹಂ ಬ್ರಹ್ಮ" ಎಂದು ತಿಳಿದುಕೊಂಡಿದ್ದು ಮಹಾವಾಕ್ಯದಿಂದಲ್ಲವೆ ! ಅದನ್ನೇ ವಿಚಾರಮಾಡಿ ಆತ್ಮ ಸಾಕ್ಷಾತ್ಕಾರ ಪಡೆದನು. ಆದ್ದರಿಂದ ಮಹಾವಾಕ್ಯವಿಲ್ಲದೆ ಯಾರಿಗೂ ಅಪರೋಕ್ಷಜ್ಞಾನವಾಗಲಾರದು.

3) ಇನ್ನು ಶ್ವೇತಕೇತುವಿಗೆ ವಾಕ್ಯ ಸ್ಮರಣೆಯಿಂದಲೇ ಅಪರೋಕ್ಷ ಜ್ಞಾನವಾಯಿತು—ಎಂದು ಹೇಳಿದಾಕ್ಷಣ ಮಹಾ ವಾಕ್ಯವೇ ಅನಾವಶ್ಯಕ

ವೆಂದು ಹೇಳಿದಂತಾಯಿತೇ! ಮಹಾವಾಕ್ಯವನ್ನು ಮೊದಲು ಕೇಳಿದ ಮೇಲಲ್ಲವೇ ಅದರ ಸರ್ಮೃಣೆ. ಅವನ ಅಂತಃಕರಣದಲ್ಲಿರುವ ಪ್ರತಿಬಂಧಕಗಳ ನಿವಾರಣೆಗಾಗಿ ಯುಕ್ತಿಯಿಂದ ಪದೇ ಪದೇ "ತತ್ತ್ವಮಸಿ" "ತತ್ತ್ವಮಸಿ" ಎಂದು ಉಪದೇಶಮಾಡಲಾಗಿದೆ. ಇಲ್ಲಿ ಮಹಾವಾಕ್ಯವನ್ನು ಅನೇಕ ಸಾರಿ ಹೇಳಿರುವುದು ಪ್ರಾಸಾಂಖ್ಯಾನರು ಹೇಳುವಂತಹ ಜ್ಞಾನಾಭ್ಯಾಸವಲ್ಲ. ಆದ್ದರಿಂದ ಮಹಾವಾಕ್ಯದಿಂದಲೇ ಅಪರೋಕ್ಷ ಜ್ಞಾನವಾದೀತೇ ವಿನಃ ಮತ್ತಾವುದರಿಂದಲೂ ಆಗಲಾರದು. ಆದ್ದರಿಂದ ಅಪರೋಕ್ಷ ಬ್ರಹ್ಮಜ್ಞಾನಕ್ಕೆ ಮಹಾವಾಕ್ಯವೇ ಪ್ರಮಾಣ. ಅಪರೋಕ್ಷ ಬ್ರಹ್ಮಜ್ಞಾನಕ್ಕೆ ಪ್ರತ್ಯಕ್ಷಾದಿ ಪ್ರಮಾಣಗಳು ಪ್ರಮಾಣಗಳಾಗಲಾರವು; ಮಹಾವಾಕ್ಯವೇ ಪ್ರಮಾಣ ವಾಗುತ್ತದೆ.

**ಪ್ರ : 15. ಪ್ರಮಾಣವೆಂದರೇನು ?**

ಉ : ಪ್ರ+ಮಾಣ–ಮಾನ ಎಂದರೆ ಅಳತೆಮಾಡುವ ಸಾಧನವೆಂದು ಅರ್ಥ. ಪ್ರಮಾಣವೆಂದರೆ ಸರಿಯಾಗಿ ಅಳೆಯುವ ಸಾಧನವೆಂದು ತಿಳಿದು ಬರುತ್ತದೆ. ಯಾವುದಾದರೊಂದು ವಸ್ತುವನ್ನು ಅಳತೆ ಮಾಡುವುದೆಂದರೆ ಅದನ್ನು ಸರಿಯಾಗಿ ಅರಿತುಕೊಳ್ಳುವುದೆಂದು ಅರ್ಥ. ಪ್ರಮಾಣವೆಂದರೆ ಸರಿಯಾದ ತಿಳುವಳಿಕೆಯನ್ನುಂಟುಮಾಡುವುದಕ್ಕೆ ಅವಶ್ಯವಾಗಿ ಬೇಕಾಗುವ ಸಾಧನವೆಂದು ಹೇಳಬಹುದು.

**ಪ್ರ : 16. ಆ ರೀತಿ ಸರಿಯಾದ ತಿಳುವಳಿಕೆಯನ್ನುಂಟು ಮಾಡುವ ಸಾಧನಗಳೆಷ್ಟು ?**

ಉ : ಆ ಪ್ರಮಾಣಗಳು ಆರು. 1) ಪ್ರತ್ಯಕ್ಷ 2) ಅನುಮಾನ 3) ಶಬ್ದ 4) ಉಪಮಾನ 5) ಅರ್ಥಾಪತ್ತಿ 6) ಅನುಪಲಬ್ಧಿ. ಇವುಗಳಲ್ಲಿ ಚಾರ್ವಾಕರಿಗೆ ಪ್ರತ್ಯಕ್ಷ ಪ್ರಮಾಣವೂ, ಬೌದ್ಧ ವೈಶೇಷಿಕರಿಗೆ ಪ್ರತ್ಯಕ್ಷ ಅನುಮಾನವೂ ಸಾಂಖ್ಯ ಮತ್ತು ನೈಯಾಯಿಕರಿಗೆ ಪ್ರತ್ಯಕ್ಷ, ಅನುಮಾನ, ಶಬ್ದವೂ; ಮತ್ತೆ ಕೆಲವು ನೈಯಾಯಿಕರಿಗೆ ಪ್ರತ್ಯಕ್ಷ ಅನುಮಾನ ಶಬ್ದ ಮತ್ತು ಉಪಮಾನವೂ;ಪ್ರಭಾಕರ ಮೀಮಾಂಸಕರಿಗೆ ಪ್ರತ್ಯಕ್ಷ ಅನುಮಾನ ಶಬ್ದ ಉಪಮಾನ ಅನುಪಮಲಬ್ಧಿಯೂ, ಭಾಟ್ಟ ಮೀಮಾಂಸಕರಿಗೆ ಹಾಗೂ ವೇದಾಂತಿಗಳಿಗೆ ಆರೂ ಪ್ರಮಾಣಗಳೂ ಸಮ್ಮತವಾಗಿವೆ.

**ಪ್ರ : 17. ಈ ಪ್ರಮಾಣಗಳ ವೈಶಿಷ್ಟ್ಯವೇನು ?**

ಉ : ಒಂದೊಂದು ಪ್ರಮಾಣದಿಂದ ಒಂದೊಂದೇ ತರಹದ ವಸ್ತುವಿನ ಜ್ಞಾನವಾಗುತ್ತದೆ. ಒಂದು ತರಹದ ವಸ್ತುವಿನ ಜ್ಞಾನವು ಎರಡು ಪ್ರಮಾಣಗಳಿಂದಾಗುವುದಿಲ್ಲ. ಒಂದೊಂದು ಪ್ರಮಾಣಕ್ಕೆ ಒಂದೊಂದು ವೈಶಿಷ್ಟ್ಯವಿರುತ್ತದೆ. ಎರಡನೆಯ ಯಾವ ಪ್ರಮಾಣದಿಂದಲೂ ತಿಳಿಯುದಿರುವ ಜ್ಞಾನವನ್ನು ಸರಿಯಾಗಿ, ನಿಶ್ಚಯವಾಗುವಂತೆ ಮತ್ತು ಯಾವುದೇ ತರಹದ ಸಂಶಯವುಳಿಯದಂತೆ ಮಾಡಿಕೊಡುವ ಸಾಧನವೇ ಪ್ರಮಾಣ. ಒಂದು ಪ್ರಮಾಣವು ತಾನು ಮಾಡಿಕೊಡುವ ವಸ್ತುವಿನ ಜ್ಞಾನಕ್ಕೆ ಮತ್ತೊಂದು ಪ್ರಮಾಣವನ್ನು ಅಪೇಕ್ಷಿಸುವುದಿಲ್ಲ. ಹೀಗೆ ಅದು ಮತ್ತೊಂದು ಪ್ರಮಾಣದ ಸಹಾಯವನ್ನು ಅಪೇಕ್ಷಿಸಿದರೆ ಅದು ಪ್ರಮಾಣವೇ ಆಗಲಾರದು. ಮತ್ತು ಒಂದು ಪ್ರಮಾಣದಿಂದಾಗುವ ಜ್ಞಾನಕ್ಕೆ ಆ ಪ್ರಮಾಣವನ್ನು ಮತ್ತೆ ಮತ್ತೆ ಉಪಯೋಗಿಸುವ ಅಗತ್ಯತೆಯೂ ಇರುವುದಿಲ್ಲ. ಆಯಾ ಪ್ರಮಾಣದಿಂದ ಆಯಾ ವಸ್ತುವಿನ ಜ್ಞಾನವು ಒಂದೇ ಸಾರಿಗೆ ಆಗಬೇಕು ಮತ್ತು ಯಾವ ಪ್ರಮಾಣವೂ ಬರೀ ಅಭ್ಯಾಸದಿಂದ ವಸ್ತುಗಳ ನಿಜವಾದ ಜ್ಞಾನವನ್ನು ಹುಟ್ಟಿಸಲಾರದು. ಹೀಗೆ ಒಂದೊಂದೇ ಪ್ರಮಾಣದಿಂದ ಒಂದೊಂದೇ ತರಹದ ವಿಷಯ ಜ್ಞಾನವಾಗುವುದಕ್ಕೆ ಪ್ರಮಾಣ ವ್ಯವಸ್ಥೆ ಎಂದು ಹೆಸರು. ಆದುದರಿಂದ ಎರಡು ಪ್ರಮಾಣಗಳಲ್ಲಿ ವಿರೋಧವಾಗುವುದೇ ಇಲ್ಲ.

**ಉದಾ :-** ಕಣ್ಣು ರೂಪವನ್ನು ನೋಡುತ್ತದೆ. ಈ ರೂಪವನ್ನು ನೋಡುವ ಕೆಲಸವನ್ನು ಮತ್ತೆ ಯಾವ ಇಂದ್ರಿಯವೂ ಮಾಡಲಾರದು. ಮತ್ತು ಈ ಕಣ್ಣು ರೂಪವನ್ನು ನೋಡಿ ಅದರಲ್ಲಿ ಸಂಶಯ ಬಂದಾಗ ಮತ್ತೊಂದು ಪ್ರಮಾಣವನ್ನು ಉಪಯೋಗಿಸಿಕೊಂಡು ರೂಪವನ್ನು ಸಂಶಯ ವಿಲ್ಲದಂತೆ ಮಾಡಲಾರದು. ಹೀಗೆ ರೂಪವನ್ನು ನೋಡುವ ವಿಷಯದಲ್ಲಿ ಅದು ಮತ್ತೊಂದು ಪ್ರಮಾಣದ ಸಹಾಯವನ್ನು ಅಪೇಕ್ಷಿಸಿದರೆ ಅದು ಪ್ರಮಾಣವೇ ಆಗಲಾರದು. ಕಣ್ಣು ಒಂದು ರೂಪವನ್ನು ಒಂದು ಸಾರಿ ನೋಡಿದರೆ ಸಾಕು. ಪುನಃ ಪುನಃ ನೋಡಬೇಕೆಂಬ ನಿಯಮವಿಲ್ಲ. ಆದುದರಿಂದ ಕಣ್ಣು ಸಹ ರೂಪನೋಡಲು ಪ್ರಮಾಣವೆನಿಸಿಕೊಳ್ಳುತ್ತದೆ.

**ಪ್ರ : 18 ಆತ್ಮನು ಈ ರೀತಿ ಪ್ರಮಾಣಕ್ಕೆ ಗೋಚರನಾಗಲಾರನೆ ?**

ಉ. ಆತ್ಮನು ಈ ಪ್ರತ್ಯಕ್ಷಾದಿ ಆರೂ ಪ್ರಮಾಣಕ್ಕೂ ಗೋಚರನಾಗಲಾರನು ಪ್ರತ್ಯಕ್ಷಾದಿಗಳು ನನಗಿಂತ ಭಿನ್ನವಾದ, ಹೊರಗಿರುವ ವಿಷಯಗಳನು ಮಾತ್ರ ಗ್ರಹಿಸಬಲ್ಲವು ಮತ್ತು ಈ ಪ್ರಮಾಣಗಳೆಲ್ಲಾ ಪ್ರಮಾತೃವಿನ ಇಚ್ಛಾ ಪೂರ್ತಿಗಾಗಿಯೇ ಉಪಯೋಗಿಸಲ್ಪಡುತ್ತವೆ ಆತ್ಮನಾದರೂ ಜ್ಯೋತಿ ಸ್ವರೂಪನು ಮತ್ತೊಂದು ಜ್ಯೋತಿಯಿಂದ ಬೆಳಗಿಸಿಕೊಳ್ಳುವವನಲ್ಲ, ಸ್ವತಃ ಸಿದ್ಧನು, ಅಪರೋಕ್ಷನು, ಹಾಗೂ ಅಪ್ರಮೇಯನು ಈ ಭೌತಿಕವಾದ ಆರೂ ಪ್ರಮಾಣಗಳು ಭೌತಿಕವಾದ ಪದಾರ್ಥಗಳನ್ನು ಮಾತ್ರ ಅರಿಯ ಬಲ್ಲವು ಆ ಭೌತಿಕವಾದ ಪ್ರಮಾಣಗಳಿಗೆ ಬೇರೆ ವಸ್ತುಗಳನ್ನು ಅರಿಯುವ ಶಕ್ತಿಯನ್ನು ಕೊಟ್ಟರವನು ಅವನ ಆದುದರಿಂದ ಇಕ್ಕಳವನ್ನು ಹಿಡಿದ ಕಮ್ಮಾರನನ್ನು ಇಕ್ಕಳವು ತಿರುಗಿ ಕಮ್ಮಾರನನ್ನು ಹಿಡಿಯದೆ ಕಮ್ಮಾರನ ಅಪೇಕ್ಷೆಯಂತೆ ಮುಂದಿನ ಕಬ್ಬಿಣದ ಚೂರುಗಳನ್ನೇ ಹಿಡಿಯುವಂತೆ ಈ ಪ್ರತ್ಯಕ್ಷಾದಿ ಪ್ರಮಾಣಗಳು ಆತ್ಮನ ಸಹಾಯದಿಂದ ತಮ್ಮ ಮುಂದಿನ ವಸ್ತುವನ್ನ ಮಾತ್ರ ತಿಳಿಯಬಲ್ಲವು ಹಿಂದಿರುಗಿ ಆತ್ಮನನ್ನು ತಿಳಿಯಲಾರವು ಆದುದರಿಂದ ಈ ಆರೂ ಪ್ರಮಾಣಗಳು ಆತ್ಮನನ್ನು ಅರಿಯಲಾರವು

**ಪ್ರ : 19 ಹಾಗಾದರೆ ನಾವು ಆತ್ಮನನ್ನು ಹೇಗೆ ತಿಳಿಯಬೇಕು ?**

ಉ ಆತ್ಮ ಜ್ಞಾನಕ್ಕೆ ವೇದಾಂತ ಅಥವಾ ಉಪನಿಷತ್ತು, ಭಗವದ್ಗೀತೆ, ಬ್ರಹ್ಮಸೂತ್ರಗಳನ್ನೇ ಶರಣುಹೊಗಬೇಕು ಇವು ಉಳಿದ ಯಾವ ಪ್ರಮಾಣಗಳ ಸಹಾಯವನ್ನೂ ಅಪೇಕ್ಷಿಸದೆ ಆತ್ಮಜ್ಞಾನವನ್ನು ಮಾಡಿಕೊಡುವುವು ಆತ್ಮಜ್ಞಾನಕ್ಕೆ ಅವೇ ಪ್ರಮಾಣಗಳು

**ಪ್ರ : 20 ಈ ವೇದಾಂತಗಳೂ ಪ್ರಮಾಣಗಳೆ. ಆದರೆ ಇವು ಆತ್ಮಜ್ಞಾನವನ್ನು ಮಾಡುತ್ತವೆಂದರೆ ಆತ್ಮನೂ ಪ್ರಮೇಯನಾದನಲ್ಲವೆ. ನೀವು ಹಿಂದೆ ಆತ್ಮನು ಅಪ್ರಮೇಯನೆಂದು ಹೇಳಿದಿರಲ್ಲಾ ?**

ಉ : ವೇದಾಂತಗಳೂ ಆತ್ಮಜ್ಞಾನವನ್ನು ಮಾಡಿಕೊಡುತ್ತವೆಂದು ಹೇಳಿರುವ ಮಾತಾದರೂ ಉಪಚಾರಕ್ಕಾಗಿಯೇ ಹೇಳಿದೆ. ಜ್ಞಾನರೂಪನಾದ ಆತ್ಮನು ನಮ್ಮ ಸ್ವರೂಪವೇ ಆಗಿದ್ದಾನೆ. ಅವನ ಬಗ್ಗೆ ನಮಗೆ ಹೊಸ ಜ್ಞಾನವಾದರೂ ಆಗಬೇಕಾದ ಅಗತ್ಯತೆಯಿಲ್ಲ ಅಂದರೆ ಆ ವೇದಾಂತಗಳು ಆತ್ಮನ ಬಗ್ಗೆ ಇರುವ ಅಜ್ಞಾನವನ್ನು ಮಾತ್ರ ನಿವಾರಣೆಮಾಡುವ ಕೆಲಸವನ್ನು ಮಾತ್ರ ಮಾಡುತ್ತವೆ. ಆದುದರಿಂದ ಉಪಚಾರಕ್ಕಾಗಿ ಆ ವೇದಾಂತಗಳು ಆತ್ಮಜ್ಞಾನ ಮಾಡಿಕೊಡುತ್ತವೆಂದು ಹೇಳಲಾಗಿದೆ.

ಆದುದರಿಂದ ವೇದಾಂತ ವಾಕ್ಯಗಳೂ ಪ್ರಮಾಣಗಳೆನಿಸಿಕೊಂಡಿವೆ. ಅವು ಮತ್ತಾವ ಪ್ರಮಾಣದಿಂದಲೂ ಆಗದ ಅಪರೋಕ್ಷ ಜ್ಞಾನವನ್ನು ಮಾಡಿಕೊಡುತ್ತವೆ. ಇದಕ್ಕಾಗಿ ಮತ್ತೆಯಾವ ಪ್ರಮಾಣದ ಸಹಾಯವನ್ನು ಅಪೇಕ್ಷಿಸುವುದಿಲ್ಲ. ಅಂತಹ ಪರಮ ಪುರುಷಾರ್ಥವನ್ನು ಈ ವೇದ ಪ್ರಮಾಣವು ಮಾಡಿಕೊಡುತ್ತದೆ.

**ಪ್ರ : 21. ಪುರುಷಾರ್ಥವೆಂದರೇನು ?**

ಉ : ಪುರುಷನ ಇಚ್ಛೆಗೆ ಯಾವುದು ವಿಷಯವೋ ಅದು ಪುರುಷಾರ್ಥ.

**ಪ್ರ : 22. ಪುರುಷನು ಯಾರು ?**

ಉ : ಪುರದಲ್ಲಿ ಪೂರ್ಣನಾಗಿರುವವನೇ ಪುರುಷ.

**ಪ್ರ : 23. ಪುರ ಯಾವುದು ?**

ಉ : "ನವದ್ವಾರೇ ಪುರೇ ದೇಹೀ" ಒಂಬತ್ತು-ದ್ವಾರಗಳಿರುವ ಈ ದೇಹವೇ ಪುರ ಅದರಲ್ಲಿ ಪರಿಪೂರ್ಣನಾಗಿ ನಖಶಿಖಾಂತದವರೆಗೆ ತುಂಬಿರುವವನೇ ಪುರುಷ.

**ಪ್ರ : 24. ಪುರುಷನ ಇಚ್ಛೆಯಾವುದು ?**

ಉ : ಸರ್ವದುಃಖಗಳ ಅತ್ಯಂತ ನಿವೃತ್ತಿ ಪರಮಾನಂದ ಪ್ರಾಪ್ತಿಯೇ ಪುರುಷನ ಇಚ್ಛೆ. 'ನಾನು' ಈ ದುಃಖ ರೂಪವಾದ ದೇಹವಾಗಲೀ ಇಂದ್ರಿಯಗಳಾಗಲೀ, ಚಿದಾಭಾಸನಾಗಲೀ ಅಲ್ಲವೇ ಅಲ್ಲ.

"ನಾನು ಇವೆಲ್ಲವುಗಳಿಗೂ ಶಕ್ತಿಕೊಟ್ಟಿರುವವನು" ಎಂಬುದನ್ನು ತಿಳಿದು ಕೊಂಡರೆ ದುಃಖದ ನಿವೃತ್ತಿಯೂ 'ನಾನು' ನಿರ್ವಿಕಾರಿ ಎಂದು ತಿಳಿಯುವು ದರಿಂದ ಆನಂದ ಸ್ವರೂಪನೆಂದು ತಿಳುವಳಿಕೆಯೂ ಆಗುತ್ತದೆ.

**ಪ್ರ : 25. ಇಂತಹ ತಿಳುವಳಿಕೆ ಹೇಗೆ ಹುಟ್ಟುತ್ತದೆ ?**

ಉ : ಈ ಸಂಸಾರವೇ ದುಃಖರೂಪವಾದದು, ಎಂದು ತಿಳಿಯದ ವನಿಗೆ ಈ ಸಂಸಾರದಿಂದ ಬೇಸರವೇ ಆಗುವುದಿಲ್ಲ. ಆಗ ಅವನಿಗೆ ಸಂಸಾ ರದಿಂದ ತಪ್ಪಿಸಿಕೊಳ್ಳಬೇಕೆಂಬ ಇಚ್ಛೆಯೇ ಆಗುವುದಿಲ್ಲ. ಸಂಸಾರದಿಂದ ತಪ್ಪಿಸಿಕೊಳ್ಳಬೇಕೆಂಬ ಇಚ್ಛೆಯಿಲ್ಲದವನಿಗೆ ಮೋಕ್ಷ ಪಡೆಯಬೇಕೆಂಬ ಮುಮುಕ್ಷುತ್ವವೇ ಉಂಟಾಗುವುದಿಲ್ಲ. ಇದನ್ನೇ ಶ್ರೀ ಶಂಕರಾಚಾರ್ಯರು ವಿವೇಕ ಚೂಡಾಮಣಿಯಲ್ಲಿ"**ಮುಕ್ತಿರ್ನೋ ಶತಕೋಟಿ-ಜನ್ಮಸುಕೃತೈಃ ಪುಣ್ಯೈರ್ವಿನಾಲಭ್ಯತೇ** " ಮುಕ್ತಿಯು ಶತಕೋಟಿ ಜನ್ಮಗಳಲ್ಲಿ ಸಂಪಾ ದಿಸಿದ ಪುಣ್ಯವಿಲ್ಲದೆ ಲಭಿಸುವುದಿಲ್ಲವೆಂದು ಹೇಳಿದ್ದಾರೆ. ಆದ್ದರಿಂದ ಮೋಕ್ಷದ ಹಂಬಲವು ಸರ್ವರಿಗೂ ಹುಟ್ಟಲಾರದು. ಆದ್ದರಿಂದಲೇ ಭಗ ವಂತನು ಗೀತೆಯಲ್ಲಿ " **ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।** " ಸಹಸ್ರಾರು ಮನುಷ್ಯರಲ್ಲಿ ಆತ್ಮಸಾಕ್ಷಾತ್ಕಾರಕ್ಕಾಗಿ ಯಾವನೋ ಒಬ್ಬನು ಪ್ರಯತ್ನಿಸುತ್ತಾನೆ ಎಂದಿದ್ದಾನೆ. ಯಾರು ಈ ರೀತಿ ಆತ್ಮಸಾಕ್ಷಾತ್ಕಾರ ಬಯಸುತ್ತಾರೋ ಅವನೇ ಮುಮುಕ್ಷು. ಯಾವನು ಮೋಕ್ಷವನ್ನೇ ಬಯಸುವುದಿಲ್ಲವೋ ಅವನು ಶ್ರೀ ಗುರುವನ್ನು ಸಮೀಪಿಸಲಾ ರನು. ಯಾರು ಶ್ರೀ ಗುರುವನ್ನು ಸಮೀಪಿಸಲಾರನೋ ಅವನಿಗೆ ಶ್ರೀ ಗುರು ವಿನ ಮುಖದಿಂದ ಹೊರಡುವ ಮಹಾವಾಕ್ಯ ಶ್ರವಣವಾಗಲಾರದು. ಮಹಾವಾಕ್ಯ ಶ್ರವಣವಿಲ್ಲದೇ ಆ ಮಹಾವಾಕ್ಯದಲ್ಲಿರುವ ಪದಗಳಾಗಲೀ, ಪದಗಳ ಅರ್ಥಗಳಾಗಲೀ ಆಗುವುದೇ ಇಲ್ಲ. ಮಹಾವಾಕ್ಯದ ಪದಗಳಾಗಲೀ, ಪದಾರ್ಥಗಳಾಗಲೀ ಅವುಗಳ ಅರ್ಥವಾಗದೇ ಹೋದಲ್ಲಿ ಅನ್ವಯ ವ್ಯತಿ ರೇಕ ಯುಕ್ತಿಗಳು ನಿಷ್ಫಲವಾಗುವುವು; ಅನ್ವಯ ವ್ಯತಿರೇಕ ಯುಕ್ತಿಗಳಿಲ್ಲದೆ ಹೋದಲ್ಲಿ ಮಹಾವಾಕ್ಯಾರ್ಥ ಜ್ಞಾನವಾಗಲಾರದು; ಮಹಾವಾಕ್ಯಾರ್ಥ ಜ್ಞಾನವಾಗದೆ ಹೋದರೆ ಅಜ್ಞಾನವು ನಾಶವಾಗಲಾರದು. ಅಜ್ಞಾನ ನಾಶ ವಾಗದೆ ಹೋದರೆ ಪುರುಷಾರ್ಥವು ದೊರೆಯಲಾರದು.

ಮನುಷ್ಯನು ಹುಟ್ಟಿರುವುದು ಇಂತಹ ಪರಮ ಪುರುಷಾರ್ಥವಾದ ಮೋಕ್ಷ ಪಡೆಯುವುದಕ್ಕಾಗಿಯೆ. ಇಂತಹ ಪರಮ ಪುರುಷಾರ್ಥವೇ ಮನುಷ್ಯ ಜನ್ಮದ ಗುರಿ. ಪಶುಗಳಂತೆ ಹುಟ್ಟಿ, ಪಶುಗಳಂತೆ ಇದ್ದು, ಪಶುಗಳಂತೆ ಭೋಗಮಾಡಿ,ಪಶುಗಳಂತೆ ಸಾಯುವುದು ಮನುಷ್ಯ ಜನ್ಮದ ಗುರಿಯಲ್ಲ. ಶ್ರೀ ಶಂಕರ ಭಗವತ್ಪಾದರು ವಿವೇಕ ಚೂಡಾಮಣಿಯಲ್ಲಿ "**ದುರ್ಲಭಂ ತ್ರಯಮೇವೈತದ್ದೈವಾನುಗ್ರಹ ಹೇತುಕಮ್ । ಮನುಷ್ಯತ್ವಂ ಮುಮುಕ್ಷುತ್ವಂ ಮಹಾಪುರಷ-ಸಂಶ್ರಯಃ ॥** ಅತಿ ದುರ್ಲಭವಾದ ಪದಾರ್ಥಗಳು ಮೂರು. ಇವು ಭಗವಂತನ ಅನುಗ್ರಹವಿಲ್ಲದೆ ದೊರೆಯಲಾರವು; ಮನುಷ್ಯತ್ವ, ಮುಮುಕ್ಷುತ್ವ ಮಹಾ ಪುರುಷರ ಸನ್ನಿಧಿ "ಎಂದು ಹೇಳಿದ್ದಾರೆ. ಆದ್ದರಿಂದ ಮನುಷ್ಯ ಜನ್ಮ ಬಂದಿರುವುದೇ ಭಗವಂತನ ಅನುಗ್ರಹದಿಂದ. ಇಂತಹ ಮನುಷ್ಯ ಜನ್ಮವನ್ನು ವ್ಯರ್ಥವಾಗಿ ದೇಹ ಪೋಷಣೆಗಾಗಿ ಬಳಸಿಕೊಳ್ಳಬಾರದು. ಇದನ್ನು ಪುರುಷಾರ್ಥಸಾಧನೆಗಾಗಿ ಬಳಸಿಕೊಳ್ಳಬೇಕು. ಅಂತಹ ಪುರುಷಾರ್ಥಸಾಧೆಯನ್ನೇ ಶ್ರೀ ಸುರೇಶ್ವರಾಚಾರ್ಯರು ಮನುಷ್ಯರ ಮೇಲೆ ಕೃಪೆಯಿಟ್ಟು ಅವರ ಜನ್ಮಸಾರ್ಥಕವಾಗಲೆಂದು ಈ ಮುಂದೆ ಹೇಳುತ್ತಾರೆ.

## ನಾನು ಸ್ಥೂಲದೇಹವಲ್ಲ

**ಪ್ರ : 26. ಪುರುಷಾರ್ಥ ಸಾಧನೆಯಲ್ಲಿ ಮೊದಲನೆಯದು ಯಾವುದು ?**

ಉ : "ನಾನು ಸ್ಥೂಲದೇಹವಲ್ಲ"ವೆಂಬುದೇ ಮೊದಲನೆಯದು. ಸರ್ವಸಾಧಾರಣವಾಗಿ "ನಾನು" ಎಂದರೆ ಸ್ಥೂಲದೇಹವೆಂದೇ ತಿಳಿಯುತ್ತೇವೆ. ಈ ತಪ್ಪು ತಿಳುವಳಿಕೆಯೇ ಪುರುಷಾರ್ಥ ಸಾಧನೆಯಲ್ಲಿ ಅಡ್ಡಿಯಾಗಿದೆ.

ನಿನ್ನೆಯದಿನ ಷಡ್ರಸಾನ್ನ ಭೋಜನವಾಗಿದ್ದ ಅನ್ನವು ಇಂದು ಮಲವಾಗಿದೆ. ಆದುದರಿಂದ ಮಲವು ಅನ್ನದ ಕಾರ್ಯವೆಂದಾಯಿತು. ಅನ್ನದ ಕಾರ್ಯವಾದ ಆ ಮಲವು ಜಡವೂ, ದುರ್ಗಂಧವೂ ಆಗಿರುವುದಲ್ಲವೆ! ಆದು

ದರಿಂದ ಆ ಮಲವು ಅನಾತ್ಮವೆಂದಾಯಿತು. ಅದರಂತೆ ಈ ದೇಹವೂ ಅನ್ನದ ಕಾರ್ಯವಲ್ಲವೆ ! ಮಲವೂ ಅನ್ನದಕಾರ್ಯವೇ. ಅನ್ನದ ಕಾರ್ಯವಾದ ಮಲವನ್ನು ಅನಾತ್ಮವೆಂದೂ ಜಡವೆಂದೂ, ದುರ್ಗಂಧ ವೆಂದೂ ತಿರಸ್ಕರಿಸಿದಂತೆ ಅನ್ನದ ಪರಿಣಾಮವಾದ ಈ ದೇಹವನ್ನು ಜಡ ವೆಂದೂ ಚರ್ಮದ ಹೊದಿಕೆ ಒಳಗಿರುವ ದುರ್ಗಧವೆಂದೂ ಏಕೆ ತಿಳಿದಿಲ್ಲ ! ಇದು ಆಶ್ಚರ್ಯವಲ್ಲವೆ !

**ಪ್ರ : 27. ಈ ಸ್ಥೂಲದೇಹವು ಆತ್ಮವಲ್ಲವೆಂದು ಹೇಗೆ ತಿಯುಬೇಕು ?**

ಉ : ಊಟ ಮಾಡುವುದಕ್ಕಿಂತ ಮೊದಲು ಅನ್ನವು ನಮ್ಮಿಂದ ಬೇರೆಯಾಗಿದೆ ಯಲ್ಲವೆ ! ಆದುದರಿಂದ ಆತ್ಮನಾದ ನನಗೆ ಅದು ಬೇರೆ ಯಾಗಿರುವುದರಿಂದ ಮತ್ತು ಅದು ನನಗೆ ಕಾಣುತ್ತಿರುವುದರಿಂದ ಆ ಅನ್ನವು ಅನಾತ್ಮವೇ ಆಗಿದೆ. ಮತ್ತು ಆ ಅನ್ನವು ಈ ದೇಹದ ಸಂಗಮಾಡಿ ತನ್ನ ಸುಗಂಧತ್ವವನ್ನು ಕಳೆದುಕೊಂಡು ದುರ್ಗಂಧವಾಗಿ ಈ ದೇಹದಿಂದ ಮಲರೂಪವಾಗಿ ಹೊರಗೆ ಬಂದಾಗಲೂ ಅದು ಅನ್ಯಾತ್ಮವೇ ಆಗಿರುತ್ತದೆ. ಆರಂಭದಲ್ಲಿ ಅಂತ್ಯದಲ್ಲಿ ಯಾವುದು ಅನಾತ್ಮವಾಗಿ ಕಾಣುತ್ತದೆಯೋ ಮಧ್ಯೆ ದೇಹರೂಪದಿಂದ ಕಾಣಿಸಿಕೊಂಡಾಗಲೂ ಅನಾತ್ಮವೆ.

ಮೊದಲು ಅನಾತ್ಮವಾದ ಅನ್ನವು ದೇಹಕ್ಕೆ ಸೇರಿ ದೇಹ ರೂಪವಾ ದಾಗಲೂ ಅನಾತ್ಮವೆ. ನಾವು ತಪ್ಪು ತಿಳುವಳಿಕೆಯಿಂದ ಆತ್ಮವೆಂದು ತಿಳಿಯುತ್ತೇವೆ.

**ಉದಾ :** ಅಲಂಕಾರಕ್ಕಾಗಿ ಹೂ ಮಾಲೆಗಳನ್ನು ಸುಗಂಧ ದ್ರವ್ಯಗ ಳನ್ನು ಶರೀರ ಮೇಲೆ ಹಾಕಿಕೊಳ್ಳುತ್ತೇವೆ. ಆ ಜಡವಾದ-ಅನಾತ್ಮವಾದ ಹೂ ಮಾಲೆಯು ದೇಹವನ್ನು ಸೇರಿದ ಮೇಲೂ ಅನಾತ್ಮವೇ ಅಲ್ಲವೇ ! ಯಾವುದು ಹೊಸದಾಗಿ ಹೊರಗಿನಿಂದ ಬಂದಿರುತ್ತದೆಯೋ ಅದು ಹೇಗೆ ದೇಹ ಸ್ವರೂಪವಾಗಲಾರದೋ ಹಾಗೆಯೇ ಹೊಸದಾಗಿ ಬಂದ ಈ ಸ್ಥೂಲ ದೇಹವಾದರೋ ಆತ್ಮನಾದ ನನಗೆ ಆಗುಂತಕವಾದುದು-ಆದುದರಿಂದ ಇದು ಎಂದೂ ಆತ್ಮ ಸ್ವರೂಪವಾಗಲಾರದು.

ಭಗವಂತನು ಭಗವದ್ಗೀತೆಯ 2ನೇ ಅಧ್ಯಾಯದಲ್ಲಿ "**ದೇಹಿನೋಽಸ್ಮಿನ್ ಯಥಾದೇಹೇ ಕೌಮಾರಂ ಯೌವನಂ ಜರಾ । ತಥಾ ದೇಹಾಂತರ** ಪ್ರಾಪ್ತಿಃಧೀರಸ್ತತ್ರ ನಮುಹ್ಯತಿ" ಈ ಶರೀರಕ್ಕೆ ಬಾಲ್ಯ ಬಂದಾಗ ಆತ್ಮನು ಬರಲಿಲ್ಲ-ಬಾಲ್ಯ ಹೋಗಿ ಯೌವನ ಬಂದಾಗ ಬಾಲ್ಯದ ಜೊತೆಗೆ ಹೋಗಿ ಯೌವನ ಬಂದಾಗ ಬರಲಿಲ್ಲ; ಯೌವನ ಹೋದಾಗ ಹೋಗಿ ಮುಪ್ಪು ಬಂದಾಗ ಬರಲಿಲ್ಲ. ಒಬ್ಬ ದೇಹಿಗೇ ಈ ಮೂರಾವಸ್ಥೆಗಳು ಬಂದು ಹೋಗುವಂತೆ ದೇಹಗಳೂ ಬರುತ್ತಾ ಹೋಗುತ್ತಿರುತ್ತವೆ. ಯಾವನು ಈ ವಿವೇಕವನ್ನು ತಿಳಿದಿರುವನೋ ಅಂತಹ ಧೀರನು ಈ ವಿಷಯದಲ್ಲಿ ಮೋಹಗೊಳ್ಳುವುದಿಲ್ಲವೆಂದು ಸ್ಪಷ್ಟಪಡಿಸಿದ್ದಾನೆ. ಆದುದರಿಂದ ಈ ದೇಹವೂ ಆತ್ಮನಾದ ನನಗೆ ಒಂದು ದಿನ ಬಂದಿದೆ. ಬಂದದ್ದು ಎಂದಾದರೂ ಹೋಗಬೇಕಲ್ಲವೆ ! ಆದ್ದರಿಂದ ಇದು ಎಂದಾದರೂ ಒಂದು ದಿನ ಹೋಗಿಯೇ ತೀರುತ್ತದೆ. ಆದುದರಿಂದ ಈ ದೇಹವು ಆಗುಂತಕ. ಇದನ್ನೇ ಭಗವಂತನು "**ಆಗಮಾಪಾಯಿನ ಅನಿತ್ಯ**" ಈ ದೇಹವು ಒಂದು ದಿನ ಬಂದಿದೆ; ಬಂದದ್ದು ಹೋಗಿಯೇ ತೀರಬೇಕು; ಅದರಂತೆ ಒಂದು ದಿನ ಹೋಗುತ್ತದೆ. ಆದುದರಿಂದ ಈ ದೇಹವು ಅನಿತ್ಯವೆಂದು ಸ್ಪಷ್ಟಪಡಿಸಿದ್ದಾನೆ.

ಸಾಯುವವರೆಗೆ "ನನ್ನ ದೇಹ" "ನನ್ನ ದೇಹ" ವೆಂದು ಇದಕ್ಕೆ ಶೃಂಗಾರ ಆಭರಣ-ಭೂಷಣ-ಎಲ್ಲಾ ಉಪಚಾರಗಳೂ ನಡೆಯುತ್ತವೆ, ಸತ್ತಮೇಲೆ ನರಿ ನಾಯಿಗಳು ಇದನ್ನು ತಮ್ಮ ಕಾಲಿಂದ ಮೆಟ್ಟಿ ತುಳಿದು ಕಚ್ಚಿ ಕಚ್ಚಿ ತಿನ್ನುವಾಗ, ಬೇರೆ ನಾಯಿ ಬಂದರೆ ಇದು "ನನ್ನದು" ಇಲ್ಲಿಗೆ ಬರಬೇಡವೆಂದು ಬಗಳುತ್ತವೆ. ಒಂದು ದಿನ ತಾಯಿ ತಂದೆಯ ಗರ್ಭದಲ್ಲಿದ್ದು ಆ ತಾಯಿ ತಂದೆಗಳು "ನನ್ನದು" ಎಂದು ಅಭಿಮಾನ ಪಡುತ್ತಿದ್ದರು. ಆ ದೇಹವೇ ಅವರಿಂದ ಭಾಗವಾಗಿ ಹೊರಟು ಈ ದಿನ ನಿನ್ನದಾಗಿದೆ. ಮತ್ತೊಂದು ದಿನ ನಾಯಿಯದಾಗುತ್ತದೆ. ಎಂದಮೇಲೆ ಬೇರೆ ಬೇರೆ ಒಡತನಕ್ಕೆ ಒಳಗಾಗುವಂತಹ ಈ ಕಿರುಕುಳ ದೇಹವು ನಿನ್ನ ಸ್ವರೂಪವೆಂದು ಮೋಹಿಸಿ ಅದರಲ್ಲಿ ನೀನೇಕೆ ಇಷ್ಟು ಆಸಕ್ತವಾಗಿರುವೆ !

**ಉದಾ :** ಒಬ್ಬ ಮಲವಿಸರ್ಜನೆ ಮಾಡಿದ್ದಾನೆ. ಮಲವಿಸರ್ಜನೆ ಮಾಡಿದವನು ಪುನಃ ಅದರ ಮೇಲೆ ಅಭಿಮಾನಪಟ್ಟು ಅದನ್ನು ಪ್ರೀತಿಸ ಬಲ್ಲನೆ ! ಇಲ್ಲ-ಅವನು ಹಿಂದಿರುಗಿಯೂ ನೋಡಲಾರ. ಎಲ್ಲಿಯವರೆಗೆ ಆ ಮಲವು ತನ್ನಲ್ಲಿ ಅದ್ವೈತವಾಗಿತ್ತೋ ಅಲ್ಲಿಯವರೆಗೆ ತಾನೇ ಆಗಿದ್ದು ಈಗ ತನಗಿಂತ ಬೇರೆಯಾದ ಮೇಲೆ ಅವನು ಅದರ ಮೇಲೆ ಅಭಿಮಾನ ಇಡಬಲ್ಲನೆ ! ಮತ್ತು ಆ ಮಲವು ಅವನಿಂದ ಹೊರಗಾದ ಮೇಲೆ ಯಾವ ಅವಸ್ಥೆಯನ್ನು ಹೊಂದಿದರೂ-ಅನೇಕ ದೋಷಗಳುಂಟಾದರೂ, ಅದರಿಂದ ಆ ಮಲ ವಿಸರ್ಜನೆ ಮಾಡಿದವನಿಗೆ ಏನಾದರೂ ದುಃಖವಾಗಬಹುದೆ !

ಹಾಗೆಯೇ ಈ ಸ್ಥೂಲ ಶರೀರವು ಅನ್ನದಿಂದ ಬಂದದ್ದು. ಆದಿಯ ಲ್ಲಿಯೂ ಅನ್ನವಾಗಿ-ಕೊನೆಗೂ ಅನ್ನದ ಕಾರ್ಯವಾಗಿದ್ದು ಮಧ್ಯದಲ್ಲೂ ಅನ್ನರೂಪವೇ ಆಗಿದೆ, ಎಂದು ವಿವೇಕ ಬಲದಿಂದ ತಿಳಿದು ಅದು ಎಂದೂ "ತಾನು" ಆಗಲಾರದು. "ನಾನು" ಎಂದೂ ಸ್ಥೂಲ ಶರೀರವಲ್ಲವೆಂದು ನಿಶ್ಚಯಿಸಿ ಇದರ ಮೇಲಿನ ಅಭಿಮಾನವನ್ನು ಬಿಟ್ಟರೆ-ಈ ದೇಹದ ಸಂಬಂ ಧದ ದೋಷದ ವರ್ಣನೆ ಕೇಳಿದರೂ ಜ್ಞಾನಿಯಾದವನು ಇದನ್ನು ಮಲದಂತೆ ತಿಳಿದು ಇದಕ್ಕಿಂತ ಬೇರೆಯಾಗಿರುತ್ತಾನೆ. ಮತ್ತು ತಾನು ಆತ್ಮನೆಂದು ಸ್ಥಿರವಾಗಿರುತ್ತಾನೆ.

**ಪ್ರ : 28. ಈ ರೀತಿ ದೇಹಾಭಿಮಾನವನ್ನು ಬಿಟ್ಟವನ ಸ್ಥಿತಿ ಹೇಗಿರುತ್ತದೆ ?**

ಉ : ದೇಹಾಭಿಮಾನವನ್ನು ಬಿಟ್ಟ ಧೀರನಿಗೆ ಶತ್ರುದೇಹ, ಮಿತ್ರ ದೇಹ, ತನ್ನದೇಹ ಎಂಬ ಅಭಿಮಾನವಾಗಲೀ, ತನ್ನ ದೇಹ ಸುಂದರವಾ ಗಿದೆ ಎಂಬ ಅಹಂಕಾರವಾಗಲೀ, ಯಾವುದೂ ಇರುವುದಿಲ್ಲ. ಅವನು ಎಲ್ಲಾ ದೇಹಗಳಲ್ಲಿಯೂ ಏಕರೂಪನಾದ ಆತ್ಮನನ್ನು ನೋಡುತ್ತಾನೆ. ಆಗ ಆ ವಿವೇಕಿಗೆ ಕೋಪವಾದರೂ ಎಲ್ಲಿಂದ ಬರುತ್ತದೆ ? ತನ್ನ ದೇಹದ ಅವಯವಗಳಿದ್ದಂತೆಯೇ ಎಲ್ಲಾ ದೇಹಗಳನ್ನು ನೋಡುತ್ತಾನೆ. ಇದನ್ನೇ ಈಶಾವಾಸ್ಯೋಪನಿಷತ್ತು **"ತತ್ರಕೋಮೋಹಃ ಕಃ ಶೋಕಃ ಏಕತ್ವ ಮನುಪಶ್ಯತಃ"** ಅಂತವನಿಗೆ ಇದು ನನ್ನದೇಹ, ಇವರು ನಮ್ಮವರು ಎಂಬ

ಮೋಹವಾಗಲೀ, ಅವು ಹೋದರೆ ಹೋದವೆಂಬ ಶೋಕವಾಗಲೀ ಏಕತ್ವವನ್ನು ನೋಡುವವನಿಗೆ ಕಾಣುವುದೇ ಇಲ್ಲವೆಂದು ಹೇಳುತ್ತದೆ

**ಪ್ರ : 29. ದೇಹವು ಆತ್ಮವಲ್ಲ ಎಂಬುದಕ್ಕೆ ಯುಕ್ತಿಗಳೇನು?**

ಉ : ಕಣ್ಣಿನಿಂದ ಹೊರಗಿನ ಅನಾತ್ಮ ವಸ್ತುಗಳಾದ ಮನೆ, ಗೋಡೆ, ಇತ್ಯಾದಿ ವಸ್ತುಗಳು ಕಾಣುವಂತೆ ಈ ದೇಹವೂ ದರೋ ಹೊರಗಿನ ಅನಾತ್ಮ ವಸ್ತುವಿನಂತೆ ದೃಶ್ಯರೂಪವಾದುದರಿಂದಲೂ ದೇಹವು ಆತ್ಮವಲ್ಲ.

2) ಒಬ್ಬ ಮನುಷ್ಯನಿಗೆ ಸ್ವಪ್ನ ಬಿದ್ದಿದೆ. ಸ್ವಪ್ನದಲ್ಲಿ ಬಹುದೂರದ ಗಿರಿಬೆಟ್ಟಗಳಲ್ಲಿ ಅಲೆಯುತ್ತಿದ್ದಾನೆ. ನಾನೇ ಸ್ವಪವನ್ನು, ಎಚ್ಚರವನ್ನೂ ನೋಡುವವನಲ್ಲವೆ. ಆಗ ನಾನೆಂಬ ವಸ್ತು ಸ್ವಪ್ನದಲ್ಲಿಯೂ, ಎಚ್ಚರದಲ್ಲಿಯೂ ಇರುವುದೆಂದಾಯಿತು. ನಾನು ಸ್ಥೂಲದೇಹವೆಂದು ಇಟ್ಟುಕೊಂಡರೆ–ಸ್ಥೂಲದೇಹವು ಸ್ವಪ್ನದಲ್ಲೂ. ಎಚ್ಚರದಲ್ಲೂ ಇರಬೇಕು. ಆದರೆ ಸ್ಥೂಲದೇಹವು ಸ್ವಪ್ನದಲ್ಲಿರುವುದಿಲ್ಲ, ಹಾಸಿಗೆಯ ಮೇಲೆ ಬಿದ್ದಿರುತ್ತದೆ. ಆದುದರಿಂದ ನಾನು ಎರಡೂ ಕಾಲದಲ್ಲಿರುತ್ತೇನೆ. ಸ್ಥೂಲದೇಹವು ಒಂದು ಕಾಲದಲ್ಲಿ ಇರುವುದಿಲ್ಲ. ಆದ್ದರಿಂದ ಇದು ಅನಾತ್ಮ.

3) ಯಾವ ದೇಹವನ್ನು ನಾಲ್ಕು ಜನರು ಬಹಳ ಕಷ್ಟಪಟ್ಟು ಹೊರಬೇಕೋ ಅದೇ ದೇಹವು, ದೇಹವೇ ತಾನು ಎಂಬ ಅಭಿಮಾನವಿರುವ ದಡ್ಡ ಜನರಿಗೂ ಹರಳೆಯಂತೆ ಹಗುರವಾಗಿ ಕಾಣುತ್ತದೆ. ಇದರಿಂದಲೂ ದೇಹವು ಅನಾತ್ಮವೆ.

ಎಲ್ಲಾ ಮತದವರೂ ದೇಹವು ಆತ್ಮವಲ್ಲವೆಂಬುದನ್ನು ಒಪ್ಪಿಕೊಳ್ಳುವುದರಿಂದ ತೀರ ಪ್ರಸಿದ್ಧವಾದ ಈ ವಿಷಯುವನ್ನು ಹೆಚ್ಚು ಬಳಸುವ ಅಗತ್ಯವಿಲ್ಲವೆಂದು ಉಪಸಂಹಾರ ಮಾಡುತ್ತಾರೆ. ಆದರೆ ಚಾರ್ವಾಕರು ಮಾತ್ರ ದೇಹವೇ ಆತ್ಮನೆಂದೂ–ತಾನೆಂದೂ ತಿಳಿಯುತ್ತಾರೆ.

**ಪ್ರ : 30. ಚಾರ್ವಾಕರು ಯಾರು ? ಅವರ ಮತವೇನು?**

ಉ : "ಚಾರು: ಲೋಕಸಮ್ಮತೋ ವಾಕೋವಾಕ್ಯಂ ಯಸ್ಯಸಃ ಚಾರ್ವಾಕಃ" ಸಾಮಾನ್ಯ ಜನರಿಗೆ ರುಚಿಸುವಂತೆ ಮಾತುಗಳನ್ನು ಹೇಳು

ವವನು ಚಾರ್ವಾಕನು. ಈ ದೇಹ ಸಂಬಂಧವಾಗಿ-ಈ ದೇಹವೇ ತಾನಾಗಿ-ಈ ದೇಹದ ವರ್ಣಾಶ್ರಮದ ವಿಷಯವಾಗಿ–ಪುರುಷ ಸ್ತ್ರೀ ವಿಷಯವಾಗಿ–ಈ ದೇಹಕ್ಕೆ ಸಂಬಂಧಪಟ್ಟ ಹಣಕಾಸು ತಿಳಿಸುವ ವಿಷಯ, ಮಂತ್ರಿಸಿ ಏನಾದರೂ ವಸ್ತುಕೊಟ್ಟು ಇದರಿಂದ ನಿನ್ನ ಅಭಿವೃದ್ಧಿ, ಕೀರ್ತಿ ಬೆಳೆಯುವುದೆಂದು ಹೇಳುವ ದೇಹಾಭಿಮಾನಿಗಳೇ ಚಾರ್ವಾಕರು. ಇಂತವರ ಮಾತೇ ಈಗಿನ ಜನರಿಗೆ ರುಚಿಯಾಗಿ ಕಾಣುವುದು. ಒಂದುಕಡೆ ಆತ್ಮಾನಾತ್ಮ ವಿವೇಕ ವಿಚಾರನಡೆಯುತ್ತಿದ್ದರೂ ಮತ್ತೊಂದು ಕಡೆ ಮಂತ್ರಾಕ್ಷತೆ ಮಂತ್ರಿಸಿ ಕೊಡುತ್ತಿದ್ದು, ಆದರಿಂದ ನಿನ್ನ ಐಶ್ವರ್ಯ ಅಭಿವೃದ್ಧಿಯಾಗುತ್ತದೆ ಎಂದರೆ ಸಾಕು ಅಲ್ಲಿಗೇ ಜನ ಓಡುತ್ತಾರೆ. ಆದುದರಿಂದ ಸಾಮಾನ್ಯ ಜನರನ್ನು ತಾವು ಸ್ಥೂಲ ದೇಹವೇ-ಸ್ಥೂಲದೇಹದ ವಸ್ತುಗಳೆಲ್ಲಾ ವೂ ತಾನೆ ಎಂಬ ರುಚಿಕರ ಮಾತನ್ನಾಡಿ ಜನರನ್ನು "ನೀನು" ಎಂದರೆ ಸ್ಥೂಲದೇಹವೇ ಎಂಬ ಭಾವನೇ ಬರುವಂತೆ ಮಾಡುವ ಮೂಢ ಜನರೆಲ್ಲರೂ ಚಾರ್ವಾಕರೆ.

ಈ ಚಾರ್ವಾಕನು ಬೃಹಸ್ಪತಿ ಶಿಷ್ಯನು. ಇವನ ಮತಕ್ಕೆ ಬೃಹಸ್ಪತಿ ಮತವೆಂದೂ ಹೆಸರು. ಈ ಚಾರ್ವಾಕರಿಗೆ "ಲೋಕಾಯತಿಕ"ರೆಂಬ ಹೆಸರೂ ಇದೆ. ಶ್ರೀ ವಿದ್ಯಾರಣ್ಯಸ್ವಾಮಿಗಳವರ "ಸರ್ವದರ್ಶನ"ವೆಂಬ ಗ್ರಂಥದಲ್ಲಿ ಇವರನ್ನು ಖಂಡಿಸಿದ್ದಾರೆ.

ದೇಹವೇ ನಾನೆಂದೂ-ದೇಹಕ್ಕೆ ಸಂಬಂಧಪಟ್ಟ ವಸ್ತುಗಳ ಸಂಗ್ರಹ ಮಾಡುವ– ಈ ಚಾರ್ವಾಕರಿಗೆ ಮಹಾ ಭೂತಗಳೇ ಜಗತ್ತಿನ ಮೂಲ, ಇವರು ಗಾಳಿ, ಬೆಂಕಿ, ನೀರು ಭೂಮಿ, ನಾಲ್ಕೇ ಭೂತಗಳಿವೆ ಎನ್ನುತಾರೆ. ಇವೇ ದೇಹರೂಪವಾಗಿ ಪರಿಣಾಮ ಹೊಂದಿವೆ-ಎಂದರೆ ಅಲ್ಲಿ ಚೈತನ್ಯದ ಆವಿರ್ಭಾವವಾಗುತ್ತದೆ ಎನ್ನುತ್ತಾರೆ. ಸುಣ್ಣ,ಎಲೆ,ಅಡಿಕೆ ಸೇರಿದರೆ ಹೇಗೆ ಕೆಂಪಾಗುತ್ತದೆಯೋ ಹಾಗೆಯೇ ಚೈತನ್ಯವು ಮಹಾ ಭೂತಗಳ ಸಮ್ಮಿಶ್ರಣದಿಂದ ಸರ್ವವೂ ಹುಟ್ಟುವುದೆಂದು ತಿಳಿಯುತ್ತಾರೆ. ದೇಹವೇ ಆತ್ಮವು. ಆತ್ಮವೇ ದೇಹವು. ದೇಹದಿಂದ ಬೇರೆಯಾದ ಜೀವವು ಇಲ್ಲವೇ ಇಲ್ಲ. ಸ್ವರ್ಗ, ನರಕ, ಪಾಪ, ಪುಣ್ಯ ಯಾವುದೂ ಇಲ್ಲ. ಜಗನ್ನಿಯಾಮಕ ಪರಮೇಶ್ವರನೇ ಇಲ್ಲ. ಇವರು ಶಾಸ್ತ್ರವನ್ನು ಒಪ್ಪುವುದಿಲ್ಲ. ಇವರಿಗೆ ಪ್ರತ್ಯಕ್ಷದ ಹೊರತು

ಬೇರೆ ಪ್ರಮಾಣವೇ ಸಮ್ಮತವಿಲ್ಲ. ಆದ್ದರಿಂದ ಇವರಿಗೆ ದೇಹಾತ್ಮವಾದಿಗಳೆಂದು ಕರೆಯುತ್ತಾರೆ. ಇವರು ಜಗತ್ತಿನ ಸೃಷ್ಟಿ ಪ್ರಳಯವನ್ನು ಒಪ್ಪುವುದಿಲ್ಲ. ಪೂರ್ವಜನ್ಮ, ಪುನರ್ಜನ್ಮಗಳಿರುವುದಿಲ್ಲ ಇದೊಂದೇ ಜನ್ಮ ಸತ್ಯ. ದೇಹವು ಸುಟ್ಟುಹೋದ ಮೇಲೆ ಮತ್ತಿಲ್ಲ ಇದಕ್ಕೆ ಜನ್ಮ. ಆದುದರಿಂದ ದೇಹ ಇರುವವರೆಗೆ ಯಥೇಚ್ಛವಾಗಿ ವಿಹಾರ ಮಾಡಬೇಕು. ನಮಗೆ ಯಾವುದರಿಂದ ಸುಖವೆಂದೆನಿಸುವುದೋ ಅದು ಕಳ್ಳತನವೇ ಆಗಲಿ-ಅನ್ಯಾಯವೇ ಆಗಲಿ-ಮೋಸವೇ ಆಗಲಿ-ಜನಗಳನ್ನು ಮರಳುಮಾಡುವುದೇ ಆಗಲಿ ಅದನ್ನು ಅನುಸರಿಸಬೇಕು. "ಋಣಂ ಕೃತ್ವಾ ಘೃತಂ ಪಿಬೇತ್" ಸಾಲಮಾಡಿ ತುಪ್ಪತಿನ್ನು-ಮುಂದೇ ನೀನೇನು ತೀರಿಸುವಂತಿಲ್ಲ. ಇವರಿಗೆ ನ್ಯಾಯಾನ್ಯಾಯವಾಗಲೀ ಧರ್ಮಾಧರ್ಮವಾಗಲೀ ಯಾವುದೂ ಇಲ್ಲ. ಆದ್ದರಿಂದ ಇದು ದುಗ್ಧ ಜಡವಾದ, ನಾಸ್ತಿಕವಾದವೆಂದೂ ಕರೆಯಲ್ಪಡುತ್ತದೆ.

ಇಂತಹ ಚಾರ್ವಾಕರು ಮಾತ್ರ ಸ್ಥೂಲದೇಹವೇ ಆತ್ಮವೆಂದು ತಿಳಿದಿರುತ್ತಾರೆ. ಬೇರೆ ಇನ್ನು ಯಾವ ಮತವೂ ಇದನ್ನು ಒಪ್ಪದೆ ಆತ್ಮಬೇರೆ ದೇಹಬೇರೆ ಎಂದೇ ತೀರ್ಮಾನಿಸಿದ್ದಾರೆ. ಆದ್ದರಿಂದ ಸ್ಥೂಲದೇಹವು "ನಾನು ಅಲ್ಲ" ಎಂಬ ವಿಷಯ ಇಷ್ಟೇಸಾಕು

## ನಾನು ಸೂಕ್ಷ್ಮದೇಹವೂ ಅಲ್ಲ

ಸ್ಥೂಲದೇಹದಿಂದ ಆತ್ಮನನ್ನು ಬಿಡಿಸಬಹುದು, ಸೂಕ್ಷ್ಮದೇಹದಿಂದ ಬಿಡಿಸುವುದು ಬಹಳ ಕಷ್ಟ. ಸ್ಥೂಲದೇಹವು ಈ ಜನ್ಮದಲ್ಲಿ ಗಂಟುಬಿದ್ದಿರುವುದು ಆದರೆ ಸೂಕ್ಷ್ಮದೇಹವಾದರೋ ಅನೇಕ ಜನ್ಮಗಳಿಂದ ಗಂಟುಬಿದ್ದಿದೆ. ಪರಮಾತ್ಮನಿಂದ ಬೇರೆಯಾದಂದಿನಿಂದ ಗಂಟುಬಿದ್ದ ಈ ಸೂಕ್ಷ್ಮದೇಹವು ಪರಮಾತ್ಮಜ್ಞಾನ ಆಗುವವರೆಗೂ ಇರುತ್ತದೆ. ಆದ್ದರಿಂದ ಈ ಸೂಕ್ಷ್ಮದೇಹದ ಅಧ್ಯಾಸದಿಂದ ಬಿಡಿಸುವುದು ಕಷ್ಟ. ಈ ಕಾರಣದಿಂದ ಇದರ ಅಧ್ಯಾಸಬಿಡಿಸಲು ಅನ್ವಯ ವ್ಯತಿರೇಕಯುಕ್ತಿಗೇ ಶರಣು ಹೋಗಬೇಕು.

**ಪ್ರ : 31. ಅನ್ವಯ ವ್ಯತಿರೇಕಯುಕ್ತಿ ಎಂದರೇನು ?**

ಉ : ಅನ್ವಯ ಎಂದರೆ ಅನುಸರಿಸುವುದು ಅಥವ ಸಂಬಂಧವೆಂದು ಅರ್ಥ. ವ್ಯತಿರೇಕವೆಂದರೆ ಅಭಾವ. ಅನ್ವಯವೆಂದರೆ ಒಂದನ್ನೊಂದು ಎಡೆಬಿಡದೆ ಹಿಂಬಾಲಿಸುವುದೆಂದು ಅರ್ಥ. ಯಾವುದೂ ಯಾವುದರ ಸ್ವರೂಪವಾಗಿದೆಯೋ, ಅದನ್ನು ಅದು ಒಂದೇ ಸಮನೆ ಅನುಸರಿಸುವುದು.

**ಉದಾ :** ಸುಡುವಿಕೆಯು ಬೆಂಕಿಯ ಧರ್ಮ. ಆ ಸುಡುವಿಕೆಯು ಬೆಂಕಿಯನ್ನು ಯಾವಾಗಲೂ ಅನುಸರಿಸುತ್ತದೆ. ಅಂದರೆ ಬೆಂಕಿ ಇದ್ದಲ್ಲೆಲ್ಲಾ ಆ ಸುಡುವಿಕೆಯು ಇದ್ದೇ ಇರುತ್ತದೆ. ಇದು ಬೆಂಕಿಯ ಅನ್ವಯ.

**ಉದಾ :** ಗಡಿಗೆಯು ಮಣ್ಣಿನ ಕಾರ್ಯ. ಆ ಗಡಿಗೆಯು ಇದ್ದಲ್ಲೆಲ್ಲಾ ಮಣ್ಣೇ ಇರುತ್ತದೆ. ಇದು ಮಣ್ಣಿನ ಅನ್ವಯ.

ಗಡಿಗೆಯ ಒಳಗೆ ನೀರು ಇದೆ. ನೀರು ವ್ಯತಿರೇಕ. ನೀರು ಇದ್ದರೂ ಇರಬಹುದು, ದವಸವನ್ನೂ ತುಂಬ ಬಹುದು, ಖಾಲಿಯಾಗಿಯೂ ಇರಬಹುದು, ಇದು ಗಡಿಗೆಯ ವ್ಯತಿರೇಕ.

ಈ ಅನ್ವಯ ವ್ಯತಿರೇಕಯುಕ್ತಿಯು ವೇದಾಂತದಲ್ಲಿ ಬಹಳ ಒಳ್ಳೆಯಾಗಿದೆ. ಜೀವಾತ್ಮನ ನಿಜವಾದ ಸ್ವರೂಪವು ಜೀವಾತ್ಮನನ್ನು ಅವನ ಎಲ್ಲಾ ಅವಸ್ಥೆಯಲ್ಲಿಯೂ ಅನುಸರಿಸಬೇಕು. ಇಲ್ಲದೆ ಹೋದರೆ ಅದು ಅವನ ಸ್ವರೂಪ ಆಗಲಾರದು. ಆದುದರಿಂದ ಮೂರು ಅವಸ್ಥೆಗಳನ್ನು ವಿಚಾರ ಮಾಡುವುದರಿಂದ ಅವನ ಸ್ವರೂಪವನ್ನು ನಿರ್ಣಯಿಸಬಹುದು.

ಬರೀ ಅನ್ವಯದಿಂದಲೇ ಜೀವಾತ್ಮನ ಸ್ವರೂಪ ನಿರ್ಣಯವಾಗಲಾರದು. ಅದಕ್ಕೆ ವ್ಯತಿರೇಕವೂ ಬೇಕು. "ವ್ಯತಿರೇಕ" ಎಂಬ ಪದಕ್ಕೆ 'ವಿ+ಅತಿ+ರಿಚ್' ಎಂಬ ಧಾತುವು ಮೂಲವಾಗಿದೆ. 'ವ್ಯತಿರಿಚ್' ಎಂದರೆ ಒಂದನ್ನೊಂದು ಬಿಟ್ಟಿರು ಎಂದು ಅರ್ಥವಾಗುತ್ತದೆ. ಯಾವುದು ಒಂದು ವಸ್ತುವಿನ ಕೆಲವು ಅವಸ್ಥೆಗಳಲ್ಲಿ ಕಂಡುಬಂದು ಮತ್ತೆ ಕೆಲವು ಅವಸ್ಥೆಗಳಲ್ಲಿ ಕಂಡಬರುವುದಿಲ್ಲವೋ ಅದು ಆ ವಸ್ತುವಿನ ಸ್ವರೂಪವಾಗಲಾರದು.

**ಉದಾ :** 'ನೀರು ಸುಡುತ್ತದೆ' ಈ ಸುಡುವಿಕೆಯು ಬೆಂಕಿಯ ಧರ್ಮ. ಅದು ನೀರಿನಲ್ಲಿ ಒಂದು ಕಾಲದಲ್ಲಿದ್ದು ಮತ್ತೊಂದು ಕಾಲದಲ್ಲಿ ಇಲ್ಲದಿರಬಹುದು. ಇದು ವ್ಯತಿರೇಕ.

ಹಾಗೆಯೇ ಈ ದ್ವೈತ ಪ್ರಪಂಚವು ಜೀವನ ವ್ಯವಹಾರ ಕಾಲದಲ್ಲಿ ಮಾತ್ರ ಕಂಡುಬರುತ್ತದೆ. ಅದೇ ದ್ವೈತ ಪ್ರಪಂಚವು ಜೀವಾತ್ಮನ ಸುಷುಪ್ತಿಯಲ್ಲಿ ಕಾಣುವುದೇ ಇಲ್ಲ. ಅಂದರೆ ನಿದ್ದೆಯಲ್ಲಿ ದ್ವೈತ ಪ್ರಪಂಚದ ವ್ಯತಿರೇಕ ವಿರುತ್ತದೆ. ಆದುದರಿಂದ ದ್ವೈತ ಪ್ರಪಂಚವು ಜೀವಾತ್ಮನ ಸ್ವರೂಪವಲ್ಲೆಂದು ನಿಶ್ಚಿತವಾಗುತ್ತದೆ.

ಹೀಗೆಯೇ ಈ ಅನ್ವಯ ವ್ಯತಿರೇಕಯುಕ್ತಿಯು ವೇದಾಂತದಲ್ಲಿ ಬಹಳ ಬಳಕೆಯಾಗಿದೆ. ಬ್ರಹ್ಮಸೂತ್ರದಲ್ಲಿಯಾದರೋ ತುಂಬಾ ಈ ಯುಕ್ತಿಯೇ ಇದೆ.

**ಪ್ರ : 32. ಈ ಅನ್ವಯ ವ್ಯತಿರೇಕಯುಕ್ತಿಯು ಎಷ್ಟು ವಿಧವಾಗಿದೆ ?**

ಉ : ಈ ಅನ್ವಯ ವ್ಯತಿರೇಕಯುಕ್ತಿಯಲ್ಲಿ ನಾಲ್ಕು ವಿಧಗಳಿವೆ.

೧) ದೃಗ್ದೃಶ್ಯ ಅನ್ವಯ ವ್ಯತಿರೇಕಯುಕ್ತಿ

೨) ಸಾಕ್ಷಿ ಸಾಕ್ಷ್ಯಾನ್ವಯ ವ್ಯತಿರೇಕಯುಕ್ತಿ

೩) ಆಗ ಮಾಪಾಯತದವಧ್ಯನ್ವಯ ವ್ಯತಿರೇಕಯುಕ್ತಿ

೪) ದುಃಖಿ ಪರಮ ಪ್ರೇಮಾಸ್ಪದಾನ್ವಯ ವ್ಯತಿರೇಕಯುಕ್ತಿ

ವೇದಾಂತಗಳೊಳಗಿನ ಅವಾಂತರ ವಾಕ್ಯಗಳೆಲ್ಲಾ ಈ ಅನ್ವಯ ವ್ಯತಿರೇಕ ಪದ್ಧತಿಯ ಮೂಲಕವಾಗಿಯೇ ಆತ್ಮನನ್ನು ತಿಳಿಸಿಕೊಡುತ್ತವೆ. ಆಮೇಲೆ ಮಹಾವಾಕ್ಯಗಳು ಮುಮುಕ್ಷುವಿಗೆ ಆತ್ಮಸಾಕ್ಷಾತ್ಕಾರವನ್ನು ಮಾಡಿ ಕೊಡುತ್ತವೆ.

ಶ್ರೀ ಶಂಕರರು ಉಪದೇಶ ಸಾಹಸ್ರಿಯ ೧೮ನೇ ಪ್ರಕರಣದ ೯೩ನೇ ಶ್ಲೋಕದಲ್ಲಿ **"ಅನ್ವಯ ವ್ಯತಿರೇಕೌ ಹಿ ಪದಾರ್ಥಸ್ಯ ಪದಸ್ಯಚ । ಸ್ಯಾದೇತದಹಮಿತ್ಯತ್ರ ಯುಕ್ತಿರೇವಾವಧಾರಣೇ" ॥** ಪದದ ಮತ್ತು

ಪದಾರ್ಥದ ಅನ್ವಯ ವ್ಯತಿರೇಕಗಳು "ನಾನು" ಎಂಬಲ್ಲಿ ಪದಾರ್ಥವನ್ನು ನಿರ್ಣಯಿಸುವ ಯುಕ್ತಿಯೇ ಆಗಿವೆ ಎಂದು ಹೇಳಿದ್ದಾರೆ.

ಆದುದರಿಂದ ಶ್ರೀ ಸುರೇಶ್ವರಾಚಾರ್ಯರು "ನಾನು ಸೂಕ್ಷ್ಮದೇಹವಲ್ಲ" ಎಂಬ ವಿಷಯವನ್ನು ಪ್ರತಿಪಾದನೆಮಾಡಲು (೧) ದೃಗ್ದೃಶ್ಯ ಅನ್ವಯ ವ್ಯತಿರೇಕಯುಕ್ತಿ. (೨) ಸಾಕ್ಷಿ ಸಾಕ್ಷ್ಯ ಅನ್ವಯ ವ್ಯತಿರೇಕಯುಕ್ತಿ. (೩) ದುಃಖಿ ಪರಮ ಪ್ರೇಮಾಸ್ಪದ ಅನ್ವಯ ವ್ಯತಿರೇಕಯುಕ್ತಿ ಅಂದರೆ ಆತ್ಮಾನಾತ್ಮ ವಿವೇಕ— ಈ ಮೂರೂ ಯುಕ್ತಿಗಳನ್ನು ಬಳಸಿಕೊಂಡಿದ್ದಾರೆ. ಈ ಮೂರು ಯುಕ್ತಿಗಳನ್ನು ಬಳಸಿಕೊಂಡು "ನಾನು ಸೂಕ್ಷ್ಮದೇಹವಲ್ಲ"ವೆಂದು ಸಿದ್ಧಾಂತ ಮಾಡಿದ್ದಾರೆ— ಈಗ ಒಂದೊಂದೇ ಯುಕ್ತಿಯಿಂದ ಸೂಕ್ಷ್ಮದೇಹದ ಅಭಿಮಾನವನ್ನು ಬಿಡಿಸುತ್ತಾರೆ.

**ಪ್ರ : 33. ಸೂಕ್ಷ್ಮ ದೇಹವೆಂದರೇನು ?**

ಉ : ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಐದು ಪ್ರಾಣಗಳು ಮನಸ್ಸು ಮತ್ತು ಬುದ್ಧಿ ಈ ಹದಿನೇಳರ ಸಮುದಾಯವೇ ಸೂಕ್ಷ್ಮ ಶರೀರ. ಈ ಹದಿನೇಳು ತತ್ವಗಳು ಅಪಂಚೀಕೃತ ಪಂಚ ಮಹಾಭೂತಗಳಿಂದ ಹುಟ್ಟಿವೆ. ಇವುಗಳನ್ನು ಪ್ರಾಣಮಯ, ಮನೋಮಯ, ವಿಜ್ಞಾನಮಯ ಕೋಶವೆಂದೂ ಇವುಗಳ ಸಮುದಾಯವೇ ಸೂಕ್ಷ್ಮ ಶರೀರವೆಂದೂ ಕರೆಯುತ್ತಾರೆ.

ಇವುಗಳಲ್ಲಿ ಪಂಚಕರ್ಮೇಂದ್ರಿಯಗಳು ಮತ್ತು ಪಂಚಪ್ರಾಣವಾಯುಗಳ ಸಮುದಾಯವೇ ಪ್ರಾಣಮಯಕೋಶ. ಇವು ರಜೋಗುಣದ ಕಾರ್ಯ. ಮನಸ್ಸು ಮತ್ತು ಪಂಚಜ್ಞಾನೇಂದ್ರಿಯಗಳ ಸಮುದಾಯವೇ ಮನೋಮಯಕೋಶ; ಇದು ಸತ್ವಗುಣದ ಕಾರ್ಯ. ಬುದ್ಧಿ ಮತ್ತು ಪಂಚ ಜ್ಞಾನೇಂದ್ರಿಯಗಳ ಸಮುದಾಯವೇ ವಿಜ್ಞಾನಮಯ ಕೋಶ. ಈ ರೀತಿ ಈ ಮೂರೂ ಕೋಶಗಳನ್ನೇ ಸೂಕ್ಷ್ಮದೇಹವೆಂದೂ, ಲಿಂಗದೇಹವೆಂದೂ, ಪುರ್ಯಷ್ಟಕವೆಂದೂ ಕರೆಯುತ್ತಾರೆ.

ಇನ್ನು ಸ್ಥೂಲದೇಹವೇ ಅನ್ನಮಯಕೋಶ. ಅವಿದ್ಯೆಯೊಳಗಿರುವ ಮಲಿನ ಸತ್ವವೇ ಪ್ರಿಯಾ, ಮೋದ, ಪ್ರಮೋದವೆಂಬ ಸುಖಗಳಿಂದ ಕೂಡಿ ಕೊಂಡಿರುವುದೇ ಆನಂದಮಯಕೋಶವೆಂದು ಕರೆಸಿಕೊಳ್ಳುತ್ತದೆ.

**ಪ್ರ : 34. ಸೂಕ್ಷ್ಮದೇಹದ ವಿಷಯ ತಿಳಿಯಿತು. ಇನ್ನು ಜೀವನು ಯಾರು ?**

ಉ : ಬುದ್ಧಿ ಅಥವಾ ಅಂತಃಕರಣದಲ್ಲಿ ಮೂಡಿದಂತೆ ತೋರುವ ಶುದ್ಧ ಚೈತನ್ಯದ ಆಭಾಸ ಅಥವಾ ಪ್ರತಿ ಬಿಂಬವೇ ಜೀವನೆಂದು ಹೇಳುತ್ತಾರೆ.

**ಪ್ರ : 35. ಜೀವನ ಬಗ್ಗೆ ಇರುವ ಅಭಿಪ್ರಾಯಗಳಾವುವು ?**

ಉ : ಜೀವನ ಬಗ್ಗೆ ಇರುವ ಅಭಿಪ್ರಾಯಗಳನ್ನು (೧) ಅವಚ್ಛೇದ ವಾದ (೨) ಪ್ರತಿಬಿಂಬವಾದ (೩) ಆಭಾಸವಾದವೆಂದು ಮೂರು ವಿಧವಾಗಿ ವಿಂಗಡಿಸಬಹುದು.

**ಪ್ರ : 36. ಅವಚ್ಛೇದವಾದವೆಂದರೇನು ?**

ಉ : ಘಟಾಕಾಶಕ್ಕೂ ಮಹಾಕಾಶಕ್ಕೂ ಯಾವ ಭೇದವೂ ಇಲ್ಲ. ಘಟದ ಉಪಾದಿಯಿಂದ ಘಟಾಕಾಶವೆಂದು ಕರೆಸಿಕೊಂಡಿದೆ. ಘಟವನ್ನು ಮಾಡಿದಾಗ ಆಕಾಶವನ್ನು ತುಂಡುಮಾಡಿ ಘಟದಲ್ಲಿ ಸೇರಿಸಿಲ್ಲ ಮತ್ತು ಘಟವು ಹೊಡೆದು ಹೋದಾಗ ಘಟಾಕಾಶವು ಏನೂ ಆಗುವುದಿಲ್ಲ. ಹೀಗೆ ಘಟದಿಂದ ಅವಚ್ಛಿನ್ನವಾದ ಆಕಾಶಕ್ಕೂ ಮಹಾಕಾಶಕ್ಕೂ ಇರುವ ಸಂಬಂಧವೇ ಜೀವಾತ್ಮ ಪರಮಾತ್ಮರ ನಡುವೆ ಇರುವುದೆಂದು ಹೇಳುವವರ ಪಕ್ಷವೇ ಅವಚ್ಛೇದವಾದವೆಂದು ಕರೆಯಲ್ಪಡುತ್ತದೆ. ಕೊಡವೆಂಬ ಉಪಾದಿಯಿಂದ ಕೂಡಿಕೊಂಡಾಗ ಮಹಾಕಾಶವೇ ಘಟಾಕಾಶವಾಗುವುದು ಆದರೆ ನಿಜವಾಗಿ ನೋಡಿದರೆ ಎರಡೂ ಒಂದೆ. ಘಟಾಕಾಶವು ಮಹಾಕಾಶದ ಅವಯವವಾಗಲೀ ವಿಕಾರವಾಗಲೀ ಆಗಿರುವುದಿಲ್ಲ. ಬ್ರಹ್ಮಸೂತ್ರ ಶಂಕರ ಭಾಷ್ಯದ ಮೇಲೆ ಭಾಮಿತಿ ಎಂಬ ಟೀಕೆಯನ್ನು ಬರೆದು ಪ್ರಸಿದ್ಧರಾದ ವಾಚಸ್ಪತಿ ಮಿಶ್ರರು ಈ ಮತದ ಪುರಸ್ಕರ್ತರು.

**ಪ್ರ : 37. ಪ್ರತಿಬಿಂಬವಾದವೆಂದರೇನು ?**

ಉ : ಅಜ್ಞಾನದಲ್ಲಾಗಲೀ ಅಥವಾ ಅಂತಃಕರಣದಲ್ಲಾಗಲೀ ಕಂಡುಬರುವ ಶುದ್ಧ ಚೈತನ್ಯದ ಪ್ರತಿಬಿಂಬವೇ ಜೀವನೆಂದು ಹೇಳುವವರ ವಾದವನ್ನು ಪ್ರತಿಬಿಂಬವಾದವೆಂದು ಕರೆಯುತ್ತಾರೆ. ಪ್ರತಿಬಿಂಬದಲ್ಲಿ ಬಿಂಬವೇ ಸ್ಪಷ್ಟವಾಗಿ ಮೂಡಿರುತ್ತದೆ.

ಪದ್ಮಪಾದಾಚಾರ್ಯರೂ, ಪ್ರಕಾಶಾತ್ಮರೂ, ವಿದ್ಯಾರಣ್ಯರೂ ಮತ್ತು ಸುರೇಶ್ವರಾಚಾರ್ಯರ ಶಿಷ್ಯರಾದ ಸರ್ವಜ್ಞಾತ್ಮಮುನಿಗಳು ಈ ಮತದ ಪುರಸ್ಕರ್ತರು.

**ಪ್ರ : 38. ಆಭಾಸವಾದವೆಂದರೇನು ?**

ಉ : ಸ್ಪಟಿಕದ ಸಮೀಪದಲ್ಲಿರುವ ಕೆಂಪುದಾಸವಾಳದ ಕೆಂಪು ಬಣ್ಣದಿಂದ ಸ್ಪಟಿಕವೂ ಕೆಂಪಾಗಿಕಾಣುತ್ತದೆ. ಸ್ಪಟಿಕದಲ್ಲಿ ಕೆಂಪಾಗಿ ಕಾಣುವ ಕೆಂಪುಬಣ್ಣವು ಮಾತ್ರ ಆಭಾಸವೆಂದು ಕರೆಯಲ್ಪಡುತ್ತದೆ. ಈ ಆಭಾಸದಲ್ಲಿ ದಾಸವಾಳದ ಹೂ ಕನ್ನಡಿಯಲ್ಲಿ ಮೂಡಿದ ಮುಖದ ಪ್ರತಿ ಬಿಂಬದಂತೆ ಸ್ಪಷ್ಟವಾಗಿ ಮೂಡಿರುವುದಿಲ್ಲ. ದಾಸವಾಳದ ಹೂವಿನ ಕೆಂಪು ಸ್ಪಟಿಕದಲ್ಲಿ ಕಾಣುತ್ತದೆ. ಸ್ಪಟಿಕದಲ್ಲಿ ಕಾಣುವ ಕೆಂಪುಬಣ್ಣದಂತೆ ಅಂತಃ ಕರಣದಲ್ಲಿ ಅಥವಾ ಅಜ್ಞಾನದಲ್ಲಿ ಕಾಣುವ ಚೇತನದ ಆಭಾಸವೇ ಜೀವ ನೆನ್ನುತ್ತಾರೆ. ಈ ವಾದವೇ ಆಭಾಸವಾದ. ಶ್ರೀ ಸುರೇಶ್ವರಾಚಾರ್ಯರೇ ಈ ಮತದ ಪುರಸ್ಕರ್ತರು.

**ವಾಚಸ್ಪತೇರವಚ್ಛೇದ ಆಭಾಸೋವಾರ್ತಿಕಸ್ಯಚ ।**
**ಸಂಕ್ಷೇಪ ಶಾರೀರಕೃತಾಂ ಪ್ರತಿಬಿಂಬಮಿಹೇಷ್ಯತೇ ॥**

**ಸಾರಾಂಶ :** ಈ ರೀತಿ ಅದ್ವೈತವೇದಾಂತಿಗಳೆಲ್ಲರೂ ಈ ಮೂರೂ ವಾದವನ್ನು ಪುರಸ್ಕರಿಸುತ್ತಾರೆ. ಬ್ರಹ್ಮಸೂತ್ರದಲ್ಲಿ ಪ್ರತಿ ಬಿಂಬವಾದ ಮತ್ತು ಆಭಾಸವಾದಗಳು ಸ್ಪಷ್ಟವಾಗಿ ಕಾಣುತ್ತವೆ. ಶ್ರೀ ಶಂಕರಾಚಾರ್ಯರೂ ಮತ್ತು ಮಾಂಡೂಕ್ಯಕಾರಿಕೆ ಬರೆದು ಪ್ರಸಿದ್ಧರಾದ ಗೌಡ ಪಾದಾಚಾರ್ಯರೂ ಈ ಮೂರುವಾದವನ್ನು ಪುರಸ್ಕರಿಸಿರುತ್ತಾರೆ. ಸುರೇಶ್ವರಾ

ಚಾರ್ಯರೂ ಈ ಮೂರನ್ನು ಬಳಸಿಕೊಂಡರೂ ಆಭಾಸವಾದದ ಮೇಲೆಯೇ ಅವರಿಗೆ ಅಭಿಮಾನ ಇರುವಂತೆ ಕಂಡುಬರುತ್ತದೆ.

ಶ್ರೀ ಶಂಕರಾಚಾರ್ಯರೂ ಸಹ ಅಂತಃಕರಣದೊಳಗಿನ ಚೇತನದ ಆಭಾಸವೇ ಜೀವನೆಂದೂ,ಪುಣ್ಯ ಪಾಪದ ಕರ್ತನೆಂದೂ ಲಘುವಾಕ್ಯ ವೃತ್ತಿಯಲ್ಲಿ ಸ್ಪಷ್ಟಪಡಿಸಿದ್ದಾರೆ. "**ಬೋಧಾಭಾಸೋ ಬುದ್ಧಿಗತಃ ಕರ್ತಾ ಸ್ಯಾತ್ಪುಣ್ಯಪಾಪಯೋಃ ॥ ಸ ಏವ ಸಂಸರೇತ್ ಕರ್ಮವಶಾಲ್ಲೋಕದ್ವಯೇ ಸದಾ ॥** ಸುರೇಶ್ವರಾಚಾರ್ಯರೂ ಇದನ್ನೇ ಲಕ್ಷದಲ್ಲಿಟ್ಟು ಕೊಂಡಿದ್ದಾರೆ. ಆದುದರಿಂದ ಸೂಕ್ಷ್ಮ ದೇಹದಿಂದೊಡಗೂಡಿದ ಈ ದೇಹವೇ ಸಂಸಾರಮಾಡುವುದು. ಇಂತಹ ಜೀವನೇ ಲೋಕಾಂತರ ಗಮನಮಾಡುವನು— ದೇಹಾಂತರ ಹೊಂದುವನು.

ಜೀವರೂಪಿಯಾದ ಈ ಚಿದಾಭಾಸನಿಂದ ಶುದ್ಧ ಚೈತನ್ಯವನ್ನು ಬಿಂಗಡಿಸುವುದೇ ವೇದಾಂತದ ಮುಖ್ಯ ಕೆಲಸ. **ತತ್ತ್ವಮಸ್ಯಾದಿ** ಮಹಾವಾಕ್ಯದ ಕೆಲಸವೂ, ಅದರ ಮುಖ್ಯ ಉದ್ದೇಶವೂ ಅದೇ ಆಗಿದೆ.

ಜೀವನ ಜೀವತ್ವವಿರುವವರೆಗೆ ಆತ್ಮನಿಗೂ ಬುದ್ಧಿಗೂ ಸಂಬಂಧವು ತಪ್ಪಿದ್ದಲ್ಲ. ಬುದ್ಧಿಯೇ ಆತ್ಮನ ಉಪಾದಿಯಂದೊಡನೇ, ಆತ್ಮನು ಜೀವನಾಗಿ ಸಂಸಾರ ಮಾಡಹತ್ತುತ್ತಾನೆ. ಮೋಕ್ಷವಾಗುವವರೆಗೂ ಈ ಬುದ್ಧಿಯ ಸಂಯೋಗವು ಆತ್ಮನಿಗೆ ತಪ್ಪಿದ್ದಲ್ಲ. ಇದನ್ನು ತಪ್ಪಿಸಿಕೊಳ್ಳುವುದೇಮೋಕ್ಷ.

ಆದುದರಿಂದ ಶ್ರೀ ಸುರೇಶ್ವರಾಚಾರ್ಯರು ಈ ಅಂತಃಕರಣ ಅಥವ ಸೂಕ್ಷ್ಮಶರೀರದಿಂದ ತಪ್ಪಿಸಿಕೊಳ್ಳಲು— ಅಥವಾ ಅದರ ಅಭಿಮಾನವನ್ನು ಬಿಡಿಸಲು ದೃಗ್ದೃಶ್ಯ ಅನ್ವಯ ವ್ಯತಿರೇಕಯುಕ್ತಿಯನ್ನು ಇಲ್ಲಿ ಉಪಯೋಗಿಸಿದ್ದಾರೆ.

## ೧ ದೃಗ್ದೃಶ್ಯ ಅನ್ವಯ ವ್ಯತಿರೇಕಯುಕ್ತಿ

ದೃಗ್ದೃಶ್ಯ ಅನ್ವಯ ವ್ಯತಿರೇಕ ಯುಕ್ತಿಯಲ್ಲಿ ಆರು ಯುಕ್ತಿಗಳ ಮೂಲಕ ಸೂಕ್ಷ್ಮದೇಹದ ಅಭಿಮಾನಬಿಡಿಸಿರುತ್ತಾರೆ.

**ಯುಕ್ತಿ ೧ :** ಅಹಂಕಾರ, ಕರ್ತೃತ್ವ, ಸುಖ ದುಃಖ, ಇಚ್ಛೆ ಮೊದಲಾದವುಗಳು ಸೂಕ್ಷ್ಮದೇಹದ ಧರ್ಮಗಳು— ಇವು ಯಾವೂ ಆತ್ಮನ ಧರ್ಮಗಳಲ್ಲ.

ಅಹಂಕಾರ, ಮಮಕಾರ, ಬುದ್ಧಿ, ಸುಖದುಃಖ, ಇಚ್ಛೆ, ದ್ವೇಷ, ಯತ್ನ ಮುಂತಾದುವುಗಳನ್ನು ಆತ್ಮಧರ್ಮವೆಂದು ವೈಶೇಷಿಕಾದಿಗಳು ಒಪ್ಪುತ್ತಾರೆ. ಭಗವಂತನು ಭಗವದ್ಗೀತೆಯ 13 ನೇ ಅಧ್ಯಾಯದ 6 ನೇ ಶ್ಲೋಕದಲ್ಲಿ "ಇಚ್ಛಾದ್ವೇಷಃ ಸುಖಂದುಃಖಂ ಸಂಘಾತಶ್ಚೇತನಾಧೃತಿಃ। ಏತತ್‌ಕ್ಷೇತ್ರಂ ಸಮಾಸೇನ ಸವಿಕಾರ ಮುದಾಹೃತಮ್॥" ಇಚ್ಛೆ, ದ್ವೇಷ, ಸುಖ, ದುಃಖ ಸಂಘಾತ ಅಂದರೆ ಇಂದ್ರಿಯ ಸಮುದಾಯ, ಚೇತನ,ಧೃತಿ ಇವೆಲ್ಲವೂ ಕ್ಷೇತ್ರದ ವಿಕಾರಗಳೆಂದು ಹೇಳಿದ್ದಾನೆ. ಆದುದರಿಂದ ಇವು ಯಾವೂ ಆತ್ಮನ ಧರ್ಮಗಳಲ್ಲ.

1) ಸ್ಥೂಲದೇಹದ ಧರ್ಮಗಳಾದ ದಪ್ಪವಾಗಿರುವಿಕೆ, ಬಡಕಲಾಗಿರುವಿಕೆ, ಕೆಂಪು ಕಪ್ಪು, ಇವು ಹೇಗೆ ಆತ್ಮನಿಗೆ ದೃಶ್ಯವೋ ಅದೇ ರೀತಿ ಅಹಂಕಾರಾದಿ ಸೂಕ್ಷ್ಮದೇಹದ ಧರ್ಮಗಳೂ ದೃಶ್ಯಗಳೇ ಆಗಿವೆ. ಆದುದರಿಂದ ಇವು ಯಾವೂ ಆತ್ಮಧರ್ಮಗಳಲ್ಲ.

2) ಮತ್ತು ಈ ಸೂಕ್ಷ್ಮ ಶರೀರದ ಧರ್ಮಗಳಾದ ಅಹಂಕಾರ,ಇಚ್ಛೆ ದ್ವೇಷಾದಿಗಳು ಆಗಮಾಪಾಯಿಗಳು ಅಂದರೆ ಬಂದು ಹೋಗುವವುಗಳು. ಸುಖ ಒಂದು ಸಾರಿ ಇರುತ್ತದೆ–ಮತ್ತೊಂದು ಸಾರಿ ಇರುವುದಿಲ್ಲ–ಒಂದು ಸಾರಿ ವಿಷಯಗಳ ಇಚ್ಛೆ ಇರುತ್ತದೆ–ಸುಷುಪ್ತಾವಸ್ಥೆಯಲ್ಲಿ ಇರುವುದಿಲ್ಲ. ಆದುದರಿಂದ ಈ ಅಹಂಕಾರ, ಮಮಕಾರ, ಇಚ್ಛೆ, ಸುಖ ದುಃಖಾದಿಗಳು ಆಗಮಾಪಾಯಿಗಳು. ಆತ್ಮಧರ್ಮಗಳಾಗಿದ್ದರೆ ಸದಾ ಇರಬೇಕಾಗಿತ್ತು. ಬೆಂಕಿಯ ಧರ್ಮವಾದ ಉಷ್ಣತೆಯು ಸದಾ ಅಗ್ನಿಯ ಸ್ವರೂಪವೇ ಆಗಿರುವಂತೆ ಇವೂ ಆತ್ಮನ ಸ್ವರೂಪವೇ ಆಗಿದ್ದರೆ ಸದಾ ಇರುತ್ತಿದ್ದವು. ಆದುದರಿಂದ ಇವು ಆತ್ಮನ ಧರ್ಮಗಳಲ್ಲ; ಅನಾತ್ಮಧರ್ಮಗಳು. ಇವುಗಳಿಗೆ ಉತ್ಪತ್ತಿನಾಶಗಳು ಇವೆ.

**ಉದಾ :** ಬೆಂಕಿಯು ತನ್ನ ಸ್ವರೂಪವೇ ಆದ ಉಷ್ಣತೆಯನ್ನು ಉರಿಯಿಂದ ಸುಡಲಾರದು. ತನಗಿಂತ ಉಷ್ಣತೆಯು ಬೇರೆಯಾಗಿದ್ದರೆ ಸುಡುತ್ತಿತ್ತು. ಹಾಗೆಯೇ ಅಹಂಕಾರಾದಿಗಳು ಆತ್ಮನ ಸ್ವರೂಪವೇ ಆಗಿದ್ದ ಪಕ್ಷದಲ್ಲಿ ಆ ಅಹಂಕಾರಾದಿಗಳನ್ನು ತಿಳಿಯುವುದರಿಂದ ಅವು ಆತ್ಮಸ್ವರೂಪ ವಾಗಲಾರವು.

**ಯುಕ್ತಿ ೨ :— ಭಾಟ್ಟ ಮೀಮಾಂಸಕರ ಪ್ರಶ್ನೆ :**

ಉಷ್ಣತೆಯ ಸ್ವರೂಪವೇ ಆದ ಬೆಂಕಿಯು ತನ್ನನ್ನು ತಾನು ಸುಟ್ಟು ಕೊಳ್ಳಲಾರದು. ಉಷ್ಣತೆಯು ಬೆಂಕಿಗಿಂತಲೂ ಬೇರೆ ಇದ್ದರೆ ಆ ಉಷ್ಣತೆ ಯಿಂದ ಬೆಂಕಿಯು ಸುಡುತ್ತಿತ್ತು. ಹಾಗೆ ಉಷ್ಣತೆಯು ಬೆಂಕಿಯನ್ನು ಸುಡಲಾರದು. ಏಕೆಂದರೆ ಉಷ್ಣವು ಬೆಂಕಿಯ ಸ್ವರೂಪವೇ ಆಗಿದೆ. ಅದ ರಂತೆ ಅಹಂಕಾರವು ಆತ್ಮನ ಸ್ವರೂಪವಾಗಿದ್ದರೆ ಆತ್ಮನು ಅಹಂಕಾರವನ್ನು ತಿಳಿಯುತ್ತಿರಲಿಲ್ಲ ಆದರೆ ಆತ್ಮನು ಅಹಂಕಾರವನ್ನು ತಿಳಿಯುತ್ತಾನೆ ಎಂಬುದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಆದುದರಿಂದ ಅಹಂಕಾರವು ಆತ್ಮನಿಗಿಂತ ಭಿನ್ನವಾಗಿರಲೇ ಬೇಕು. ಆ ಅಹಂಕಾರವು ಎಂದೂ ಆತ್ಮ ನಾಗಲಾರದು. ಅರ್ಥಾತ್ ಒಬ್ಬನೇ ಆತ್ಮನು ನೋಡುವ ಕರ್ತೃವೂ, ನೋಡಲ್ಪಡುವ ಕರ್ಮವೂ ತಾನೇ ಆಗಲಾರನೆಂಬುದು ನಿಮ್ಮ ಅಭಿಪ್ರಾಯ ವಿರುವಂತೆ ಕಾಣುತ್ತದೆ. ಆದರೆ ಈ ನಿಮ್ಮ ಅಭಿಪ್ರಾಯವು ಸಮಂಜಸ ವಾಗಿ ಕಾಣಲಾರದು.

ಏಕೆಂದರೆ—"ನನ್ನನ್ನು ನಾನು ತಿಳಿಯುತ್ತೇನೆ" ಎಂಬ ಈ ಅನುಭವ ವಾಕ್ಯದಲ್ಲಿ ಆತ್ಮನೇ ತಿಳಿಯುವ ಕರ್ತೃವೂ ತಿಳಿಸಿಕೊಳ್ಳುವ ಕರ್ಮವೂ ಎರಡೂ ಒಬ್ಬನೇ ಆಗಲಿಲ್ಲವೆ. !

**ಸಿದ್ಧಾಂತಿ ಸಮಾಧಾನ :** ನಿನ್ನ ಮಾತು ಸಮಂಜಸವಾಗಿ ಕಾಣ ಲಾರದು. "ನಾನು ಕೊಡವನ್ನು ತಿಳಿಯುತ್ತೇನೆ" ಎಂಬ ವಾಕ್ಯದಲ್ಲಿ "ನಾನು'' ಎಂಬುವ ಜ್ಞಾತೃವಿಗಿಂತಲೂ ಜ್ಞೇಯವಾದ ಕೊಡವು ತೀರಾ ಭಿನ್ನವಾಗಿದೆ. ಕೊಡವನ್ನು ತಿಳಿಯುವವನು ಕೊಡಕ್ಕಿಂತ ಬೇರೆ ಇರುತ್ತಾನೆ.

ಅವನು ಎಂದಿಗೂ ಕೂಡ ಆಗಲಾರನು. "ಘಟೋದ್ರಷ್ಟಾ ಘಟಾದ್ಭಿನ್ನಃ ಸರ್ವತೋ ನಘಟೋಯಥಾ" ಆದುದರಿಂದ ಯಾವ ಉದಾಹರಣೆಯಲ್ಲಿಯೂ ಜ್ಞೇಯವಾದುದು ಜ್ಞಾತೃವೂ ಆಗಲಾರದು. ಅದರಂತೆ "ನನ್ನನ್ನು ನಾನು ತಿಳಿಯುತ್ತೇನೆ" ಎಂಬ ವಾಕ್ಯದಲ್ಲಿಯೂ "ನನ್ನನ್ನು" ಎಂಬ ಜ್ಞೇಯ ಪದಾರ್ಥಕ್ಕಿಂತ "ನಾನು" ಎಂಬ ಜ್ಞಾತೃವು ಬೇರೆ ಇರುತ್ತದೆ. ಜ್ಞೇಯವಾದ ಕರ್ಮವೂ, ಜ್ಞಾತೃವಾದ ಕರ್ತೃವೂ ಒಂದೇ ಆಗಿರಲಾರದು. ಇಲ್ಲಿ "ನನ್ನನ್ನು" ಎಂಬುದೇ ಅಹಂಕಾರ; ಅದೇ ಜ್ಞೇಯ, ಅದೇ ಕರ್ಮ; 'ನಾನು' ಎನ್ನುವುದೇ ಜ್ಞಾತೃ—ಅದೇ ಕರ್ತೃ, ಆ 'ನಾನು' ಎನ್ನುವುದೇ ಆತ್ಮ. ಈ 'ನಾನು' ಎನ್ನುವ ಆತ್ಮನು 'ನನ್ನನ್ನು' ಎನ್ನುವ ಅಹಂಕಾರಕ್ಕಿಂತ ತೀರಾ ಭಿನ್ನನಾಗಿದ್ದಾನೆ. ಅವನೆಂದೂ ಅಹಂಕಾರವಾಗಲಾರನು ಮತ್ತು ಅಹಂಕಾರಕ್ಕೆ ವಿಷಯನೂ ಆಗಲಾರನು.

**ಪೂರ್ವಪಕ್ಷಿ :** "ನಾನು ನನ್ನನ್ನು ತಿಳಿಯುತ್ತೇನೆ" ಎನ್ನುವ ಅನುಭವದಿಂದ ಆತ್ಮನು ಒಂದೇ ಕಾಲಕ್ಕೆ ಕರ್ತೃವೂ, ಕರ್ಮವೂ ಅಂದರೆ ಜ್ಞಾತೃವೂ ಜ್ಞೇಯವೂ ಆಗಿರುವುದು ಪ್ರತ್ಯಕ್ಷವಾಗಿ ಸಿದ್ಧವಾಗಿರುತ್ತದೆ. ಈ ರೀತಿ ಪ್ರತ್ಯಕ್ಷವಾಗಿ ಒಂದೇ ವಸ್ತುವು ಅಂದರೆ ಆತ್ಮನೇ ಜ್ಞಾತೃವೂ ಜ್ಞೇಯವೂ ಆಗಿರುವುದು ಸಿದ್ಧವಾಗಿರುವಾಗ ನೀವು ಅನುಮಾನ ಪ್ರಮಾಣದ ಬಲದಿಂದ ಜ್ಞಾತೃವು ಆತ್ಮನೆಂದೂ, ಜ್ಞೇಯವು ಅಹಂಕಾರವೆಂದೂ ಹೇಳುತ್ತಿದ್ದೀರಲ್ಲಾ, ಮೊದಲು ಪ್ರತ್ಯಕ್ಷ ಪ್ರಮಾಣ ಸಿದ್ಧವಾದ ನಂತರವೇ ಅನುಮಾನ ಪ್ರಮಾಣ ಸಿದ್ಧವಾಗುವುದು ?

**ಸಮಾಧಾನ :** ನಾವೂ ಪ್ರತ್ಯಕ್ಷವಾಗಿಯೇ ಒಂದೇ ವಸ್ತುವು ಒಂದೇ ಕಾಲಕ್ಕೆ ಜ್ಞಾತೃವೂ ಜ್ಞೇಯವೂ ಆಗಲಾರದೆಂದು ಸಿದ್ಧಮಾಡುತ್ತೇವೆ.

ಯಾವುದು ಸದಾ ನೋಡಲ್ಪಡುತ್ತದೆಯೋ ಅಂದರೆ ಕಾಣುತ್ತದೆಯೋ ಅದು ಎಂದೂ ನೋಡುವ ಸ್ಥಾನಕ್ಕೆ ಹೋಗಲಾರದು. ಅದು ಸದಾ ಕಾಣುತ್ತಲೇ ಇರುತ್ತದೆ. ಕಾಣುತ್ತಾ ಇರುವುದೇ ಅದರ ಧರ್ಮ. ಅದು ತನ್ನ ಧರ್ಮವಾದ ಕಾಣುವಿಕೆಯನ್ನು ಬಿಟ್ಟು ನೋಡುವ ಸ್ಥಾನಕ್ಕೆ ಎಂದೂ ಹೋಗಲಾರದು. ಏಕೆಂದರೆ ನೋಡುವವನ ಸ್ವರೂಪವು ಚೈತನ್ಯವಾಗಿರ

ಬೇಕು–ಜ್ಞಾನವೇ ಆಗಿರಬೇಕು. ಅಂತಹ ಚೈತನ್ಯವೇ ಆದ ನೋಡುವ ನಾನು ಎಂದೂ ಕಾಣುವ ಸ್ಥಾನಕ್ಕೆ ಹೋಗಲಾರನೆಂಬುದು ಪ್ರತ್ಯಕ್ಷ ಸಿದ್ಧವಾದ ಮಾತು.

ಆದುದರಿಂದ ಕಾಣಲ್ಪಡುವ ಅಹಂಕಾರವಾದರೋ ಅಂತಃಕರಣದೊಳಗೆ ಇದ್ದುಕೊಂಡು ಸದಾ ಕಾಣುತ್ತಿರುತ್ತದೆ ಆತ್ಮನು ಸದಾ ನೋಡುತ್ತಾನೆ. ಅಹಂಕಾರವು ಸದಾ ಕಾಣುತ್ತದೆ. ಆದ್ದರಿಂದ ಅಂತಃಕರಣದಲ್ಲಿರುವ ಅಹಂಕಾರವೂ ಸಹ ಅಂತಃಕರಣದ ಧರ್ಮವಾದ ಕಾಣುವಿಕೆಯನ್ನು ಹೊಂದಿದೆಯೇ ವಿನಃ ಆತ್ಮಧರ್ಮವಾದ ನೋಡುವಿಕೆಯನ್ನು ಹೊಂದಲಾರದು

ಆದುದರಿಂದ "ನಾನು" ಎಂದು ಕರೆಸಿಕೊಳ್ಳುವ ಆತ್ಮನು "ನನ್ನನ್ನು" ಎಂದು ಕರೆಸಿಕೊಳ್ಳುವ ಅಹಂಕಾರವನ್ನು ಸದಾ ನೋಡುತ್ತಲೂ–ತಿಳಿಯುತ್ತಲೂ ಇರುತ್ತಾನೆ. ಅವನು ಎಂದೂ ಕಾಣುವ ಅಹಂಕಾರ ಸ್ಥಾನಕ್ಕಾಗಲೀ, ಅಹಂಕಾರವು ಎಂದೂ ನೋಡುವ ಸ್ಥಾನಕ್ಕಾಗಲೀ ಹೋಗುವುದೇ ಇಲ್ಲ. ಇದು ಪ್ರತ್ಯಕ್ಷವಾಗಿ ಎಲ್ಲರಿಗೂ ತಿಳಿದ ವಿಷಯವೇ ಆಗಿದೆ.

## ಅಹಂಕಾರಾದಿಗಳು ಆತ್ಮಧರ್ಮವಲ್ಲ

(ಮತ್ತೊಂದು ರೀತಿಯಿಂದ ಪ್ರತಿಪಾದನೆ ಮಾಡುತ್ತಾರೆ)

**ಪ್ರ : 39. ಆತ್ಮಕ್ಕೆ ಗೋಚರವಾಗುವ ಅಹಂಕಾರವು ಆತ್ಮಧರ್ಮವೇ ಆಗಿದ್ದ ಪಕ್ಷದಲ್ಲಿ, "ನನ್ನನ್ನು ನಾನು ತಿಳಿಯುತ್ತೇನೆ" ಎಂಬ ಈ ವಾಕ್ಯದಲ್ಲಿ ಆತ್ಮನು ನಿಜವಾಗಿಯೂ ಅಹಂಕಾರವನ್ನು ತಿಳಿಯುತ್ತಿದ್ದರೆ ಎರಡು ರೀತಿಯಿಂದ ತಿಳಿಯಬಹುದು. ೧) ಸಂಪೂರ್ಣವಾದ ಆತ್ಮನೇ ಈ ಅಹಂಕಾರವನ್ನು ತಿಳಿಯಬಹುದು. ೨) ಇಲ್ಲವೇ ಅಂಶಮಾತ್ರದಿಂದ ತಿಳಿಯಬಹುದು.**

ಉ : ಇವೆರಡೂ ವಿಕಲ್ಪಗಳನ್ನು ವಿವರಿಸಿ ಇವೆರಡೂ ಅಸಮಂಜಸ ಎಂಬುದನ್ನು ತೋರಿಸುತ್ತಾರೆ. ಸಾಮಾನ್ಯವಾಗಿ "ನಾನು ನೋಡುತ್ತೇನೆ, ನಾನು ಕೇಳುತ್ತೇನೆ, ನಾನು ತಿಳಿಯುತ್ತೇನೆ" ಎಂದು ವ್ಯಾವಹಾರಿಕವಾಗಿ

ಮಾತಾಡುವುದು ಸಹಜವಾಗಿದೆ. ಇಲ್ಲಿ, ಆತ್ಮನಲ್ಲಿ ಇಲ್ಲದ ದ್ರಷ್ಟೃತ್ವ, ಶ್ರೋತೃತ್ವ, ಜ್ಞಾತತ್ವವನ್ನು ಆತ್ಮನ ಮೇಲೆ ಹೇರುತ್ತೇವೆ. ಇವೆಲ್ಲವೂ ಅಂತಃಕರಣವೆಂಬ ಉಪಾದಿಯಿಂದಲೇ ಸೃಷ್ಟಿಸಲ್ಪಟ್ಟವೆ. ನಿಜವಾಗಿ ಇವು ಯಾವೂ ಆತ್ಮನಲ್ಲಿಲ್ಲ. ಪ್ರಾರಂಭದಲ್ಲಿ ಸಾಮಾನ್ಯ ಜನರಿಗೆ ತಿಳಿಸಿಕೊಡಲು ಆತ್ಮನಲ್ಲಿ ಇಲ್ಲದ ಈ ದ್ರಷ್ಟೃತ್ವಾದಿಗಳನ್ನು ಕಲ್ಪಿಸಿ ದೃಶ್ಯವಾದ ಅಂತಃಕರಣ ವನ್ನು ನಿರಾಕರಿಸುತ್ತಾರೆ. ಅಂತಃಕರಣವನ್ನು ನಿರಾಕರಿಸುವ ಮಟ್ಟಿಗೆ ಮಾತ್ರ ಆತ್ಮನ ದ್ರಷ್ಟೃತ್ವಾದಿಗಳನ್ನು ಕಲ್ಪಿಸುತ್ತಾರೆ. ಮುಂದೆ ಆತ್ಮನ ಮೇಲೆ ಹೇರಿದ ಈ ದ್ರಷ್ಟೃತ್ವಾದಿಗಳನ್ನು ಸಹ ನಿರಾಕರಿಸುತ್ತಾರೆ. ಮುಂದೆ ಸಾಕ್ಷೀ ಸಾಕ್ಷ್ಯ ಅನ್ವಯ ವ್ಯತಿರೇಕ ಯುಕ್ತಿಯಲ್ಲಿ ಆತ್ಮನ ಮೇಲೆ ಹೇರಿದ ದ್ರಷ್ಟೃತ್ವಾದಿಗಳ ನಿರಾಕರಣೆಯನ್ನು ನೋಡಬಹುದು.

**ಮೇಲಿನ ವಿಕಲ್ಪಕ್ಕೆ ಸಮಾಧಾನ :** ಅಹಂಕಾರವು ಆತ್ಮನ ಸ್ವರೂಪ ಭೂತವಾದುದೇ ಆಗಿದ್ದರೆ ಆತ್ಮನು ತನ್ನ ಸ್ವರೂಪವೇ ಆದ ಅಹಂಕಾರ ವನ್ನು ಸಂಪೂರ್ಣ ರೂಪದಿಂದಲೂ ತಿಳಿಯಲಾರನು; ಮತ್ತು ಅಂಶರೂಪ ದಿಂದಲೂ ತಿಳಿಯಲಾರನು. ಏಕೆಂದರೆ ಆತ್ಮನ ಸ್ವರೂಪವೇ ಆದ ಅಹಂ ಕಾರವು ಆತ್ಮನಿಗಿಂತ ಭಿನ್ನವಾಗಿರಲಾರದು. ಮತ್ತು ಆತ್ಮ ಅಹಂಕಾರಗಳೆ ರಡೂ ಎರಡೆಂಬುದಿಲ್ಲದೆ ಒಂದೇ ಆಗಬೇಕಾಗುತ್ತದೆ.

ಆದುದರಿಂದ ಈ ಪಕ್ಷದಲ್ಲಿ ಆತ್ಮನು ಅಹಂಕಾರವನ್ನು ತಿಳಿಯುತ್ತಾ ನೆಂದರೆ ಅವನು ತನ್ನನ್ನು ತಾನೇ ತಿಳಿದುಕೊಂಡಂತಾಯಿತು. ಇದು ಅಸಂಭವ. ಈ ಹಿಂದೆ ಹೇಳಿದಂತೆ ಒಂದೇ ಆದ ಆತ್ಮವು ತನಗೆ ತಾನೇ ಕರ್ತೃವು ಮತ್ತು ತನಗೆ ತಾನೇ ಕರ್ಮವು ಆಗಲಾರದು.

ಇನ್ನು ಎರಡನೇ ಪಕ್ಷದಂತೆ ಆತ್ಮನು ತನ್ನ ಒಂದು ಅಂಶದಿಂದ ಮತ್ತೊಂದಂಶವಾದ ಅಹಂಕಾರವನ್ನು ತಿಳಿಯುತ್ತಾನೆಂದರೆ ಅದೂ ಅಸಂ ಭವ. ಏಕೆಂದರೆ ಆತ್ಮನಲ್ಲಿ ಅಂಶಗಳಾಗಲಿ, ಬೇರೆ ಬೇರೆ ಭಾಗಗಳಾಗಲಿ ಇಲ್ಲವೇ ಇಲ್ಲ. **"ಸದೇವ ಸೌಮ್ಯೇದಮಗ್ರಮಾಸೀದೇಕಮೇವಾದ್ವಿ ತೀಯಂ ಬ್ರಹ್ಮ"** ಅಹಂಕಾರದಿಂದ ಅವ್ಯಕ್ತದವರೆಗಿರುವ ಸರ್ವವೂ ಕಲ್ಪಿತವಾಗುವುದಕ್ಕಿಂತ ಮೊದಲು ಸ್ವಜಾತೀಯ, ವಿಜಾತೀಯ, ಸ್ವಗತ

ಭೇದ ಶೂನ್ಯವಾದ, ತನಗೆ ಎರಡನೆಯದಿಲ್ಲದ ಸತ್ತಾ ಮಾತ್ರವಾದ ಒಂದೇ ಒಂದು ವಸ್ತು ಇತ್ತು, ಎಂಬ ಛಾಂದೋಗ್ಯ ಉಪನಿಷತ್ತಿನ ಪ್ರಮಾಣವೂ ಇದನ್ನು ಪುಷ್ಟೀಕರಿಸುತ್ತದೆ.

ಈ ರೀತಿ ಆತ್ಮನು ಎಂದೂ ಜ್ಞೇಯವಾಗುವುದು ಶಕ್ಯವಿಲ್ಲ. ಮತ್ತು ಅಹಂಕಾರವು ಆತ್ಮಧರ್ಮವಾಗಿದ್ದರೆ ಅದು ಎಂದಿಗೂ ಕಾಣಬಾರದಾಗಿತ್ತು. ಆದರೆ ಅಹಂಕಾರವು ನಮಗೆ ಗೋಚರವಾಗುವುದರಿಂದ ಅದು ಆತ್ಮನಿಗಿಂತ ಭಿನ್ನವೇ ಆಗಿದೆ ಎಂಬುದು ನಿರ್ವಿವಾದವಾಗಿ ಅನುಭವಸಿದ್ಧವಾಯಿತು. ಆದುದರಿಂದ ಅಹಂಕಾರವು ಆತ್ಮಸ್ವರೂಪವೂ,ಆತ್ಮನ ಒಂದಂಶವೂ ಎಂದೂ ಆಗಲಾರದು.

ಯುಕ್ತಿ ೩. :—

**ಪ್ರ : 40. ಒಬ್ಬನೇ ಧರ್ಮಿಯು ಒಂದೇಕಾಲಕ್ಕಾಗಲೀ ಅಥವಾ ಕ್ರಮದಿಂದಲಾಗಲೀ ನೋಡುವವನೂ, ಮತ್ತು ಕಾಣುವವನೂ ಎರಡೂ ಆಗಲಾರನೇ ? ಉದಾಹರಣೆ ಸಹಿತ ತಿಳಿಸಿರಿ.**

ಉ : ಒಂದು ವಸ್ತುವು ನೋಡುತ್ತಿರುವಾಗ ಅದು ಎಲ್ಲಾ ನೋಡುವ ಕೆಲಸವನ್ನೇ ಮಾಡುತ್ತಿರುತ್ತದೆ; ಅದೇ ಕಾಲದಲ್ಲಿ ಅದು ತನಗೆ ತಾನೇ ಹೇಗೆ ಕಂಡೀತು ! ಎಂದೂ ಶಕ್ಯವಿಲ್ಲ

ಮತ್ತು ಅದೇ ವಸ್ತುವು ನೋಡುತ್ತಿರುವ ಕಾಲವನ್ನು ಬಿಟ್ಟು ಬೇರೆ ಕಾಲದಲ್ಲಿ ಕಾಣಲ್ಪಡುತ್ತದೆ ಎಂಬುದೂ ಸಂಭವಿಸಲಾರದು. ಏಕೆಂದರೆ ಅದು ಕಾಣುವ ವಸ್ತುವಾಗಿಬಿಟ್ಟರೆ ಅದನ್ನು ನೋಡುವವರೇ ಯಾರೂ ಇಲ್ಲದಂತಾಗುತ್ತದೆ. ಮತ್ತು ಅದು ಕಾಣಲ್ಪಡುವ ಸ್ಥಾನಕ್ಕೆ ಬಂದಾಗ ನೋಡುವವಸ್ತುವೆಂದು ಪರಿಗಣಿಸಲೂ ಸಾಧ್ಯವಾಗುವುದಿಲ್ಲ. ಆದರೆ ಆತ್ಮನು ಸದಾ ನೋಡುವವನೆಂದು ವೇದಾಂತಗಳಲ್ಲೆಲ್ಲಾ ಪ್ರಸಿದ್ಧವಾಗಿದ್ದಾನೆ. ಭಗವದ್ಗೀತೆಯ 13 ನೇ ಅಧ್ಯಾಯದಲ್ಲಿ ಆತ್ಮನನ್ನು ಕುರಿತು "ಉಪದ್ರಷ್ಟಾ" ಎಂದು ಕರೆಯಲಾಗಿದೆ.

**ಪೂರ್ವಪಕ್ಷಿ :-** **ಮಮಕಾರ ಅಂದರೆ ನನ್ನದೆಂಬ ಅಭಿಮಾನ, ಇಚ್ಛೆ, ಕ್ರಿಯೆ, ಮೊದಲಾದವುಗಳೆಲ್ಲಾ ಅನಾತ್ಮವೆಂದೇ ನಾವು ವ್ಯವ**

**ಹಾರ ಮಾಡುತ್ತಿದ್ದೇನೆ. ಮತ್ತು ನೀವು ಮೇಲೆ ಹೇಳಿದ ಯುಕ್ತಿಗೆ ಅನುಸಾರವಾಗಿ ಅವೆಲ್ಲಾ ಜಡಧರ್ಮಗಳೆಂದು ಸಿದ್ಧವಾಯಿತು. ಆದುದರಿಂದ ಅವುಗಳನ್ನು ನಾವು ಅನಾತ್ಮವೆಂದೇ ತಿಳಿಯೋಣ. ಆದರೆ "ನಾನು" ಎಂಬುದು ಮಾತ್ರ ಸಾಕ್ಷಿಯಾದ ಆತ್ಮನ ದ್ಯೋತಕ ವಾಗಿದೆ. ಮತ್ತು "ನಾನು ಬ್ರಹ್ಮನಿದ್ದೇನೆ" ಎಂದು ಹೇಳುವ ಮಹಾವಾಕ್ಯದಿಂದ ಮುಕ್ತ ಸ್ಥಿತಿಯಲ್ಲಿಯೂ ಸಹ "ನಾನು" ಎಂಬುದು ಇರುವುದೆಂದು ಸಿದ್ಧವಾಗುತ್ತದೆ. ಆದುದರಿಂದ ಅಹಂಕಾರವು ಮಾತ್ರ ಅನಾತ್ಮ ಧರ್ಮವೆಂದು ಹೇಳುವುದು ಸರಿಯಾಗ ಲಾರದು.**

**ಸಿದ್ಧಾಂತಿಯ ಸಮಾಧಾನ :—** "ನಾನು ಬ್ರಹ್ಮನಿದ್ದೇನೆ" ಎಂಬ ಮಹಾವಾಕ್ಯದ ಆಧಾರದ ಮೇಲಿನಿಂದ "ನಾನು" ಎಂಬುದು ಆತ್ಮನ ಸ್ವರೂಪವೆಂದು ಹೇಳಕೂಡದು. ಏಕೆಂದರೆ ಮತ್ತೊಂದು ವಾಕ್ಯವನ್ನು ನೋಡಿರಿ- "ನಾನು ಕೆಂಪು ಬಣ್ಣದವನು" ಈ ವಾಕ್ಯದಲ್ಲಿ ಕೆಂಪು ಬಣ್ಣವು ಆತ್ಮ ಧರ್ಮವೆಂದು ಹೇಳಬಹುದೇ. ಈ ಕೆಂಪುಬಣ್ಣವು ದೇಹ ಧರ್ಮವೆಂಬುದು ಸರ್ವರಿಗೂ ಸಮ್ಮತ. ಆದುದರಿಂದ "ನಾನು ಬ್ರಹ್ಮನಿದ್ದೇನೆ" ಎಂಬ ವಾಕ್ಯದ ಆಧಾರದ ಮೇಲಿನಿಂದ "ನಾನು" ಎಂಬ ಅಹಂಕಾರವು ಆತ್ಮನ ಸ್ವರೂಪವೆಂದು ಹೇಳುವುದು ಸಾರ್ವತ್ರಿಕವಾದ ಹಾಗೂ ಸಮರ್ಪಕವಾದ ನಿಯಮವಾಗಲಾರದು.

**ಪ್ರ : 41. "ನಾನು ಬ್ರಹ್ಮನಿದ್ದೇನೆ" ಎಂಬ ವಾಕ್ಯದಲ್ಲಿ ಬರುವ "ನಾನು" ಎಂಬುದು ಅಹಂಕಾರದ ದ್ಯೋತಕವಲ್ಲವೆ ?**

ಉ : "ನಾನು ಬ್ರಹ್ಮನಿದ್ದೇನೆ" ಎಂಬ ವಾಕ್ಯದಲ್ಲಿ ಬರುವ "ನಾನು" ಎಂಬುದು ಅಹಂಕಾರದ ದ್ಯೋತಕವಲ್ಲ. ಅಲ್ಲಿ "ನಾನು" ಎಂಬ ಕಲ್ಪನೆಯನ್ನು ಸಂಪೂರ್ಣವಾಗಿ ಕಿತ್ತುಹಾಕುವುದೇ ಆಗಿದೆಯೇ ವಿನಃ ಅದಕ್ಕೆ ಪುಷ್ಟಿಯನ್ನು ಕೊಡುವುದಲ್ಲ. ಎಲ್ಲಾ ಮಹಾವಾಕ್ಯಗಳಲ್ಲಿಯೂ ಹೀಗೆಯೇ ತಿಳಿಯಬೇಕು.

**ಪ್ರ : 42. ಹಾಗಾದರೆ ಮಹಾವಾಕ್ಯಗಳ ಸಿದ್ಧಾಂತವೇನು ?**

ಉ : ಮಹಾವಾಕ್ಯಗಳು, ಅವುಗಳೊಳಗಿನ ಪದಗಳಿಂದ ಒಂದೇ ಒಂದಾದ ಅದ್ವಿತೀಯ ಆತ್ಮವಸ್ತುವಿನ ಜ್ಞಾನವನ್ನು ಮಾಡಿಕೊಡುತ್ತವೆಂದು ವೇದಾಂತ ಸಿದ್ಧಾಂತವಿದೆ.

"ಅಹಂಬ್ರಹ್ಮಾಸ್ಮಿ" ಎಂಬ ವಾಕ್ಯದಲ್ಲಿ ಅಹಂ=ಬ್ರಹ್ಮವೆಂದೂ, 'ತತ್ತ್ವಮಸಿ' ವಾಕ್ಯದಲ್ಲಿ ತತ್=ತ್ವಂ ಎಂದೂ, 'ಪ್ರಜ್ಞಾನಂ ಬ್ರಹ್ಮ' ಎಂಬ ವಾಕ್ಯದಲ್ಲಿ ಪ್ರಜ್ಞಾನಂ=ಬ್ರಹ್ಮ ಎಂದೂ ಅಯಮಾತ್ಮ ಬ್ರಹ್ಮ ಎಂಬ ವಾಕ್ಯದಲ್ಲಿ ಅಯಮಾತ್ಮ= ಬ್ರಹ್ಮ ಎಂದೂ ಆ ವಾಕ್ಯಗಳ ಬೋಧೆ. ಹೀಗೆ ಮಹಾವಾಕ್ಯಗಳಲ್ಲಿರುವ ಎರಡೆರಡು ಪದಗಳು ಒಂದೇ ವಸ್ತುವನ್ನು ತೋರಿಸುತ್ತವೆ.

ಪದಗಳು ಎರಡಿದ್ದು ಆ ಎರಡೂ ಪದಗಳು ಒಂದೇ ವಸ್ತುವನ್ನು ತೋರಿಸುತ್ತಿದ್ದರೆ, ಅವುಗಳಲ್ಲಿ "ಸಾಮಾನಾಧಿಕರಣ್ಯವಿದೆ ಎಂದು ತಿಳಿಯಬೇಕು.

**ಪ್ರ : 43. ಪ್ರಜ್ಞಾನಂ, ಅಯಂಆತ್ಮ, ಅಹಂ, ತ್ವಮ್ ಈ ಪದಗಳು ಮಹಾವಾಕ್ಯದಲ್ಲಿ ಜೀವನನ್ನು ತೋರಿಸುತ್ತವೆ. ಉಳಿದ ಪದಗಳು ಬ್ರಹ್ಮನನ್ನು ತೋರಿಸುತ್ತವೆ. ಆಗ ಜೀವಬ್ರಹ್ಮರಲ್ಲಿ ಏಕತೆಯನ್ನು ಹೇಗೆ ಸಾಧಿಸಬೇಕು.**

ಉ : ಆಗ ಆ ವಾಕ್ಯಗಳೊಳಗಿನ ಸಾಮಾನಾಧಿಕರಣ್ಯವನ್ನು ಸಾಧಿಸಬೇಕು.

**ಪ್ರ : 44. ಸಾಮಾನಾಧಿಕರಣ್ಯ ವೆಂದರೇನು ?**

ಉ : ಸಮಾನ ವಿಭಕ್ತಿ ಬಲದಿಂದ, ಅಧಿಕರಣವೆಂದರೆ ಅರ್ಥರೂಪವಾದ ಒಂದೇ ಆಶ್ರಯವು ಯಾವ ಶಬ್ದಗಳಿಗಿದೆಯೋ ಅಂತಹ ಆ ಎರಡು ಶಬ್ದಗಳ ಸಮಾನಾಧಿಕರಣ್ಯ ಸಂಬಂಧವೆನ್ನುತ್ತಾರೆ. ಅಂದರೆ ಎರಡೂ ಶಬ್ದಗಳನ್ನು ಏಕಾರ್ಥವುಳ್ಳವುಗಳನ್ನಾಗಿ ಮಾಡುವುದೇ ಸಾಮಾನಾಧಿಕರಣ್ಯ ಸಂಬಂಧವೆನಿಸುವುದು.

ಉದಾ : "ಸರ್ವಂಹ್ಯೇತದ್ಬ್ರಹ್ಮ" ಎಂಬ ವಾಕ್ಯದಲ್ಲಿ ಏತತ್, ಬ್ರಹ್ಮ ಎಂಬುವು ಭಿನ್ನ ಪದಗಳು. ಆದರೂ ಇವು ಒಂದೇ ವಿಭಕ್ತಿಯಲ್ಲಿವೆ.

ಇವುಗಳ ಅರ್ಥರೂಪವಾದ ಆಶ್ರಯವೂ ಸಹ ಒಂದೆ. ಆದುದರಿಂದ "ಏತತ್" ಶಬ್ದದಿಂದ ತೋರುವ ಜಗತ್ತು, ಬ್ರಹ್ಮದೊಡನೆ ತನ್ನ ಸ್ವರೂಪ ಬಾಧೆ ಮಾಡಿಕೊಂಡು ಅಭೇದವಾಗಿದೆ.

ಪ್ರತಿಬಿಂಬವು ಬಿಂಬಸ್ವರೂಪದಲ್ಲಿ ಬಾಧೆಯಾಗಿ ಅಭೇದವಾದಂತೆ ವೇದಾಂತ ಶಾಸ್ತ್ರದಲ್ಲಿ "ಅಹಂ ಬ್ರಹ್ಮಾಸ್ಮಿ" ಎಂಬ ವಾಕ್ಯದಲ್ಲಿ 'ಅಹಂ' ಶಬ್ದದಿಂದ ತೋರುವ ಚಿದಾಭಾಸನು ಬ್ರಹ್ಮದೊಡನೆ ತನ್ನ ಸ್ವರೂಪ ಬಾಧೆ ಉಂಟುಮಾಡಿ ಅಭೇದ ವಾಗಿದ್ದಾನೆ.

**ಪ್ರ : 45. ಜೀವನು (ಚಿದಾಭಾಸನು) ನಾಶವುಳ್ಳವನು. ಬ್ರಹ್ಮವೋ ನಾಶವಿಲ್ಲದ್ದು. ಈ ರೀತಿ ನಾಶವಾಗುವ ಜೀವನಿಗೂ ಅವಿನಾಶಿಯಾದ ಬ್ರಹ್ಮಕ್ಕೂ ಅಭೇದವು ಹೇಗೆ ಸಿದ್ಧಿಸುತ್ತದೆ. ?**

ಉ : ವಿನಾಶವುಳ್ಳ ಜೀವನು " ನಾನು ಬ್ರಹ್ಮನಾದೆ " ನೆಂದು ತನ್ನನ್ನು ಬ್ರಹ್ಮದೊಡನೆ ಅಭೇದವಾಗಿ ತಿಳಿಯಲಾರನೆಂದು ಹೇಳುವುದು ಸರಿಯಲ್ಲ.

**ಉದಾ :** ಕನ್ನಡಿಯಲ್ಲಿ ನಮ್ಮ ಪ್ರತಿಬಿಂಬ ಕಾಣುತ್ತದೆ. ಪ್ರತಿ ಬಿಂಬ ಜೀವಿಸಿರುವುದು ಎಲ್ಲಿಯವರೆಗೆ ? ಕನ್ನಡಿ ಇರುವವರೆಗೆ. ಕನ್ನಡಿಯ ನಾಶದಿಂದ ಆಭಾಸ ಮುಖಕ್ಕೆ ಅಂದರೆ ಪ್ರತಿಬಿಂಬಕ್ಕೆ ಬಾಧೆಯುಂಟಾಗಿ ನಿಜಮುಖದೊಡನೆ ಏಕತ್ವ ಸಂಭವಿಸುತ್ತದೆ.

ಹಾಗೆಯೇ ಚಿದಾಭಾಸನು ಅಂದರೆ ಜೀವನು ಜೀವಿಸಿರುವುದು ಎಲ್ಲಿ ಯವರೆಗೆ ! ಅಂತಃಕರಣ ಅಥವ ಅವಿದ್ಯೆ ಇರುವವರೆಗೆ. ಅಂತಃಕರಣ ಅಥವ ಅವಿದ್ಯೆ ನಾಶದಿಂದ ಚಿದಾಭಾಸನಿಗೆ ಬಾಧೆಯುಂಟಾಗಿ ತನ್ನ ನಿಜ ಮುಖವಾದ ಬ್ರಹ್ಮದಲ್ಲಿ ಏಕತ್ತ್ವವು ಸಂಭವಿಸುತ್ತದೆ. ಇದನ್ನು ನಾವು ಸಾಮಾನಾಧಿಕರಣ್ಯದಿಂದ ಸಾಧಿಸಬೇಕು.

**ಪ್ರ : 46. ಸಾಮಾನಾಧಿಕರಣ್ಯವು ಎಷ್ಟುವಿಧವಾಗಿದೆ ?**

ಉ : ಸಾಮಾನಾಧಿಕರಣ್ಯವು 1) ಬಾಧ ಸಾಮಾನಾಧಿಕರಣ್ಯ ವೆಂದೂ 2) ಮುಖ್ಯ ಸಮಾನಾಧಿಕರಣ್ಯವೆಂದೂ ಎರಡುವಿಧವಾಗಿದೆ.

**ಪ್ರ : 47. ಬಾಧ ಸಾಮಾನಾಧಿಕರಣ್ಯವೆಂದರೇನು ?**

ಉ : ಪ್ರತಿಬಿಂಬವನ್ನುಂಟುಮಾಡುವ ದರ್ಪಣದ ನಾಶದಿಂದ ಪ್ರತಿಬಿಂಬವು ಬಿಂಬದೊಡನೆ ಏಕತ್ವವನ್ನು ಹೊಂದುವಂತೆ ಅಂತಃಕರಣದಲ್ಲಿ ಪ್ರತಿಬಿಂಬಿಸಿರುವ ಬ್ರಹ್ಮದ ಪ್ರತಿಬಿಂಬವು ಅಂದರೆ ಆಭಾಸವು ಅಂತಃಕರಣದ ನಾಶದಿಂದ ಬ್ರಹ್ಮದೊಡನೆ ಏಕತ್ವವನ್ನು ಹೊಂದುವುದು. ಅಂದರೆ ಜೀವಭಾವದ ಬಾಧೆಯಿಂದ ಬ್ರಹ್ಮ ಭಾವವನ್ನು ಹೊಂದುವುದು. ಇದೇ ಬಾಧ ಸಾಮಾನಾಧಿಕರಣ್ಯ.

**ಉದಾ :** ಒಬ್ಬ ದಾರಿ ಹೋಕನಿಗೆ ಸ್ವಲ್ಪದೂರದಲ್ಲಿ ಏನೋ ಒಂದು ವಸ್ತುವು ಇರುವಂತೆ ಕಂಡಿತು. ಅವನು ನಿಂತುನೋಡಿದ. ಅದು ಮತ್ತೇನೂ ಅಲ್ಲ "ಮೋಟುಮರ" ಎಂದುಕೊಂಡನು. ಸಮೀಪಕ್ಕೆ ಹೋಗಿ ನೋಡುತ್ತಾನೆ. ಅದು ಮೋಟುಮರವಲ್ಲ "ಮನುಷ್ಯ." ಇದನ್ನು ಶಾಸ್ತ್ರದಲ್ಲಿ "ಸ್ಥಾಣುರೇಷಃ ಪುಮಾನ್" ಎಂದು ಕರೆದಿದ್ದಾರೆ. ದೂರದಲ್ಲಿದ್ದು ನೋಡಿದಾಗ "ಸ್ಥಾಣು"ವಾಗಿ ಕಂಡದ್ದು "ಪುರುಷ" ಎಂಬ ಜ್ಞಾನದಿಂದ "ಸ್ಥಾಣು"ಎಂಬ ತಪ್ಪುತಿಳುವಳಿಕೆಯು ನಾಶವಾಗಿ ಹೋಯಿತು.

ಹಾಗೆಯೇ "ನಾನು ಬ್ರಹ್ಮವಾಗಿದ್ದೇನೆ" ಎಂಬ ಜ್ಞಾನದಿಂದ "ನಾನು" ಕರ್ತ, ಭೋಕ್ತ ಇತ್ಯಾದಿ ಸರ್ವ ಸಂಸಾರತ್ವ ಜ್ಞಾನವು ನಿವೃತ್ತಿಯಾಗುವುದು ಇದೇ ಬಾಧ ಸಾಮಾನಾಧಿಕರಣ್ಯ.

ಎಲ್ಲಿ ಜೀವನಿಗೆ ಬ್ರಹ್ಮದೊಡನೆ ಅಭೇದ ಪ್ರತಿಪಾದಕ ವಾಕ್ಯಗಳಿರುವವೋ ಆ ವಾಕ್ಯಗಳಲ್ಲಿ ಬಾಧ ಸಾಮಾನಾಧಿಕರಣವಿರುತ್ತದೆ. ಹೇಗೆಂದರೆ ಮೊದಲು ಪುರುಷನಲ್ಲಿ ಸ್ಥಾಣು ಭ್ರಮೆಯಾಗಿ ಬಳಿಕ ಪುರುಷನೆಂಬ ಜ್ಞಾನವಾಯಿತು. ಇಲ್ಲಿ ಪುರುಷನೊಡನೆ ಸ್ಥಾಣುವಿಗೆ ಅಭೇದವನ್ನು ಹೇಳಲಾಗಿದೆ. ಆಗ ಸ್ಥಾಣುವಿನ ಅಭಾವವುಳ್ಳವನು ಪುರುಷನೆಂತಲೂ ಜ್ಞಾನವಾಗುವುದು. ಇಲ್ಲಿ ಅಧಿಕರಣಕ್ಕಿಂತ ಅಭಾವವು ಬೇರೆಯಾಗಿರುವುದು. ಈ ಮತದಲ್ಲಿ ಸ್ಥಾಣುವಿನ ಅಭಾವ ವುಳ್ಳವನು ಪುರುಷನು. ಅಂದರೆ ಕಲ್ಪಿತದ ಅಭಾವವೇ ಅಧಿಷ್ಠಾನರೂಪವಾಗಿದೆ. ಈ ರೀತಿಯಿಂದ "ಜೀವೋ ಬ್ರಹ್ಮ" ಈ ವಾಕ್ಯಕ್ಕೆ ಜೀವನ ಅಭಾವವುಳ್ಳದ್ದು. ಬ್ರಹ್ಮವೆಂದು ಅರ್ಥ

ವಾಗುವುದು. ಅರ್ಥಾತ್ ಜೀವನ ಅಭಾವವೇ ಬ್ರಹ್ಮ; ಸ್ಥಾಣುವಿನ ಅಭಾವವೇ ಪುರುಷ. ಈ ರೀತಿಯಿಂದ ಕಲ್ಪಿತ ಪದಾರ್ಥಕ್ಕೆ ಯಾವ ಸ್ಥಳದಲ್ಲಿ ಸತ್ಯವಾದ ಪದಾರ್ಥದೊಡನೆ ಅಭೇದ ಹೇಳಲ್ಪಡುವುದೋ, ಆ ಸ್ಥಳದಲ್ಲಿ ಬಾಧ ಸಾಮಾನಾಧಿಕರಣವು ಸಿದ್ಧಿಸುತ್ತದೆ.

**ಪ್ರ : 48. ಮುಖ್ಯ ಸಾಮಾನಾಧಿಕರಣ್ಯವೆಂದರೇನು ?**

ಉ : ಯಾವ ಸ್ಥಳದಲ್ಲಿ ಕೂಟಸ್ಥನಿಗೆ ಬ್ರಹ್ಮದೊಡನೆ ಅಭೇದ ಹೇಳಲ್ಪಡುವುದೋ ಆ ಸ್ಥಳದಲ್ಲಿ ಅಭೇದ ಸಾಮಾನಾಧಿಕರಣ್ಯವು ಸಂಭವಿಸುತ್ತದೆ.

**ಉದಾ :** ಘಟಾಕಾಶ ಮಹಾಕಾಶಕ್ಕೆ ಯಾವ ಭೇದವೂ ಇಲ್ಲ. ಇಲ್ಲಿ ಮುಖ್ಯ ಸಾಮಾನಾಧಿಕರಣವು ಹೇಳಲ್ಪಡುವುದು. ಜಲಾಕಾಶಕ್ಕೆ ಮಹಾಕಾಶದೊಡನೆ ಅಭೇದ ಹೇಳಿದಾಗ ಜಲಾಕಾಶಕ್ಕೆ ಮಹಾಕಾಶದೊಡನೆ ಬಾಧ ಸಾಮಾನಾಧಿಕರಣವು ಸಂಭವಿಸುತ್ತದೆ ಮತ್ತು ಘಟಾಕಾಶಕ್ಕೆ ಮಹಾ ಕಾಶದೊಡನೆ ಅಭೇದ ಹೇಳಿದಾಗ ಅಭೇದ ಸಾಮಾನಾಧಿಕರಣವು ಸಂಭವಿಸುತ್ತದೆ. ಇದನ್ನೇ ಮುಖ್ಯ ಸಾಮಾನಾಧಿಕರಣವೆಂದು ತಿಳಿಯಬೇಕು.

**ಸಾರಾಂಶ :** "ಸ್ಥಾಣುರೇಷಃಪುಮಾನ್" ಎಂಬ ವಾಕ್ಯದಲ್ಲಿ ಕಲ್ಪಿತವಾದ ಮೋಟುಮರದ ನಿವೃತ್ತಿಯೇ ಅಧಿಷ್ಠಾನವಾದ "ಪುರುಷ"ನೆಂದು ಹೇಗೆ ಆಯಿತೋ ಹಾಗೆಯೇ "ಅಹಂಬ್ರಹ್ಮಾಸ್ಮಿ" ಎಂಬ ವಾಕ್ಯದಲ್ಲಿಯೂ ಕಲ್ಪಿತನಾದ ಜೀವನ ನಿವೃತ್ತಿಯೇ ಅಧಿಷ್ಠಾನವಾದ ಬ್ರಹ್ಮವು, ಎನ್ನುವ ಈ ಸಾಮಾನಾಧಿಕರಣ್ಯದ ಬಾಧಾರ್ಥವು ಸಿದ್ಧಿಸಿತು.

**ಪ್ರ : 49. ಬಾಧ ಸಾಮಾನಾಧಿಕರಣವನ್ನು ಉಪನಿಷತ್ತಿನ ಉದಾಹರಣೆಯೊಡನೆ ವಿವರಸಿರಿ :**

ಉ : "ಸರ್ವಂ ಹ್ಯೇತದ್ಬ್ರಹ್ಮ" ಎಂಬ ಈ ಶ್ರುತಿಯಲ್ಲಿ ಜಗತ್ತಿಗೆ ಬ್ರಹ್ಮದೊಡನೆ ಸಾಮಾನಾಧಿಕರಣ್ಯವು ಬಾಧಾರ್ಥದಲ್ಲಿ ಕಂಡುಬರುತ್ತದೆ. "ಅಹಂಬ್ರಹ್ಮಾಸ್ಮಿ" ಎಂಬಲ್ಲಿ ಜೀವನಿಗೆ ಬ್ರಹ್ಮದೊಡನೆ ಸಾಮಾನಾಧಿಕರಣ್ಯವು ಬಾಧಾರ್ಥದಲ್ಲಿ ಕಾಣಬರುತ್ತದೆ. "ಈಶಾವಾಸ್ಯಮಿದಗ್ಂ ಸರ್ವಂ" "ಏನ ಸರ್ವಮಿದಂತತಮ್" "ವಾಸುದೇವಸರ್ವಮಿತಿ" ಇವೆಲ್ಲವೂ ಜಗತ್ತಿಗೆ

ಬ್ರಹ್ಮದೊಡನೆ ಸಾಮಾನಾಧಿಕರಣ್ಯವು ಬಾಧಾರ್ಥದಲ್ಲಿ ಕಾಣಬರುತ್ತದೆ. ಈ ರೀತಿಯಾಗಿ ವೇದಾಂತ ಶಾಸ್ತ್ರಗಳಲ್ಲಿ ಚಿದಾಭಾಸನಿಗೆ ಬ್ರಹ್ಮದೊಡನೆ ಬಾಧ ಸಾಮಾನಾಧಿಕರಣವು ಹೇಳಲ್ಪಟ್ಟಿದೆ. ಹಾಗೆಯೇ ಜಗತ್ತಿಗೂ ಬ್ರಹ್ಮದೊಡನೆ ಬಾಧ ಸಾಮಾನಾಧಿಕರಣವು ಹೇಳಲ್ಪಟ್ಟಿದೆ. ಯಾವ ವಸ್ತುವಿಗೆ ಬಾಧೆಯುಂಟಾಗಿ ಯಾವುದರೊಡನೆ ಅಭೇದವಾಗುವುದೋ ಆ ವಸ್ತುವಿಗೆ ಆವಸ್ತುವಿನೊಡನೆ ಬಾಧ ಸಾಮಾನಾಧಿಕರಣವಿದೆ ಎಂದು ತಿಳಿಯಬೇಕು.

**ಪ್ರ : 50. ಶ್ರೀ ಸುರೇಶ್ವರಾಚಾರ್ಯರು ಯಾವ ಸಾಮಾನಾಧಿಕರಣವನ್ನು ಅನುಸರಿಸಿದ್ದಾರೆ ?**

ಉ : ಶ್ರೀ ಸುರೇಶ್ವರಾಚಾರ್ಯರು ಮುಖ್ಯ ಸಾಮಾನಾಧಿಕರಣವನ್ನೇ ಹೆಚ್ಚಾಗಿ ಅನುಸರಿಸಿರುವಂತೆ ಕಂಡುಬರುತ್ತದೆ.

**ಪ್ರ : 51. ಅವರು ಹೆಚ್ಚಾಗಿ ಬಾಧಸಾಮಾನಾಧಿಕರಣವನ್ನು ಅನುಸರಿಸದಿರಲು ಕಾರಣವೇನು ?**

ಉ : ಶ್ರೀ ಸುರೇಶ್ವರಾಚಾರ್ಯರಿಗೆ "ಅಹಂ ಬ್ರಹ್ಮಾಸ್ಮಿ" ಎಂಬ ವಾಕ್ಯದಲ್ಲಿ 'ಅಹಂ' ಶಬ್ದದಿಂದ ಕೂಟಸ್ಥನನ್ನು ಹೇಳಬೇಕೆಂಬುದೇ ಅವರ ಇಚ್ಛೆಯಾಗಿದೆ. ಅವರು 'ಅಹಂ' ಶಬ್ದಕ್ಕೆ ಕೂಟಸ್ಥನನ್ನು ಹೇಳುವುದರಿಂದ ಘಟಾಕಾಶಕ್ಕೂ ಮಹಾಕಾಶಕ್ಕೂ ಯಾವ ಭೇದವೂ ಇಲ್ಲದಿರುವುದರಿಂದ ಘಟಾಕಾಶ ಸಮಾನ ಕೂಟಸ್ಥನಿಗೂ ಮಹಾಕಾಶ ಸಮಾನ ಬ್ರಹ್ಮಕ್ಕೂ ಮುಖ್ಯ ಸಾಮಾನಾಧಿಕರಣ್ಯವೇ ಸಂಭವಿಸುತ್ತದೆಂದು ಹೇಳಿದ್ದಾರೆ.

ಪ್ರತಿಬಿಂಬ ವಾದದಲ್ಲಿ ಅಂತಃಕರಣದಲ್ಲಿ ಪ್ರತಿಬಿಂಬಿಸಿದ ಜೀವನಿಗೂ ಬ್ರಹ್ಮಕ್ಕೂ ಏಕತ್ವವು ಘಟಿಸಲಾರದು. ಆದುದರಿಂದ ಇಲ್ಲಿ ಜೀವನನ್ನು ಅಂದರೆ ಪ್ರತಿಬಿಂಬವನ್ನು ಬಾಧೆ ಮಾಡಲೇಬೇಕು. ಆದರೆ ಸುರೇಶ್ವರಾಚಾರ್ಯರು ಆಭಾಸವಾದವನ್ನು ಪುರಸ್ಕರಿಸುವುದರಿಂದ ಸ್ಫಟಿಕದಲ್ಲಿ ಕಂಡುಬಂದ ದಾಸವಾಳದ ಹೂವಿನ ಕೆಂಪು ಬಣ್ಣವು ಆಭಾಸ ರೂಪದಿಂದ ಇರುವಂತೆ ಕಂಡುಬಂದರೂ ನಿಜವಾಗಿ ಸ್ಫಟಿಕವು ಇದ್ದಂತೇ ಇರುತ್ತದೆ. ಅದು ಯಾವ ವ್ಯತ್ಯಾಸವನ್ನೂ ಹೊಂದುವುದಿಲ್ಲ. ಈ ಕಾರಣದಿಂದ

ಘಟಾಕಾಶ ಮಹಾಕಾಶಕ್ಕೆ ಏಕತ್ವವಿರುವಂತೆ ಕೂಟಸ್ಥನಿಗೂ ಬ್ರಹ್ಮಕ್ಕೂ ಏಕತ್ವವೇ ಘಟಿಸುವುದೆಂದು ಮುಖ್ಯ ಸಾಮಾನಾಧಿಕರಣವನ್ನೇ ಹೇಳಿದ್ದಾರೆ

ಅಂದರೆ ಯಾವುದರೊಡನೆ ಯಾವುದಕ್ಕೆ ನಿತ್ಯವೂ ಏಕತ್ವವಿರುವುದೋ ಅದು ಅದರೊಡನೆ ಮುಖ್ಯಸಾಮಾನಾಧಿಕರಣವೆನಿಸುವುದು ಇಲ್ಲಿ ಕೂಟಸ್ಥ ಚೇತನಕ್ಕೂ, ಬ್ರಹ್ಮಕ್ಕೂ ಸರ್ವದಾ ಏಕತ್ವವಿರುವುದರಿಂದ ಘಟಾಕಾಶ ಮಹಾಕಾಶದಂತೆ ಮುಖ್ಯ ಸಾಮಾನಾಧಿಕರಣವೇ ಸಂಭವಿಸುತ್ತದೆ

ಯಾವುದು ಸುಲಭವಾಗಿ ಯಾರಿಗೆ ಅನುಭವವಾಗಿದೆಯೋ ಅದನ್ನೇ ಅವರು ಅನುಸರಿಸಬಹುದು ಹೇಗೆ ಹೇಳಿದರೂ ಜೀವ ಬ್ರಹ್ಮರ ಏಕತೆಯನ್ನು ಸಿದ್ಧಿಸುವುದೇ ವೇದಾಂತದ ತಾತ್ಪರ್ಯ ಎರಡೂ ಸಾಮಾನಾಧಿಕರಣಗಳೂ ಈ ಕೆಲಸವನ್ನೇ ಮಾಡುವುದರಿಂದ ಎರಡಕ್ಕೂ ಮಾನ್ಯತೆಯಿದೆ

ಶ್ರೀ ಸುರೇಶ್ವರಾಚಾರ್ಯರೂ ಸಹ ಅಲ್ಲಲ್ಲಿ ಬಾಧಸಾಮಾನಾಧಿಕರಣ್ಯದ ಪಕ್ಷವನ್ನೂ ಸಹ ಹೇಳಿದ್ದಾರೆ ಎರಡೂ ಪಕ್ಷಗಳೂ ಅವರಿಗೆ ಸಮ್ಮತವಾಗಿವೆ ಮೂರನೇ ಅಧ್ಯಾಯದಲ್ಲಿಯೂ ಬಾಧ ಸಾಮಾನಾಧಿಕರಣ್ಯವನ್ನು ಅಂಗೀಕರಿಸಿದ್ದಾರೆ ಆದ್ದರಿಂದ ನೀವು ಯಾವ ಪಕ್ಷವನ್ನು ಬೇಕಾದರೂ ಅನುಸರಿಸಿ ಮಹಾವಾಕ್ಯ ಜ್ಞಾನವನ್ನು ಪಡೆದುಕೊಂಡರೆ ಸಾಕು, ಎಂಬುದೇ ಅವರ ಅಭಿಪ್ರಾಯ. "ಯಾರಿಗೆ ಯಾವ ಪ್ರಕ್ರಿಯೆಯಿಂದ ಆತ್ಮಜ್ಞಾನವಾಗುತ್ತದೆಯೋ ಅದೇ ಸರಿಯಾದುದೆಂದು ತಿಳಿಯಬೇಕು

(ಮೂರನೇ ಅಧ್ಯಾಯದಲ್ಲಿಯೂ ಇದರ ವಿವರಣೆ ನೋಡಬಹುದು)

**ಪ್ರ : 52. ಬಾಧ ಸಾಮಾನಾಧಿಕರಣ್ಯದಂತೆ "ನಾನು ಬ್ರಹ್ಮ" ಎಂಬವಾಕ್ಯವು "ನಾನು" ಎಂಬ ಕಲ್ಪನೆಯನ್ನು ಹೇಗೆ ಕಿತ್ತು ಹಾಕುತ್ತದೆ ? ಉದಾಹರಣೆಸಹಿತ ತಿಳಿಸಿರಿ**

ಉ · ಯಾವುದು ಗಿಡದ ಬೊಡ್ಡೆಯಾಗಿ ಕಾಣುತ್ತಿತ್ತೋ ಅದು ಗಿಡದ ಬೊಡ್ಡೆಯಲ್ಲ, ಮನುಷ್ಯನು. ಇಲ್ಲಿ ಗಿಡದ ಬೊಡ್ಡೆಯು ಮನುಷ್ಯನಾಗುವುದಾಗಲೀ, ಮನುಷ್ಯನು ಗಿಡದ ಬೊಡ್ಡೆಯಾಗುವುದಾಗಲೀ ಎಂದೂ

ಸಂಭವಿಸುವುದೇ ಇಲ್ಲ. ಇಲ್ಲಿ ಒಂದೇ ವಸ್ತುವಿನ ವಿಷಯದಲ್ಲಿ ಎರಡು ತಿಳುವಳಿಕೆಗಳಿವೆ. ಅವುಗಳಲ್ಲಿ ಒಂದು ತಪ್ಪು ತಿಳುವಳಿಕೆ ಮತ್ತೊಂದು ಸರಿಯಾದ ತಿಳುವಳಿಕೆ. ಇವುಗಳಲ್ಲಿ ತಪ್ಪು ತಿಳುವಳಿಕೆಯನ್ನು ಸರಿಯಾದ ತಿಳುವಳಿಕೆಯು ಸಂಪೂರ್ಣವಾಗಿ ನಾಶಪಡಿಸುತ್ತದೆ. ಪುರುಷನೆಂಬ ತಿಳುವಳಿಕೆಯಿಂದ ಇಲ್ಲಿ ಗಿಡದ ಬೊಡ್ಡೆ ಎಂಬ ತಿಳುವಳಿಕೆಯು ನಾಶವಾಗಿ ಹೋಗುತ್ತದೆ.

ಮೂರನೇ ಅಧ್ಯಾಯದಲ್ಲಿ ಶ್ರೀ ಸುರೇಶ್ವರಾಚಾರ್ಯರು ಈ ಬಾಧ ಸಾಮಾನಾಧಿಕರಣ್ಯಕ್ಕೆ ಒಂದು ಉದಾಹರಣೆ ಕೊಟ್ಟಿದ್ದಾರೆ— "ಯಾವುದು ಹಾವಾಗಿ ಕಂಡಿತ್ತೋ ಅದು ಹಾವಲ್ಲ ಹಗ್ಗ"ಇಲ್ಲಿ ಒಂದು ತಪ್ಪು ತಿಳುವಳಿಕೆ ಮತ್ತೊಂದು ಸರಿಯಾದ ತಿಳುವಳಿಕೆ, ಇದೆ. ಹಾವೆಂದುಕೊಂಡದ್ದು ತಪ್ಪು ತಿಳುವಳಿಕೆ; ಹಗ್ಗವೆಂದುಕೊಂಡದ್ದು ಸರಿಯಾದ ತಿಳುವಳಿಕೆ. ಇಲ್ಲಿ ಹಾವೆಂಬ ತಪ್ಪು ತಿಳುವಳಿಕೆಯನ್ನು ಹಗ್ಗವೆಂಬ ಸರಿಯಾದ ತಿಳುವಳಿಕೆಯು ಹೊಡೆದು ಹಾಕಿತು. ಆಗ ಹಾವೆಂಬ ತಿಳುವಳಿಕೆಯು ನಾಶವಾಗಿ ಹೋಯಿತು.

ಹಾಗೆಯೇ "ನಾನು ಬ್ರಹ್ಮನಿದ್ದೇನೆ" ಎಂಬ ವಾಕ್ಯದಲ್ಲಿಯೂ ಕೂಡ ಎರಡುತಿಳುವಳಿಕೆಗಳಿವೆ. ಒಂದು ತಪ್ಪುತಿಳುವಳಿಕೆ;ಮತ್ತೊಂದು ಸರಿಯಾದ ತಿಳುವಳಿಕೆ. ಇಷ್ಟೊತ್ತಿನವರೆಗೆ ಯಾವುದನ್ನು "ನಾನು'' ಎನ್ನುತ್ತಿದ್ದೆನೋ ಅದು ನಾನಲ್ಲ "ಬ್ರಹ್ಮ". ಇಲ್ಲಿ 'ನಾನು' ಎಂಬ ತಪ್ಪು ತಿಳುವಳಿಕೆಯನ್ನು ಬ್ರಹ್ಮ ಎಂಬ ಸರಿಯಾದ ತಿಳುವಳಿಕೆಯು ಹೊಡೆದುಹಾಕಿತು. ಆಗ 'ನಾನು' ಎಂಬ ತಿಳುವಳಿಕೆಯು ನಾಶವಾಯಿತು. ಹೀಗೆಯೇ ಎಲ್ಲಾ ಮಹಾವಾಕ್ಯಗಳಲ್ಲೂ ಬಾಧ ಸಾಮಾನಾಧಿಕರಣ್ಯವನ್ನೇ ಅನುಸರಿಸಬಹುದು.

**ಪ್ರ : 53. ಈ "ನಾನು'' ಎಂಬುವ ತಪ್ಪುತಿಳುವಳಿಕೆ ಅಥವಾ ಕಲ್ಪನೆ ನಾಶವಾಗುವುದರಿಂದ ಆಗುವ ಪ್ರಯೋಜನವೇನು?**

ಉ : "ನಾನು" ಎಂಬ ತಪ್ಪು ಕಲ್ಪನೆಯು ನಮ್ಮ ಬೆನ್ನು ಬಿಟ್ಟರೆ ದ್ವೈತ ಸಮೂಹ ಜೊಳಗೆ ನಮ್ಮ ಬೆನ್ನು ಬಿಡದ ವಸ್ತುವೇ ಉಳಿಯುವುದಿಲ್ಲ ವೆಂದು ಹೇಳಬಹುದು. ಏಕೆಂದರೆ ಉಳಿದ ಸರ್ವ ವಸ್ತುಗಳ ಸಂಬಂಧ ವೆಲ್ಲಾ ಈ ನಾನೆಂಬ ಅಭಿಮಾನದ ಮೇಲೆಯೇ ಅವಲಂಬಿಸಿರುತ್ತವೆ.

ಮಮಕಾರಕ್ಕೆ ಅಹಂಕಾರವೇ ಬೀಜ. ಅಹಂಕಾರವು ನಾಶವಾದೊಡನೆಯೇ ಸರ್ವ ದ್ವೈತ ಜಾಲದಿಂದ ಮುಕ್ತನಾಗುತ್ತಾನೆ. ಮಬ್ಬುಗತ್ತಲೆಯಲ್ಲಿ ಭ್ರಮೆಯಿಂದ ಕಲ್ಪಿಸಿದ ಸರ್ಪವು ಬೆಳಕುಬಂದಮೇಲೆ ಇರಲು ಸಾಧ್ಯವೇ !

**ಯುಕ್ತಿ ೪. : ಅಹಂಕಾರವು ಮೂರಾವಸ್ಥೆಗಳಲ್ಲಿಯೂ ಇಲ್ಲದಿರುವುದರಿಂದ ಅದು ಆತ್ಮಸ್ವರೂಪವಲ್ಲ.**

ಪ್ರ : 54. **ಅಹಂಕಾರವೂ ಆತ್ಮ ಧರ್ಮವೆಂದರೆ ಬರುವ ದೋಷವೇನು ?**

ಉ : ಅಹಂಕಾರವೂ ಆತ್ಮ ಸ್ವರೂಪವೇ ಆಗಿದ್ದರೆ ಆತ್ಮ ಇರುವಲ್ಲೆಲ್ಲಾ ಈ ಅಹಂಕಾರವೂ ಇರಬೇಕಾಗಿತ್ತು. ಸುಷುಪ್ತಾವಸ್ಥೆ ಮತ್ತು ಮೋಕ್ಷಸ್ಥಿತಿಯಲ್ಲಿ ಅಹಂಕಾರಕ್ಕೆ ಇರುವಿಕೆಯೇ ಇಲ್ಲ. ಆದುದರಿಂದ ಅಂಹಕಾರವು ಆತ್ಮಸ್ವರೂಪವಾಗಲಾರದು. ಒಂದುಪಕ್ಷ ಅಹಂಕಾರವು ಆತ್ಮ ಸ್ವರೂಪವೇ ಎಂದುಕೊಂಡರೆ– ಆತ್ಮನಂತೆ ಅಹಂಕಾರವೂ ನಿತ್ಯವೆಂದಂತಾಗುತ್ತದೆ. ಈ ರೀತಿ ಅಹಂಕಾರವು ನಿತ್ಯವೆಂದು ನಂಬಿದರೆ ಮೋಕ್ಷವನ್ನೇ ಪ್ರತಿಪಾದನೆಮಾಡುವ ಪ್ರಸ್ಥಾನತ್ರಯಗಳೆಲ್ಲಾ ಹುರುಳಿಲ್ಲದವಾಗುತ್ತವೆ. ಏಕೆಂದರೆ ಅಹಂಕಾರ ಇರುವವರೆಗೆ ಮಮಕಾರವು ಬೆನ್ನುಬಿಡಲಾರದು– ಮಮಕಾರ ಇರುವವರೆಗೆ ಇದು ನನ್ನದು-ಇದು ಪರರದು ಎಂಬ ದ್ವೈತ ಬುದ್ಧಿ ಬೆನ್ನುಬಿಡಲಾರದು-ನನ್ನದು ಚನ್ನಾಗಿದೆ–ನಿನ್ನದು ಚನ್ನಾಗಿಲ್ಲ ಎಂಬ ಶೋಭನಾಶೋಭನಾ ಬುದ್ಧಿಯು ದ್ವೈತ ಬುದ್ಧಿ ಇರುವವರೆಗೆ ಬೆನ್ನು ಬಿಡಲಾರದು. ನನ್ನ ವಸ್ತು ಕಳೆಯಿತು–ನನ್ನವರು ಸತ್ತರು ಎಂಬ ದುಃಖವು ಶೋಭನಾಶೋಭನಾ ಬುದ್ಧಿಯಿರುವರೆವಗೆ ನಾಶವಾಗಲಾರದು. ಆದರಿಂದ ಜಗತ್ತಿನ ದುಃಖದಿಂದ ಎಂದೂ ನಿವಾರಣೆಯೇ ಇಲ್ಲ. ಆದ್ದರಿಂದ ಈ ಸಮಸ್ತ ದ್ವೈತ ಮತ್ತು ದುಃಖ ಜಾಲಕ್ಕೆ ಈ ಅಹಂಕಾರವೇ ಬೀಜ. ಅದು ನಿವಾರಣೆಯಾಗದೆ ಮೋಕ್ಷದ ಆಸೆಯಾದರೂ ಎಲ್ಲಿ ಬಂದೀತು !

**ಪೂರ್ವಪಕ್ಷ : ಮಾವು ಮೊದಲಾದ ಕಾಯಿಗಳಿಗೆ ಹಸಿರು ಬಣ್ಣವಿರುವುದು ಸ್ವಾಭಾವಿಕವಾದುದು. ಆದರೂ ಸ್ವಾಭಾವಿಕವಾದ ಹುಳಿ ಮತ್ತು ಹಸಿರುಬಣ್ಣಗಳು ಕೊನೆಯುವರೆಗೂ ಇರದೆ ಸಿಹಿ**

ಮತ್ತು ಕೆಂಪು ಬಣ್ಣಗಳು ಬರುತ್ತವೆ. ಇದು ಲೋಕಪ್ರಸಿದ್ಧಿ. ಆದರೂ ಆ ಮಾವು ಮೊದಲಾದವುಗಳಿಗೆ ಹಸಿರು ಬಣ್ಣವು ಸ್ವಾಭಾವಿಕವಾದ ಧರ್ಮವಲ್ಲವೆ ! ಅದರಂತೆಯೇ ಅಹಂಕಾರವೂ ಸಹಿತ ನಿದ್ರೆ ಮತ್ತು ಮುಕ್ತಾವಸ್ಥೆಯಲ್ಲಿ ತನ್ನ ಸ್ವಾಭಾವಿಕತೆಯನ್ನು ಮಾವಿನ ಕಾಯಿಯಂತೆ ಕಳೆದುಕೊಂಡಾಕ್ಷಣ ಅದು ತನ್ನ ಸ್ವಾಭಾವಿಕವಾದ ಆತ್ಮಸ್ವರೂಪವೇ ಆಗುವುದರಲ್ಲಿ ಇರುವ ಬಾಧೆ ಏನು ? ಹಸಿರು ಬಣ್ಣ ಮತ್ತು ಹುಳಿಯು ಹೋಗಿ ಕೆಂಪು ಬಣ್ಣ ಮತ್ತು ಸಿಹಿ ಬಂದಾಕ್ಷಣ ಅದು ಮಾವಿನಕಾಯಿಯಲ್ಲದೆ ಬೇರೆ ಆಗುತ್ತದೆಯೇ ? ಅದರಂತೆ ಅಹಂಕಾರವೂ ಸಹಿತ ಸುಷುಪ್ತಿ ಮತ್ತು ಮುಕ್ತಾವಸ್ಥೆಗಳಲ್ಲಿಲ್ಲದಿದ್ದರೂ ಅದು ಆತ್ಮಸ್ವರೂಪವಾಗಬಹುದು.

**ಸಮಾಧಾನ :** ಮಾವು ಮೊದಲಾದವುಗಳು ಸ್ವಭಾವತ ಬದಲಾವಣೆಗಳಿಗೆ ಈಡಾಗುವುದು ಸಹಜ. ಅವು ಪ್ರಕೃತಿಯಿಂದ ಆದವುಗಳು. ವ್ಯತ್ಯಾಸವಾಗುವುದು, ಹಳೆ ಗುಣ ಹೋಗಿ ಹೊಸಗುಣ ಬರುವುದು ಇವೆಲ್ಲಾ ಸ್ವಭಾವಗಳು. ಆತ್ಮನು ಎಂದೂ ಬದಲಾವಣೆ ಹೊಂದುವವನೇ ಅಲ್ಲ. ಅವನಿಗೆ ವಿಕಾರವೇ ಇಲ್ಲ. ಬೃಹದಾರಣ್ಯಕ ಉಪನಿಷತ್ತಿನ ೪–೩–೨೩ ರಲ್ಲಿ **"ನಹಿದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ ಅವಿನಾಶಿತ್ವಾತ್"** ದ್ರಷ್ಟೃವಿನ ದೃಷ್ಟಿಗೆ ವಿಪರಿಲೋಪವೇ ಇಲ್ಲ. ಏಕೆಂದರೆ ಆ ನೋಡುವುದು ಅವಿನಾಶಿ. ಅವಿನಾಶಿಗೆ ಯಾವ ವಿಕಾರಗಳೂ ಇಲ್ಲ, ಎಂಬುದಾಗಿ ಹೇಳಿದೆ. ಭಗವದ್ಗೀತೆಯ ಎರಡನೆಯ ಅಧ್ಯಾಯದಲ್ಲಿ ಭಗವಂತನು ಸಾಂಖ್ಯತತ್ವವನ್ನು ಹೇಳುವಾಗ **"ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ"** ಈ ಆತ್ಮನು ಇಂದ್ರಿಯಗಳಿಗೆ ಕಾಣಬರುವವನಲ್ಲ; ಮನಸ್ಸಿಗೆ ದೊರಕನು; ಯಾವ ವಿಕಾರಕ್ಕೂ ಒಳಪಡದವನು ಎಂದು ಹೇಳಿದ್ದಾನೆ. ಆದ್ದರಿಂದ ಆತ್ಮನು ಮಾವಿನಕಾಯಿ ತನ್ನ ಸ್ವಭಾವವನ್ನು ಬದಲಿಸಿದಂತೆ ಆತ್ಮನು ಸುಷುಪ್ತಿಯಲ್ಲಿ ಮತ್ತು ಮುಕ್ತಾವಸ್ಥೆಯಲ್ಲಿ ಯಾವ ಬದಲಾವಣೆಯನ್ನು ಹೊಂದುವುದಿಲ್ಲ. ಇವನು ಅವಿಕಾರಿ ಮೊದಲಿದ್ದ ಗುಣಗಳು ಹೋಗುವುವೆಂದಾಗಲಿ ಹೊಸಗುಣಗಳು ಬರುವುವೆಂದಾಗಲೀ ಹೇಳಲು ಅವಕಾಶವೇ ಇಲ್ಲ.

**ಯುಕ್ತಿ ೫. : ಅಹಂಕಾರಕ್ಕೆ ಉತ್ಪತ್ತಿನಾಶಗಳಿವೆ ಆತ್ಮನು ನಿತ್ಯನು ಮತ್ತು ಅವಿನಾಶಿಯು ಅದುದರಿಂದ ಅಹಂಕಾರವು ಆತ್ಮ ಧರ್ಮವಾಗಲಾರದು.**

**ಪೂರ್ವಪಕ್ಷ :** ಅಹಂಕಾರಕ್ಕೂ ಉತ್ಪತ್ತಿನಾಶಗಳಿರುವಂತೆ ಆತ್ಮ ನಿಗೂ ಉತ್ಪತ್ತಿ ನಾಶಗಳಿವೆ ಎಂದೂ ಮತ್ತು ಆತ್ಮನು ಅನಿತ್ಯನೆಂದೂ ಪ್ರಮಾಣಗಳಿಂದಲೇ ಸಿದ್ಧವಾಗುತ್ತಿರುವಾಗ ಮಾಡುವುದಾದರೂ ಏನಿದೆ! ಬೌದ್ಧ ಮತದಂತೆ ಆತ್ಮನೂ ಅನಿತ್ಯನೆಂದರೆ ಬರುವ ದೋಷವೇನು ?

**ಸಮಾಧಾನ :** ಅಹಂಕಾರಕ್ಕೆ ಉತ್ಪತ್ತಿನಾಶಗಳಿವೆ ಆತ್ಮನಿಗೆ ಉತ್ಪತ್ತಿ ನಾಶಗಳಿಲ್ಲ ಭಗವದ್ಗೀತೆಯಲ್ಲಿ ಭಗವಂತನು **"ದೇಹೀ ನಿತ್ಯ ಮವಧ್ಯೋಽಯಂ"** ಆತ್ಮನು ನಿತ್ಯನು, ಅವಧ್ಯನೆಂದು ಸ್ಪಷ್ಟಪಡಿ ಸಿದ್ದಾನೆ ಆದ್ದರಿಂದ ಆತ್ಮನು ನಿತ್ಯನು. ಅಹಂಕಾರವೂ ಅನಿತ್ಯವೆಂದು ಸಿದ್ಧವಾಗುತ್ತದೆ ಈಗ ಅನಿತ್ಯವಾದ ಅಹಂಕಾರವು ನಿತ್ಯವಾದ ಆತ್ಮ ಧರ್ಮವಾಗಿಬಿಟ್ಟರೆ ಆತ್ಮನೂ ಅನಿತ್ಯನಾಗಬೇಕಾಗುತ್ತದೆ ಏಕೆಂದರೆ ಧರ್ಮವು ತನ್ನ ಹುಟ್ಟುಸಾವುಗಳಿಂದ ಧರ್ಮಿಯನ್ನು ಮಾರ್ಪಡಿಸಿಯೇ ಬಿಡುತ್ತದೆ

ಕೊಡವನ್ನು ನೋಡುವವನು ಕೊಡಕ್ಕಿಂತ ಬೇರೆಯಾಗಿರುವಂತೆ ಅಂತಃಕರಣ ಮೊದಲಾದ ಎಲ್ಲಾ ದ್ವೈತ ವಸ್ತುಗಳನ್ನು ಅವುಗಳ ಆಗು ಹೋಗುಗಳನ್ನು ನೋಡುವವನು ಅವುಗಳಿಗಿಂತ ಬೇರೆಯಾಗಿರಲೇಬೇಕು ಆದ್ದರಿಂದ ಆತ್ಮನ ಸಾಕ್ಷೀಭಾವವು ಅಖಂಡವಾಗಿಯೂ,ಸ್ವತಃ ಸಿದ್ಧವಾಗಿಯೂ ಇದೆ ಕೊಡವೂ ಪ್ರಮಾಣಗಮ್ಯ, ಅಹಂಕಾರವೂ ಪ್ರಮಾಣಗಮ್ಯ ಆತ್ಮನಾದರೋ ಅಪ್ರಮೇಯನು, ಆದ್ದರಿಂದ ಅಹಂಕಾರವು ಎಂದೂ ಆತ್ಮ ಧರ್ಮವಾಗಲಾರದು ಎಲ್ಲಾ ಪ್ರಮಾಣಗಳೂ ಆತ್ಮನಿಂದಲೇ ಸಿದ್ಧವಾಗ ಬೇಕು

**ಯುಕ್ತಿ ೬ : ಧರ್ಮಧರ್ಮಿಗಳಾದ ಅಹಂಕಾರ, ಆತ್ಮ ಇವು ಪರಸ್ಪರ ವಿರುದ್ಧ ಲಕ್ಷಣಗಳುಳ್ಳದ್ದರಿಂದ ಒಂದೇ ಆಗಲಾರವು ಮತ್ತು ನಿಜವಾದ ಧರ್ಮಧರ್ಮಿಗಳೂ ಆಗಲಾರವು.**

**ಪ್ರ : 55. ಅಹಂಕಾರ ಮತ್ತು ಆತ್ಮ ಧರ್ಮಾಧರ್ಮಿಗಳಾಗಿ ಒಂದೇ ಏಕೆ ಆಗಬಾರದು ?**

ಉ : ಧರ್ಮಿಯಾದ ಆತ್ಮನು ಚಿದ್ರೂಪನು ಧರ್ಮವಾದ ಅಹಂಕಾರವೋ ಜಡ. ಧರ್ಮಿಯಾದ ಆತ್ಮನು ದ್ರಷ್ಟ, ಧರ್ಮವಾದ ಅಹಂಕಾರವು ದೃಶ್ಯ ಮತ್ತು ಅನಾತ್ಮ, ಆದುದರಿಂದ ಅಹಂಕಾರ ಮತ್ತು ಆತ್ಮ ಒಂದೇ ಆಗಲಾರವು.

**ಸಾರಾಂಶ :** ಆದುದರಿಂದ ನೋಡುವಿಕೆಯೂ, ನೋಡಲ್ಪಡುವಿಕೆಯೂ ಒಂದೇ ವೇಳೆಯಲ್ಲಿ ಒಂದೇ ಕಡೆಗೆ ಎಂದಿಗೂ ಕೂಡಿರಲಾರವು. ಮತ್ತು ಆತ್ಮನು ದೃಶ್ಯವಾದ ಅಹಂಕಾರಕ್ಕೆ ಅಥವಾ ಬುದ್ಧಿಗೆ ದೃಶ್ಯನೂ ಅಲ್ಲ, ಮತ್ತು ಸಾಕ್ಷಿಯಾದ ಆತ್ಮನು ತನ್ನನ್ನು ತಾನೂ ನೋಡಿಕೊಳ್ಳಲಾರ.

**ಉದಾ :** ಅನುಕೂಲವಾದ ಗಾಳಿಯಿಂದ ಪ್ರಜ್ವಲಿಸುತ್ತಿರುವ ಬೆಂಕಿಯನ್ನು ಅದಕ್ಕೆ ವಿರುದ್ಧವಾದ ಚಳಿಯು ಹೇಗೆ ಮುಟ್ಟಲಾರದೋ ಹಾಗೆಯೇ ಆತ್ಮನನ್ನು ಅದಕ್ಕೆ ವಿರುದ್ಧ ಧರ್ಮಗಳುಳ್ಳ ಅಹಂಕಾರವು ಎಂದೂ ಒಂದಾಗಿ ಕೂಡಲಾರದು.

## ಆತ್ಮನು ಬುದ್ಧಿಗೂ ಅಗೋಚರನು

**ಪ್ರ : 56. ಆತ್ಮನು ಬುದ್ಧಿಗೆ ಗೋಚರನಾಗಬಹುದಲ್ಲ? ಹಾಗೆ ಬುದ್ಧಿಗೆ ಗೋಚರಿಸಿದನೆಂದರೆ ಬರುವ ದೋಷವೇನು ?**

ಉ : ಆತ್ಮನು ಬುದ್ಧಿಗೆ ಗೋಚರನೆಂದರೆ ಎಲ್ಲಾ ವ್ಯವಹಾರಗಳೂ ಲೋಪವಾಗುತ್ತವೆ. ೧) ಆತ್ಮನು ಬುದ್ಧಿಗೆ ಗೋಚರನೆಂದರೆ ಆತ್ಮನಿಗೆ ಬುದ್ಧಿಯು ಗೋಚರವಾಗುವುದು. ಇವೆರಡೂ ಒಂದೇ ಕಾಲಕ್ಕೆ ನೋಡುವ ಮತ್ತು ಕಾಣುವ ಪದಾರ್ಥಗಳೆಂದಾಗುತ್ತದೆ. ಇದು ಅಸಂಬದ್ಧ. ಆತ್ಮನನ್ನು ಬುದ್ಧಿಯೂ, ಬುದ್ಧಿಯನ್ನು ಆತ್ಮನೂ ಒಂದನ್ನೊಂದು ಒಂದೇ ಕಾಲಕ್ಕೆ ನೋಡುತ್ತವೆ ಮತ್ತು ಒಂದೇ ಕಾಲದಲ್ಲಿ ಕಾಣುತ್ತವೆಂದರೆ ಇದು ಅಸಂಬದ್ಧವಲ್ಲವೆ ! ಆತ್ಮನು ಬುದ್ಧಿಯನ್ನು ನೋಡುವವನೂ ಬುದ್ಧಿಯು

ಆತ್ಮನನ್ನು ನೋಡುವುದೂ ಮತ್ತು ಆತ್ಮನಿಂದ ನೋಡಲ್ಪಡುವುದೂ ಎರಡೂ ಆಗಬೇಕಾಗುತ್ತದೆ.

೨) ಒಂದುವೇಳೆ ಆತ್ಮಬುದ್ಧಿಗಳೆರಡೂ ನೋಡುವ ವಸ್ತುಗಳೇ ಆಗಿಬಿಟ್ಟರೆ ಕಾಣುವ ವಸ್ತುಗಳೇ ಇಲ್ಲದಂತಾಗಿ ವ್ಯವಹಾರವೇ ನಿಂತು ಹೋಗುತ್ತದೆ.

೩) ಮತ್ತು ಶ್ರುತಿವಾಕ್ಯವೂ ಸುಳ್ಳಾಗುವ ಪ್ರಸಂಗ ಬರುತ್ತದೆ. ಬೃಹದಾರಣ್ಯಕದಲ್ಲಿ **"ನಹಿದ್ರಷ್ಟು ದೃಷ್ಟೇರ್ವಿಪರಿ ಲೋಪೋ ವಿದ್ಯತೇ"** ಎಂಬ ವಾಕ್ಯವೂ ಸುಳ್ಳಾಗುತ್ತದೆ. ಈ ರೀತಿ ಬುದ್ಧಿಯು ಆತ್ಮನನ್ನು ನೋಡುತ್ತದೆಂದರೆ ಮೂರು ದೋಷಗಳು ಬರುತ್ತವೆ.

**ಪ್ರ : 57. ಶ್ರುತಿ ವಾಕ್ಯವು ಎಲ್ಲಿ? ಹೇಗೆ? ಸುಳ್ಳಾಗುವುದು ?**

ಉ : ಯಾವನ ನೋಡುವಿಕೆಯು ಎಂದೂ ತುಂಡಾಗುವುದಿಲ್ಲವೋ ಅಂತಹ ಆತ್ಮನು ಎಂದೂ ದೃಶ್ಯವಾಗಲಾರನು ಎಂದು ಬೃಹದಾರಣ್ಯಕ ಶ್ರುತಿಯು ೪-೩-೨೩ರಲ್ಲಿ ಹೇಳಿದೆ.

ಹಾಗೆ ಆತ್ಮನು ದೃಶ್ಯನಾದರೆ ಅವನ ಸ್ವಾಭಾವಿಕವಾದ ನೋಡುವಿಕೆಯೇ ಹಾಳಾಗಿ ಹೋಗುತ್ತದೆ. ಆಗ ಜಗತ್ತೆಲ್ಲವೂ ದ್ರಷ್ಟೃರಹಿತವಾಗಿ ಕುರುಡಾಗಬೇಕಾಗುತ್ತದೆ.

ಇಲ್ಲವೇ ಬುದ್ಧಿ ಮೊದಲಾದವುಗಳನ್ನು ದ್ರಷ್ಟೃ ಎಂದು ಒಪ್ಪಿಕೊಂಡರೆ ಜಗತ್ತೆಲ್ಲಾ ದ್ರಷ್ಟೃವೇ ಆಗಿ ಉಳಿಯುವುದು ಆಗ ದೃಶ್ಯವೇ ಇಲ್ಲದಂತಾಗುತ್ತದೆ. ಹೀಗೆ ಅಸಮಂಜಸವಾದ ಪರಿಣಾಮಗಳು ಒದಗುವುದರಿಂದ ಆತ್ಮನು ದೃಶ್ಯವಾಗುವನೆಂದು ಹೇಳುವುದು ಸರಿಯಾಗಲಾರದು.

**ಪ್ರ : 58. ಕಠೋಪನಿಷತ್ತಿನಲ್ಲಿ " ದೃಶ್ಯತೆತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿನಃ " "ಸೂಕ್ಷ್ಮವನ್ನು ನೋಡುವ ಸೂಕ್ಷ್ಮ ಬುದ್ಧಿಯಿಂದ ಆತ್ಮನನ್ನು ಗ್ರಹಿಸಬಹುದೆಂದು ಹೇಳಿದೆ. ಮತ್ತು ಭಗವದ್ಗೀತೆಯಲ್ಲಿ 'ಬುದ್ಧಿಗ್ರಾಹ್ಯಂ ಅತೀಂದ್ರಿಯಂ' ಬುದ್ಧಿಯು ಆತ್ಮನನ್ನು ತಿಳಿಯುತ್ತದೆ, ಇಂದ್ರಿಯಗಳಿಂದ ತಿಳಿಯ**

**ಲಾಗದೆಂದೂ ಹೇಳಿದೆ, ಮತ್ತು ಶ್ರೀ ಶಂಕರಾಚಾರ್ಯರು 'ಶಮ ದಮಾದಿ ಸಂಯುಕ್ತಂ ಸುಸಂಸ್ಕೃತಮನಃ ಆತ್ಮದರ್ಶನೇಕರಣಂ' ಶಮದಮಾದಿಗಳಿಂದ ಸುಸಂಸ್ಕೃತವಾದ ಮನಸ್ಸು ಆತ್ಮನನ್ನು ನೋಡ ಬಹುದೆಂದು ಹೇಳಿದ್ದಾರಲ್ಲ–ಇದಕ್ಕೆ ನಿಮ್ಮ ಸಮಾಧಾನವೇನು ?**

ಉ : ಬುದ್ಧಿಯು ಆತ್ಮನನ್ನು ನೋಡಲಾರದು. ಸುಸಂಸ್ಕೃತ ಬುದ್ಧಿಯು ಆತ್ಮನ ಮೇಲೆ ಆವರಿಸಿರುವ ಆವರಣವನ್ನು ಮಾತ್ರ ಭಂಗ ಮಾಡುತ್ತದೆಯೇವಿನಃ ಆತ್ಮನನ್ನು ನೋಡಲಾರದು. ಬುದ್ಧಿಯು ಆತ್ಮನನ್ನು ತಿಳಿಯುತ್ತದೆಂಬ ಮಾತು ಉಪಚಾರಕ್ಕಾಗಿ ಹೇಳಿದ್ದಾಗಿದೆ. ಮತ್ತು ಬುದ್ಧ್ಯಾದಿಗಳು ಅಪಂಚೀಕೃತ ಪಂಚ ಮಹಾಭೂತಗಳ ಸಮಷ್ಟಿ ಸತ್ವ ಗುಣದಿಂದ ಹುಟ್ಟಿವೆ. ಆದುದರಿಂದ ಅವು ಜಡಗಳೇ ವಿನಃ ಚೇತನ ವಾಗಲಾರವು.

**ಪ್ರ : 59. ಆತ್ಮನು ದ್ರಷ್ಟನೆಂದೂ ಉಳಿದೆಲ್ಲಾ ಬುದ್ಧ್ಯಾದಿ ಜಗತ್ತು ವಿನಾಶಿ ಎಂದೂ ಹೇಳಲು ಪ್ರಮಾಣವೇನು ?**

ಉ : ೧) ಬೃಹದಾರಣ್ಯಕೋಪನಿಷತ್ತಿನ ಮೂರನೇ ಅಧ್ಯಾಯದ ಏಳನೇ ಬ್ರಾಹ್ಮಣದ ೨೩ನೇ ಮಂತ್ರದಲ್ಲಿ "ನಾನ್ಯೋಽತೋಽಸ್ತಿ ದ್ರಷ್ಟಾ" ತಂ ಆತ್ಮಾನ್ತರ್ಯಾಮ್ಯಮೃತೋಽತೋಽನ್ಯದಾರ್ತಂ" ಈ ಆತ್ಮನಿಗಿಂತ ಬೇರೆ ದ್ರಷ್ಟೃವೇ ಇಲ್ಲ—ಈ ಆತ್ಮನು ಅಂತರ್ಯಾಮಿಯು : ಅಮೃತನು: ಇವನಿಗಿಂತ ಮಿಕ್ಕಿದ್ದು ಆರ್ತವು ಅಂದರೆ ನಾಶವುಳ್ಳದ್ದು— ಇರುವಿಕೆ ಇಲ್ಲದ್ದೆಂದು ಹೇಳಿದೆ.

೨) ನೇತಿ, ನೇತಿ ದ್ವಾರ ಎಲ್ಲಾ ಬಾಧೆಯಾದ ನಂತರ ಉಳಿಯುವ ಪರಬ್ರಹ್ಮವನ್ನು ವರ್ಣಿಸುವ ಶ್ರುತಿಯೂ ಪ್ರಮಾಣವಾಗಿದೆ.

೩) ಭಗವದ್ಗೀತೆಯೂ "ಉಪದ್ರಷ್ಟಾ" ಎಂದು ಕ್ಷೇತ್ರಜ್ಞನನ್ನು ಪ್ರತಿಪಾದಿಸಿದೆ.

ಈ ರೀತಿ ಶ್ರುತಿಯು ಬ್ರಹ್ಮವು ನಿರ್ಗುಣವೆಂದು ಹೇಳುತ್ತಿರುವಾಗ ಅದನ್ನು ಉಪೇಕ್ಷಿಸುವುದಾದರೂ ಹೇಗೆ !

**ಸಾರಾಂಶ :** ಮೇಲಿನ ಎಲ್ಲಾ ಯುಕ್ತಿಗಳಿಂದ ಅಹಂಕಾರ ಮೊದಲಾದದ್ವೈತ ಪ್ರಪಂಚವೆಲ್ಲಾ ಆತ್ಮನಿಂದ ತೀರಾ ಬೇರೆಯಾದುದೆಂದೂ, ಸುಳ್ಳಾದುದೆಂದೂ, ಅನಾತ್ಮವಾದುದೆಂದೂ ತಿಳಿಯಬೇಕು. ಈ ದ್ವೈತಕ್ಕೆ ಅಜ್ಞಾನ ಒಂದೇ ಕಾರಣವಾಗಿರುತ್ತದೆ. ಈ ದ್ವೈತವನ್ನು ತಿಳಿಸಿಕೊಡುವುದೂ ಕಠಿಣವಾಗಿದೆ–ಕಾರಣ ಅದು ಅನಿರ್ವಚನೀಯವು.

**ಪ್ರ : 60. ಅಹಂಕಾರ ಮೊದಲಾದ ದ್ವೈತ ಪ್ರಪಂಚವೆಲ್ಲಾ ಸುಳ್ಳಾದುದು — ಅನಿರ್ವಚನೀಯವಾದುದು ಎಂಬುದನ್ನು ಹೇಗೆ ಸಿದ್ಧಮಾಡಬೇಕು ?**

ಉ : ಆತ್ಮನಿಂದ ಬೇರೆಯಾದ ಅಹಂಕಾರಾದಿ ಜಗದ್ರೂಪ ವಸ್ತುವು ಆತ್ಮನನ್ನು ಬಿಟ್ಟು ಸ್ವತಂತ್ರವಾಗಿ ಇರಲಾರದು. ಹಗ್ಗವಿಲ್ಲದೆ ಹಾವು ಎಂದೂ ಕಾಣಲಾರದಲ್ಲವೇ ! ಆದುದರಿಂದ ಆತ್ಮನ ಅಸ್ತಿತ್ವವಿಲ್ಲದೆ ಜಗತ್ತು ಸಿದ್ಧವಾಗಲಾರದು. ಜಗತ್ತು ಆತ್ಮನಿಂದ ಬೇರೆ ಬೇರೆಯಾಗಿಯೂ ಇಲ್ಲ; ಮತ್ತು ಅದರೊಡನೆ ಒಂದಾಗಿಯೂ ಇಲ್ಲ. ಅವು ಪರಸ್ಪರ ವಿರುದ್ಧ ಧರ್ಮ ಉಳ್ಳವುಗಳು. ಆದುದರಿಂದ ಅಹಂಕಾರಾದಿ ದ್ವೈತ ಪ್ರಪಂಚವೆಲ್ಲಾ ಆತ್ಮನಲ್ಲಿ ಕಲ್ಪಿತ.

## ಆತ್ಮನಲ್ಲಿ ಕರ್ತೃತ್ವಾದಿಗಳ ಭ್ರಾಂತಿ

**ಪ್ರ 61. ಈ ಅಹಂಕಾರಾದಿ ದ್ವೈತ ಪ್ರಪಂಚವು ಆತ್ಮನಲ್ಲಿ ಹೇಗೆ ಕಲ್ಪಿತವಾಗಿದೆ ? ಉದಾಹರಣೆ ಸಹಿತ ತಿಳಿಸಿರಿ.**

ಉ : ಈ ದ್ವೈತವಾದ, ದೃಶ್ಯವಾದ ಜಡ ವಸ್ತುಗಳಿಗೆ ಶಬ್ದ ಮೊದಲಾದ ಗುಣಗಳಿವೆ. ಆತ್ಮನು ನಿರ್ಗುಣನು. ಆದರೆ ಅಹಂಕಾರವೆಂಬ ಉಪಾದಿಯಲ್ಲಿ ವಿರುದ್ಧ ಧರ್ಮಗಳಾದ ಆತ್ಮ ಮತ್ತು ದೃಶ್ಯವಸ್ತುಗಳು ಒಡಮೂಡಿರುವುವು ಅಂದರೆ ಪ್ರತಿಬಿಂಬಿಸಿರುವುವು.

**ಉದಾ :** ಒಂದು ಕನ್ನಡಿ ಮುಂದೆ ಒಂದು ಬಿಳೀ ಸ್ಫಟಿಕ, ಒಂದು ಕೆಂಪು ಹೂ ಇಡಿರಿ. ಕನ್ನಡಿಯಲ್ಲಿ ಸ್ಫಟಿಕದ ಪ್ರತಿಬಿಂಬ ನೋಡಿರಿ. ಸ್ಫಟಿಕವು ಕೆಂಪಾಗಿ ಕಾಣುತ್ತಿರುತ್ತದೆ. ಹೊರಗಡೆ ಎರಡಾಗಿದ್ದ ವಸ್ತುಗಳು ಪ್ರತಿ

ಬಿಂಬದಲ್ಲಿ ಒಂದೇಕಡೆ ಕೂಡಿದಂತಾಗಿ, ಹೂವಿನ ಕೆಂಪು ಬಣ್ಣವು ಸ್ಪಟಿಕದ ಬಣ್ಣವೇ ಆಗಿರಬೇಕೆಂಬ ಮೋಹ ಹುಟ್ಟುತ್ತದೆ. ಸ್ಪಟಿಕವು ಕೆಂಪಾಗಿ ಕಾಣುತ್ತದೆ.

ಹಾಗೆಯೇ ಆತ್ಮಾನಾತ್ಮಗಳೆರಡೂ ಅಹಂಕಾರೋಪಾದಿಯಲ್ಲಿ ಪ್ರತಿಬಿಂಬಿತವಾಗಿ, ಒಂದರಂತೆ ಮತ್ತೊಂದು ಕಾಣುತ್ತವೆ. ಹೀಗೆ ಒಂದನ್ನು ಮತ್ತೊಂದನ್ನಾಗಿ ತಿಳಿಯುವುದಕ್ಕೆ ಅಧ್ಯಾಸವೆನ್ನುತ್ತಾರೆ ನಮ್ಮ ಲೌಕಿಕ ಪಾರಲೌಕಿಕ ವ್ಯವಹಾರವೆಲ್ಲವೂ ಈ ಅಧ್ಯಾಸದ ಮೂಲಕವಾಗಿಯೇ ಸಿದವಾಗುತ್ತವೆ. ಇದನ್ನೇ ಅಜ್ಞಾನವೆಂದೂ ಕರೆಯುತ್ತಾರೆ.

**ಪ್ರ : 62. ಕರ್ತೃತ್ವ ಭೋಕ್ತೃತ್ವಾದಿಗಳು ಅತ್ಮನಲ್ಲಿ ಹೇಗೆ ಸಂಭವಿಸುತ್ತವೆ.**

ಉ : ಆತ್ಮಾನಾತ್ಮಗಳೆರಡನ್ನೂ ಒಂಡೆಡೆ ಪ್ರತಿಬಿಂಬಿಸಿರುವ ಅಹಂಕಾರವು ನಿರ್ಗುಣನಾದ ಆತ್ಮನಲ್ಲಿ, ಕರ್ತೃತ್ವ, ಭೋಕ್ತೃತ್ವಾದಿ ಅನಾತ್ಮ ಧರ್ಮಗಳಿರುವುವೆಂಬ ಭ್ರಾಂತಿಯನ್ನು ಹುಟ್ಟಿಸುತ್ತದೆ.

**ಪ್ರ : 63. ನಿರ್ಗುಣನಾದ ಅತ್ಮನಲ್ಲಿ ಕರ್ತೃತ್ವ, ಭೋಕ್ತೃತ್ವಾದಿಗಳನ್ನು ಅಹಂಕಾರವೇ ಭ್ರಾಂತಿಯಿಂದ ಹುಟ್ಟಿಸುತ್ತದೆಂದು ತಿಳಿಯಿತು. ಏಕನಾದ ಆತ್ಮನು ಅನೇಕನಾಗಿ ತೋರುವುದು ಹೇಗೆ? ಉದಾಹರಣೆಸಹಿತ ತಿಳಿಸಿರಿ.**

ಉ : ಒಬ್ಬನೇ ಒಬ್ಬನಾದ ಸೂರ್ಯನು ನೀರು ತುಂಬಿರುವ ಅನೇಕ ಪಾತ್ರೆಗಳಲ್ಲಿ ಪ್ರತಿಬಿಂಬಿಸಿ ಪಾತ್ರೆಗೆ ಒಬ್ಬ ಸೂರ್ಯನಂತೆ ಅನೇಕವಾಗಿ ತೋರುತ್ತಾನೆ. ಹಾಗೆಯೇ ಒಬ್ಬನೇ ಒಬ್ಬನಾದ ಸಾಕ್ಷೀ ಆತ್ಮನು ಅನೇಕ ಅಂತಃಕರಣವೆಂಬ ಜಲದಲ್ಲಿ ಪ್ರತಿಬಿಂಬಿತನಾಗಿ, ದೇಹಕ್ಕೊಬ್ಬ ಆತ್ಮನಂತೆ ಮತ್ತು ಆ ದೇಹದಲ್ಲಿರುವವನು ಬೇರೆ, ಇಲ್ಲಿರುವವನು ಬೇರೆ ಎಂಬುದಾಗಿ ಅನೇಕವಾಗಿ ತೋರುತ್ತಾನೆ.

ಉದಾ : (೨) ಒಬ್ಬನೇ ಒಬ್ಬನಾದ ಮನುಷ್ಯನು ಬೇರೆ ಬೇರೆಯವರ ಕಲ್ಪನೆಯಿಂದ ಒಬ್ಬನಿಗೆ ಗೆಳೆಯನಾಗಿ—ಮತ್ತೊಬ್ಬನಿಗೆ ಶತ್ರುವಾಗಿ—ಇನ್ನೊಬ್ಬನಿಗೆ ತಂದೆಯಾಗಿ ತೋರುವಂತೆ ಸ್ವರೂಪತಃ ಭೇದವಿಲ್ಲದ ಆತ್ಮ

ನಲ್ಲಿ ಅಂತಃಕರಣ ಉಪಾಧಿಮೂಲಕ ಭೇದವು ಮತ್ತು ಅನೇಕತ್ವವೂ ಕಾಣಿಸುತ್ತವೆ.

**ಪ್ರ : 64. ಮೂಲತಃ ಭೇದವಿಲ್ಲದ ಚೇತನನಾದ ಆತ್ಮನು ಅಂತಃಕರಣದ ಮೂಲಕ ಅವರವರ ಅಂತಃಕರಣ ಧರ್ಮವನ್ನು ಹೇಗೆ ಹೊಂದುತ್ತಾನೆ. ?**

ಉ : ಮೂಲತಃ ಅಚಲನಾದ ಸೂರ್ಯನು ನೀರು ತುಂಬಿದ ಪಾತ್ರೆಗಳೊಳಗೆ ಪ್ರತಿಬಿಂಬಿಸುತ್ತಾನೆ. ಆ ಪಾತ್ರೆಗಳು ಅವನನ್ನು ತಾವಿದ್ದ ಕಡೆಗೆ ಅಪಹಾರಮಾಡಿ ತಮ್ಮೊಳಗೆ ಇಟ್ಟುಕೊಂಡಂತೆ ಕಾಣುತ್ತದೆ. ಸೂರ್ಯನು ಆಯಾಪಾತ್ರೆಗಳೊಳಗಿನ ಸಂಕುಚಿತವಾದ ಪ್ರದೇಶದಲ್ಲಿಯೇ ಇದ್ದು ಅದರಲ್ಲಿರುವ ನೀರಿನ ಚಲನ ವಲನಗಳ ಸಂಗಡ ತಾನೂ ಚಲನ ವಲನ ಮಾಡುವಂತೆಯೂ, ನೀರಿನ ಪಾತ್ರೆಯ ಆಕಾರವುಳ್ಳವನಾಗಿಯೂ ತೋರುತ್ತಾನೆ. ಹಾಗೆಯೇ ಅವಿಕ್ರಿಯ, ನಿಶ್ಚಲ ಮತ್ತು ವ್ಯಾಪಕನಾದ ಆತ್ಮನು ಬೇರೆ ಬೇರೆ ಅಂತಃಕರಣದಲ್ಲಿ ಪ್ರತಿಬಿಂಬಿಸಿ ಆಯಾ ಅಂತಃಕರಣಗಳ ಸಂಕುಚಿತ ಪ್ರದೇಶದಲ್ಲಿರುವಂತೆಯೂ, ಅವುಗಳ ಆಕಾರವನ್ನೇ ಹೊಂದಿದಂತೆಯೂ, ಅವುಗಳಲ್ಲಾಗುವ ಬದಲಾವಣೆಗಳಿಂದ ತಾನೂ ಬದಲಾಗುತ್ತಿರುವಂತೆಯೂ ಕಾಣುತ್ತಾನೆ.

**ಪ್ರ : 65. ಒಬ್ಬನೇ ಆತ್ಮನು ಹೀಗೆ ಎಲ್ಲಾ ಪ್ರಾಣಿಗಳ ದೇಹದಲ್ಲಿ ಇರುತ್ತಾನೆಂದ ಮೇಲೆ ಎಲ್ಲಾ ಪ್ರಾಣಿಗಳ ಸುಖದುಃಖಾದಿಗಳಿಗೂ ಆಶ್ರಯನಾದಂತೆ ಆಯಿತೆ ?**

ಉ : ಇಲ್ಲ ಅವೆಲ್ಲಾ ಕಲ್ಪಿತವಾಗಿರುವುದರಿಂದ ಸುಳ್ಳಾಗಿವೆ. ಒಬ್ಬಳೇ ಹೆಂಗಸಿನ ದೇಹವು ಕಾಮುಕನಿಗೆ ಸುಂದರವಾಗಿಯೂ, ಬೈರಾಗಿಗೆ ಅಶುಚಿಯಾಗಿಯೂ, ನಾಯಿಮೊದಲಾದ ಮಾಂಸ ಭಕ್ಷ ಪ್ರಾಣಿಗಳಿಗೆ ರುಚಿಯಾಗಿಯೂ ಇದ್ದರೂ ಆ ಹೆಣ್ಣುಮಗಳಲ್ಲಿ ಯಾವ ವ್ಯತ್ಯಾಸವೂ ಆಗಿರುವುದಿಲ್ಲ. ಹಾಗೆಯೇ ಕರ್ತೃ, ಕರ್ಮ, ಫಲರೂಪದಿಂದ ಭಿನ್ನ ಭಿನ್ನವಾಗಿ ಕಾಣುತ್ತಿರುವ ಈ ಆಭಾಸ ರೂಪ ಜಗತ್ತೆಲ್ಲವೂ ಪಾರಮಾರ್ಥ ವಸ್ತುವಾದ ಆತ್ಮನನ್ನು ಎಳ್ಳಷ್ಟೂ ಮುಟ್ಟಲಾರದು. ಸುಖದುಃಖಾದಿಗಳೆಲ್ಲಾ ಬರೀ ಕಲ್ಪನೆಗಳೆ. ಅವೆಲ್ಲಾ ಅಜ್ಞಾನದಿಂದ ಹುಟ್ಟಿವೆ.

## ಆತ್ಮನ ಅದ್ವಿತೀಯತ್ವ ಸಿದ್ಧಿ.

**ಸಾರಾಂಶ :—** ಒಂದೆಡೆ ಗುಣಯುಕ್ತವಾದ ಜಡವಸ್ತು ಇರುತ್ತದೆ. ಮತ್ತೊಂದೆಡೆ ನಿರ್ಗುಣವಾದ ಬ್ರಹ್ಮ ಇರುತ್ತದೆ. ಆದರೆ ಇವೆರಡೂ "ನಾನು" ಎಂಬ (ಅಹಂಕಾರ) ಕನ್ನಡಿಯೊಳಗೆ ಒಡಮೂಡಿ, ಅಲ್ಲಿ ಕೂಡಿದಂತೆ ಕಾಣುವುವು. ಅಂತಃಕರಣವು ಜಡ; ಬ್ರಹ್ಮವು ಚೇತನ– ಎರಡೂ ಒಂದುಕಡೆ ಕೂಡಲು ಸಾಧ್ಯವೇ ? ಆದರೂ ವಸ್ತುತಃ ಕಬ್ಬಿಣವು ತಣ್ಣಗಿದ್ದರೂ ಬೆಂಕಿಯಿಂದ ಕಾಯ್ದಾಗ ಅದು ಬೆಂಕಿಯಂತೆಯೇ ಉಳಿದ ಪದಾರ್ಥಗಳನ್ನು ಸುಡುವಂತೆ, ಅರಿಯುವ ಶಕ್ತಿಯುಳ್ಳ ಆತ್ಮನು ಅಂತಃಕರಣದಲ್ಲಿ ಪ್ರತಿಬಿಂಬಿತನಾಗಲು, ಆ ಅಂತಃಕರಣಕ್ಕೆ ಬಾಹ್ಯ ವಸ್ತುಗಳನ್ನು ತಿಳಿದುಕೊಳ್ಳುವ ಶಕ್ತಿಯು ಬರುತ್ತದೆ. ಆಗ ಅದು ಪಂಚಜ್ಞಾನೇಂದ್ರಿಯಗಳ ಮೂಲಕ ಹೊರಗಿನ ವಸ್ತುವನ್ನು ತಿಳಿಯಲಾರಂಭಿಸುವುದು.

ಮತ್ತು ಈ ರೀತಿ ಹೊರಗಿನ ವಿಷಯಗಳನ್ನು ತಿಳಿದು ಕೊಳ್ಳುವ ಅಂತಃಕರಣವೇ ಸಾಕ್ಷಿ ಆತ್ಮನಿಗೆ ದೃಶ್ಯವಾಗಿರುವುದು. ಅದೇ ಅಂತಃಕರಣದಲ್ಲಿ ಜಡವಸ್ತುಗಳೂ ಆತ್ಮನೂ ಒಡಮೂಡುವುದರಿಂದ ಅವೆರಡರ ಸಂಬಂಧದಿಂದ "ನಾನು ಇದನ್ನು ತಿಳಿಯುತ್ತೇನೆ" ಎಂಬ ಮುಂತಾದ ವ್ಯವಹಾರ ಪ್ರಾರಂಭವಾಗುತ್ತದೆ.

ಅವೆರಡೂ ವಿರುದ್ಧ ಧರ್ಮವಾಗಿರುವುದರಿಂದ ಕೂಡುವುದೇ ಶಕ್ಯವಿಲ್ಲದಿದ್ದರೂ "ನಾನು" ಎಂಬುದರ ಮೂಲಕ ನಿರ್ಗುಣನಾದ ಆತ್ಮನು ಗುಣಯುಕ್ತವಾದ ವಸ್ತುಗಳೊಡನೆ ಸಂಬಂಧನಾಗುವಂತೆ ಕಾಣುತ್ತಾನೆ. ಆದುದರಿಂದ ಆ "ನಾನು" ಎಂಬುವ ಅಹಂಕಾರವನ್ನೇ ನಾಶಮಾಡಿದರೆ ಆತ್ಮನ ಅದ್ವಿತೀಯತ್ವವನ್ನು ಸಹಜವಾಗಿಯೇ ಅನುಭವಿಸಬಹುದು.

## ಆತ್ಮನಲ್ಲಿ ಅಹಂಶಬ್ದದ ವೃತ್ತಿ

**ಆಕ್ಷೇಪ :** ಅಹಂಕಾರವು ಅನಾತ್ಮವೆಂದು ನಿಮ್ಮ ಪಾತಿನಿಂದಲೇ ಸಿದ್ಧವಾಯಿತು. ಬ್ರಹ್ಮವು ಆತ್ಮನೆಂದೂ ಸಿದ್ಧವಾಯಿತು. "ನಾನು ಬ್ರಹ್ಮನು"

ಎಂಬ ವಾಕ್ಯದಲ್ಲಿ "ನಾನು" ಎಂಬ ಅನಾತ್ಮವಾದ ಅಹಂಕಾರಕ್ಕೂ ಬ್ರಹ್ಮ ಎಂದು ಕರೆಸಿಕೊಳ್ಳುವ ಆತ್ಮಕ್ಕೂ ಸಾಮಾನಾಧಿಕರಣ್ಯ ಹೇಳಿದಂತಾಯಿತಲ್ಲ. ಇಲ್ಲಿ ಬ್ರಹ್ಮವು ಅನಾತ್ಮವೇ ? ಇಲ್ಲವೆ ನಾನು ಎಂಬ ಅಹಂಕಾರವು ಆತ್ಮವೆ ?

ಇಲ್ಲಿ ಮಹಾವಾಕ್ಯಾರ್ಥಕ್ಕೆ ಬದಲು ಅಡ್ಡಿಯೇ ಆಯಿತಲ್ಲ. ಅಹಂ ಶಬ್ದವು ಅನಾತ್ಮವನ್ನೂ, ಬ್ರಹ್ಮ ಶಬ್ಧವು ಆತ್ಮವನ್ನೂ ಹೇಳಿದರೆ ಒಂದೇ ವಸ್ತು ಆತ್ಮಾನಾತ್ಮ ರೂಪವಾಗಿರುವುದೆಂದು ಹೇಳಿದಂತಾಗುವುದು. ಇದು ಸಹ ವಿರುದ್ಧವೇಆಯಿತು. ಇದರಿಂದಲೂ ಮಹಾವಾಕ್ಯಾರ್ಥದ ತಾತ್ಪರ್ಯಕ್ಕೆ ಅಡ್ಡಿಯೇ ಆಯಿತು.

ಹೀಗೆ ಅನರ್ಥವಾಗುತ್ತದೆ ಎಂದು ನಿಮ್ಮ ಉದ್ದೇಶವಿದ್ದಲ್ಲಿ "ನಾನು" ಎಂಬ ಶಬ್ದವು ಶುದ್ಧಸಾಕ್ಷಿ ಆತ್ಮನ ದ್ಯೋತಕವೆಂದಾದರೂ ತೋರಿಸಿರಿ.

**ಪ್ರ : 66. ಶಬ್ದಕ್ಕೆ ಎಷ್ಟು ಅರ್ಥಗಳಿವೆ ?**

ಉ : ಶಬ್ದಕ್ಕೆ ಮೂರು ತರದ ಅರ್ಥಗಳಿರುತ್ತವೆ. ೧) (ವಾಚ್ಯ) ಮುಖ್ಯಾರ್ಥ ಅಭಿದಾ ೨) ಲಕ್ಷಣಾರ್ಥ ೩) ಗೌಣಾರ್ಥ, ಇವುಗಳನ್ನು ಶಬ್ದಗಳ ಶಕ್ತಿಗಳೆಂದೂ ಹೇಳಬಹುದು ಈ ಶಕ್ತಿಗಳಿಗೆ ವೃತ್ತಿಗಳೆಂದೂ ಹೆಸರು.

**೧) ವಾಚ್ಯಾರ್ಥವೆಂದರೇನು ?**

"ತತ್ರ ಸಂಕೇತಿತಾರ್ಥಸ್ಯ ಬೋಧನಾದಗ್ರಿಮಾಭಿಧಾ"ಅಭಿದಾ ವೃತ್ತಿ ಅಂದರೆ ವಾಚ್ಯಾರ್ಥವು ಯಾವುದೊಂದು ಶಬ್ದಕ್ಕಿರುವ ಮುಖ್ಯ ಅಥವಾ ವಾಚ್ಯಾರ್ಥವನ್ನು ತೋರಿಸುವುದೇ ಈ ವೃತ್ತಿಯ ಉದ್ದೇಶ. ಸಂಕೇತ ಅಥವಾ ರೂಢಿಯ ಬಲದಿಂದಲೇ ಆಯಾ ಶಬ್ದಕ್ಕೆ ಆಯಾ ವಿಶಿಷ್ಟಾರ್ಥ ವಿರುವುದೆಂದು ನಾವು ನಿಶ್ಚಯಿಸುತ್ತೇವೆ. ಇದೇ ಅಭಿದಾವೃತ್ತಿ.

**೨) ಲಕ್ಷಣಾ ವೃತ್ತಿ ಎಂದರೇನು ?**

" ಲಕ್ಷಣಾಶಕ್ಯ ಸಂಬಂಧಸ್ತಾತ್ಪರ್ಯಾನುಪಪತ್ತಿತಃ" ಯಾವುದೊಂದು ವಾಕ್ಯದೊಳಗೆ ಒಂದು ಶಬ್ದದ ಮುಖ್ಯ ಅರ್ಥವನ್ನು ತೆಗೆದುಕೊಂಡರೆ, ಆ ವಾಕ್ಯದ ಅರ್ಥವು ಸರಿಯಾಗಿ ಹೊಂದುವಂತಿರುವುದಿಲ್ಲ.

**ಉದಾ :** ಹೊರಸುನಕ್ಕವು. ಇಲ್ಲಿ ಹೊರಸು ಎಂಬ ಶಬ್ದದ ಮುಖ್ಯಾರ್ಥವನ್ನು ತೆಗೆದುಕೊಂಡರೆ ಆ ವಾಕ್ಯಕ್ಕೆ ಅರ್ಥವೇ ಆಗುವುದಿಲ್ಲ. ಆದುದರಿಂದ ಇಲ್ಲಿ "ಹೊರಸಿನ ಮೇಲೆ ಮಲಗಿದವರು ನಕ್ಕರು" ಎಂದು ಆ ಶಬ್ದಕ್ಕೆ ಅರ್ಥಮಾಡಬೇಕಾಗುವುದು. ಇದೇ ಲಕ್ಷಣಾವೃತ್ತಿ ಎಂಬುದಾಗಿ ಸಾಹಿತ್ಯದರ್ಪಣದಲ್ಲಿ ಹೇಳಿದೆ.

**೩) ಗುಣ ವೃತ್ತಿ**

ಈಗ ಮುಖ್ಯಾರ್ಥವನ್ನು ತೆಗೆದುಕೊಳ್ಳಬಾರದೆಂದು ಸಿದ್ಧವಾಯಿತು. ಹಾಗಾದರೆ ಎಲ್ಲಿ ಯಾವ ತರದ ಲಕ್ಷ್ಯಾರ್ಥವನ್ನು ತೆಗೆದುಕೊಳ್ಳಬೇಕು ಎಂಬ ಪ್ರಶ್ನೆಯು ನಮಗೆ ಎದುರಾಗುತ್ತದೆ. ಆಗ ಆವಾಕ್ಯದ ತಾತ್ಪರ್ಯಕ್ಕೆ ಅನುಸಾರವಾದ ಅರ್ಥವನ್ನು ತೆಗೆದುಕೊಳ್ಳಬೇಕು. ಆದರೆ ಲಕ್ಷ್ಯಾರ್ಥಕ್ಕೂ ಮುಖ್ಯಾರ್ಥಕ್ಕೂ ಗುಣಗಳಲ್ಲಿ ಸಾಮ್ಯವಿರುವುದೆಂದು ಕಂಡುಬಂದಲ್ಲಿ, ಅದಕ್ಕೆ ಗುಣವೃತ್ತಿ ಅಥವಾ ಗೌಣೀವೃತ್ತಿ ಎಂದು ಹೆಸರು,

**ಪ್ರ : 67. ಈ ಮೇಲ್ಕಂಡ ಮೂರು ವೃತ್ತಿಗಳಲ್ಲಿ ಆತ್ಮನು ಶುದ್ಧ ಸಾಕ್ಷಿ ಎಂಬುದನ್ನು ಯಾವವೃತ್ತಿಯಿಂದ ತೋರಿಸಿಕೊಡುವಿರಿ?**

ಉ : ಆತ್ಮನು ಶುದ್ಧಸಾಕ್ಷಿ ಅಥವಾ "ನಾನು ಬ್ರಹ್ಮನಿದ್ದೇನೆ" ಎಂಬ ವಾಕ್ಯದಲ್ಲಿ "ನಾನು" ಎಂಬ ಶಬ್ದವು ಮೂರೂ ವೃತ್ತಿಗಳಿಂದ "ಬ್ರಹ್ಮನೇ" ಎಂದು ತೋರಿಸಿಕೊಡಬಹುದು.

**ಪ್ರ : 68. ಲಕ್ಷಣಾವೃತ್ತಿಯಿಂದ "ನಾನು" ಎಂಬ ಶಬ್ದವು "ಬ್ರಹ್ಮನೇ" ಎಂಬುದನ್ನು ಹೇಗೆ ತಿಳಿಯಬೇಕು ?**

ಉ : ಬೆಂಕಿಯಿಂದ ಕಾದ ಕಬ್ಬಿಣವು ಸುಡುತ್ತದೆಂದು ನಾವು ಹೇಳುತ್ತೇವೆ. ನಿಜವಾಗಿ ನೋಡಿದರೆ ಕಬ್ಬಿಣವು ಸುಡುವುದೇ ಇಲ್ಲ. ಅದು ತಣ್ಣಗೇ ಇರುತ್ತದೆ. ಆದರೆ ಬೆಂಕಿಯ ಉಷ್ಣತೆಯು ಕಬ್ಬಿಣದೊಳಗೆ ಸೇರಿ ಉಳಿದ ಪದಾರ್ಥವನ್ನು ಸುಡುವುದರಿಂದ "ಕಬ್ಬಿಣದೊಳಗೆ ಸೇರಿದ ಬೆಂಕಿಯು ಸುಡುತ್ತದೆಂದು" ಹೇಳುವುದೇ ವಿಹಿತವಾದುದು.

ಇಲ್ಲಿ "ಕಬ್ಬಿಣ ಸುಡುತ್ತದೆ" ಎಂದಾಗ ಕಬ್ಬಿಣದೊಳಗೆ ಸೇರಿದ ಬೆಂಕಿ ಎಂದು ಲಾಕ್ಷಣಿಕ ಅರ್ಥಮಾಡಬೇಕು.

"ಒಲೆಯು ಉರಿಯುತ್ತದೆ" ಎಂಬ ವಾಕ್ಯದಲ್ಲಿ ಒಲೆಯಲ್ಲಿರುವ ಸೌದೆ ಉರಿಯುತ್ತದೆಂದೂ ಲಾಕ್ಷಣಿಕ ಅರ್ಥಮಾಡಬೇಕು.

**ದಾರ್ಷ್ಟಾಂತ :** ಹಾಗೆಯೇ ಗಾಢ ನಿದ್ದೆಯಲ್ಲಿ ಜೀವಾತ್ಮರೆಲ್ಲಾ ಬ್ರಹ್ಮನಲ್ಲಿ ಒಂದಾಗುತ್ತಾರೆಂದೂ ಛಾಂದೋಗ್ಯ ಉಪನಿಷತ್ತು ಹೇಳುತ್ತದೆ. ಗಾಢ ನಿದ್ದೆಯಲ್ಲಿ ಈ ಅಹಂಕಾರವು ಇರುವುದಿಲ್ಲ. ನಿದ್ದೆಯಿಂದ ಎಚ್ಚೆತ್ತವನು "ನಾನು ಆಗ ಏನನ್ನು ತಿಳಿಯಲಿಲ್ಲ"ವೆಂದು ಹೇಳುತ್ತಾನೆ. ಆಗ ಅಹಂಕಾರವಿಲ್ಲದಿರುವುದರಿಂದ "ನಾನು" ಎಂಬುದು ಶುದ್ಧ ಬ್ರಹ್ಮವೇ ಆಗಿದೆ. "ನಾನು ಅಲ್ಲಿ ಏನನ್ನು ತಿಳಿಯಲಿಲ್ಲ"ವೆಂಬ ವಾಕ್ಯದಲ್ಲಿ "ನಾನು" ಎಂಬುದಕ್ಕೆ "ಅಹಂಕಾರ" ವೆಂದು ಅರ್ಥ ಮಾಡದೆ ಲಕ್ಷಣಾವೃತ್ತಿಯಿಂದ 'ನಾನು' ಎಂಬುದು ನಿರ್ಗುಣ ಪರಮಾತ್ಮನನ್ನೇ ಬೋಧಿಸುತ್ತದೆಂದು ತಿಳಿಯಬೇಕು.

"ಕಬ್ಬಿಣವು ಸುಡುತ್ತದೆ" ಎಂಬಲ್ಲಿ "ಕಬ್ಬಿಣದಲ್ಲಿರುವ ಬೆಂಕಿಯು ಸುಡುತ್ತದೆಂದು" ಗ್ರಹಿಸುವಂತೆ "ನಾನು ಏನೂ ತಿಳಿಯಲಿಲ್ಲ" ಎಂಬಲ್ಲಿ "ನಾನು" ಎಂಬಲ್ಲಿರುವ ಕೂಟಸ್ಥ ಆತ್ಮನು "ಏನೂ ತಿಳಿಯಲಿಲ್ಲ"ವೆಂದೂ ಗ್ರಹಿಸಬೇಕು. ಕಬ್ಬಿಣವು ಸುಡುತ್ತದೆಂಬಲ್ಲಿ ಕಬ್ಬಿಣದಲ್ಲಿರುವ ಬೆಂಕಿ ಸುಡುತ್ತದೆಂಬಂತೆ ನಾನು ಏನೂ ತಿಳಿಯಲಿಲ್ಲವೆಂಬಲ್ಲಿ "ನಾನು" ಎಂಬುದರಲ್ಲಿರುವ ಅಹಂಕಾರವನ್ನು ಬಿಟ್ಟು ಆತ್ಮನು, ತಿಳಿಯಲಿಲ್ಲವೆಂದು ಗ್ರಹಿಸಬೇಕು.

ಉಪದೇಶ ಸಹಸ್ರಿಯ 6 ನೇ ಪ್ರಕರಣದ 6 ನೇ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ—

**ಇದಮಂಶೋಽಹಮಿತ್ಯತ್ರ ತ್ಯಾಜ್ಯೋಽನಾತ್ಮೇತಿ ಪಂಡಿತೈಃ ।**
**ಅಹಂಬ್ರಹ್ಮೇತಿ ಶಿಷ್ಟೋಽಂಶೋ ಭೂತಪೂರ್ವಗತೇರ್ಭವೇತ್ ॥**

"ನಾನು" ಎಂಬಲ್ಲಿರುವ "ಇದಂ" ಅಂಶವು ಅನಾತ್ಮವೆಂದು ತ್ಯಾಜ್ಯ ಮಾಡಬೇಕು. ಮತ್ತು ನಾನು ಎಂಬಲ್ಲಿರುವ "ಅಹಂ" ಅಂಶವು ಬ್ರಹ್ಮವನ್ನೇ ಬೋಧಿಸುತ್ತದೆ.

"ನಾನು" ಎಂಬುದು ಅನಾತ್ಮವೆಂದು ಹೇಳುವಾಗ ಅದರಲ್ಲಿರುವ ಎಲ್ಲವೂ ಅನಾತ್ಮವೆಂದು ನಮ್ಮ ಅಭಿಪ್ರಾಯವಲ್ಲ. ಅದರಲ್ಲಿರುವ ಅಹಂಕಾರ ವೆಂಬ 'ಇದಂ' ಅಂಶವು ಮಾತ್ರ ಅನಾತ್ಮವು; ಅದನ್ನು ಬಿಟ್ಟುಬಿಡಬೇಕು. ಆ ಅಹಂಕಾರವನ್ನು ಬೆಳಗುತ್ತಿರುವ ಚೈತನ್ಯವು ಆತ್ಮನೇ. ಆ ಆತ್ಮನನ್ನು ಬ್ರಹ್ಮವೆಂದು ಅರಿಯಬೇಕು. ಇದೇ ಸಿದ್ಧಾಂತ, ಇದೇ ಶ್ರುತಿಯ ಉಪದೇ ಶವೂ ಆಗಿದೆ.

**ಪ್ರ : 69. ಶ್ರುತಿಯಲ್ಲಿ "ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವಂ ಭವತಿ" ಯಾವನು "ನಾನು ಬ್ರಹ್ಮ" ಎಂದು ತಿಳಿದು ಕೊಳ್ಳುವನೋ ಅವನು ಇದೆಲ್ಲವೂ ಆಗುತ್ತಾನೆ ಎಂದು ಉಪದೇಶ ಮಾಡಿರುತ್ತದೆ. ಆದರೆ ನೀವಾದರೋ "ನಾನು" ಎಂಬುದನ್ನು ಬಿಟ್ಟೇ ಬಿಡಬೇಕು ಎಂದು ಹೇಳುತ್ತಿದ್ದೀರಲ್ಲಾ ! ಇದು ಶ್ರುತಿ ಅಭಿಪ್ರಾ ಯಕ್ಕೆ ವಿರುದ್ಧವಾಗಲಿಲ್ಲವೆ ?**

ಉ : ಶ್ರುತಿಯಲ್ಲಿ "ನಾನು ಬ್ರಹ್ಮವೆಂದು ಅರಿಯಬೇಕು" ಎಂದು ಹೇಳಿರುವುದಕ್ಕೆ ಅಹಂಕಾರವೇ ಬ್ರಹ್ಮವೆಂದು ಅರಿಯಬೇಕೆಂಬ ಅಭಿಪ್ರಾಯ ವಲ್ಲ. ಅನಾತ್ಮವಾದ ಅಹಂಕಾರವೇ ಬ್ರಹ್ಮ ಎಂದು ತಿಳಿದಾಕ್ಷಣ ಸರ್ವಾತ್ಮ ಭಾವ ಪ್ರಾಪ್ತಿಯಾಗುವ ಸಂಭವವೂ ಇಲ್ಲ. ಆದ್ದರಿಂದ "ನಾನು ಬ್ರಹ್ಮ" ಎಂಬ ವಾಕ್ಯದ ಅರ್ಥವೇನೆಂದರೆ ಮೊದಲು 'ನಾನು' ಎಂದು ತಿಳಿದುಕೊಂಡಿ ದ್ದೆವಲ್ಲ ಅದರ ಪರಮಾರ್ಥ ಸ್ವರೂಪವು ನಿರ್ವಿಶೇಷಾತ್ಮನಾದ ಬ್ರಹ್ಮವು. "ನಾನು" ಎಂಬ ಮಾತಿಗೆ ವಾಚ್ಯಾರ್ಥವು ಅಹಂಕಾರವು; 'ನಾನು' ಎಂಬು ವುದರಲ್ಲಿ ವಾಚ್ಯಾರ್ಥವಾದ ಇದಂ ಅಂಶವಾದ ಅಹಂಕಾರವನ್ನು ಬಿಟ್ಟು ಆ ಅಹಂಕಾರವನ್ನು ಬೆಳಗುವ ಲಕ್ಷ್ಯಾರ್ಥವಾದ ಚೈತನ್ಯವನ್ನೇ ಬ್ರಹ್ಮವೆಂದು ಅರಿತುಕೊಳ್ಳಬೇಕೆಂಬುದೇ ಶ್ರುತಿಯ ಅಭಿಪ್ರಾಯವು. ಆದುದರಿಂದ ನಮ್ಮ ಅಭಿಪ್ರಾಯವೂ ಶ್ರುತಿ ಸಮ್ಮತವೇ ಆಗಿದೆ.

**ಸಾರಾಂಶ :** ಆದುದರಿಂದ "ನಾನು ಸುಷುಪ್ತಿಯಲ್ಲಿ ಏನೂ ತಿಳಿ ಯಲಿಲ್ಲ" ಎಂಬ ವಾಕ್ಯದಲ್ಲಿ 'ನಾನು' ಎಂಬುದಕ್ಕೆ ಅಹಂಕಾರವೆಂದು ಅರ್ಥ

ಮಾಡದೆ, ಲಕ್ಷಣಾವೃತ್ತಿಯಿಂದ 'ನಾನು' ಎಂಬುದು ನಿರ್ಗುಣ ಪರಮಾತ್ಮನನ್ನೇ ಬೋಧಿಸುತ್ತದೆಂದು ತಿಳಿಯಬೇಕು.

**ಪ್ರ : 70. ಈಗ"ನಾನು"ಎಂಬುದು ಗುಣ ಅಥವಾ ವ್ಯಂಜನಾ ವೃತ್ತಿಯಿಂದಲೂ ಆತ್ಮನನ್ನು ತಿಳಿಸುತ್ತದೆಂದು ಹೇಗೆ ತಿಳಿಯಬೇಕು ?**

ಉ : ಆತ್ಮನಿಗೂ 'ನಾನು' ಎಂಬುದಕ್ಕೂ ಎಷ್ಟೋ ವಿಷಯಗಳಲ್ಲಿ ಸಾಮ್ಯವಿದೆ. ಆದುದದರಿಂದಲೂ "ನಾನು" ಎಂಬುದು ಗುಣ ಅಥವಾ ವ್ಯಂಜನಾ ವೃತ್ತಿಯಿಂದಲೂ ಆತ್ಮನನ್ನು ಸೂಚಿಸುತ್ತದೆ.

೧) ಆತ್ಮನು ಎಲ್ಲದರ ಅಂತರ್ಯಾಮಿ, ನಾನೆಂಬುದೂ ಸಹ ಉಳಿದೆಲ್ಲಾ ಪದಾರ್ಥಗಳ ದೃಷ್ಟಿಯಿಂದ ಒಳಗಿದೆ. ಒಳಗಿರುವಿಕೆ, ತಿಳಿಯುವಿಕೆ ಇವೆರಡೂ ಮಾತುಗಳಲ್ಲಿ ಆತ್ಮನಿಗೂ ಬುದ್ಧಿಗೂ ಸಾಮ್ಯವಿದೆ.

೨) ಆತ್ಮನು ಸೂಕ್ಷ್ಮ 'ನಾನು' ಎಂಬುದೂ ಬಹಳ ಸೂಕ್ಷ್ಮ.

೩) ಆತ್ಮನು ನೋಡುವವನು, ಬುದ್ಧಿಯೂ ಉಳಿದೆಲ್ಲಾ ವಸ್ತುಗಳ ದೃಷ್ಟಿಯಿಂದ ನೋಡುತ್ತದೆ.

ಆದುದರಿಂದ "ನಾನು" ಎಂಬ ಶಬ್ದದಿಂದ ಉಳಿದ ಪದಾರ್ಥಗಳನ್ನೆಲ್ಲಾ ಬಿಟ್ಟು ಬ್ರಹ್ಮನೇ ಸೂಚಿತವಾಗುತ್ತದೆ ಎಂದು ತಿಳಿಯಬೇಕು.

**ಪ್ರ : 71. ಮುಖ್ಯವೃತ್ತಿಯಿಂದಲೂ "ನಾನು" ಎಂಬ ಶಬ್ದವು 'ಬ್ರಹ್ಮನೇ' ಎಂಬುದನ್ನು ಹೇಗೆ ತೋರಿಸುತ್ತದೆ ?**

ಉ : 'ನಾನು' ಎಂಬುದಕ್ಕೆ ಮೂರು ಅರ್ಥಗಳುಂಟು ೧) ಅಂತಃಕರಣ ೨) ಆತ್ಮ ೩) ಅಂತಃಕರಣ ಸಹಿತ ಅಂತಃಕರಣದೊಳಗೆ ಮೂಡಿರುವ ಆತ್ಮಾಭಾಸ ಅಥವಾ ಜೀವ. ಇವುಗಳಲ್ಲಿ 'ನಾನು' ಎಂಬುದರ ಮುಖ್ಯವಾದ ಅರ್ಥವು ಅಂತಃಕರಣ ಸಹಿತ ಜೀವನೆಂದು ತಿಳಿಯಬೇಕು. ಉಳಿದ ಎರಡು ಅರ್ಥಗಳು ಲಕ್ಷ್ಯಾರ್ಥಗಳು.ಮುಖ್ಯಾರ್ಥದಲ್ಲಿ ಅಹಂ ಶಬ್ದವು ಮುಖ್ಯ ವೃತ್ತಿಯಿಂದ ಜೀವಾತ್ಮನನ್ನು ಬೋಧಿಸುವುದೆಂದೂ, ಆ ಮೂಲಕ ಆತ್ಮನನ್ನೇ ಬೋಧಿಸುವುದೆಂದೂ ಹೇಳಿದೆ. ಏಕೆಂದರೆ ಮುಖ್ಯ ವೃತ್ತಿ

ಯಿಂದ ಯಾವುದೇ ಶಬ್ದವು ಬ್ರಹ್ಮವನ್ನಾಗಲಿ ಆತ್ಮವನ್ನಾಗಲಿ ತೋರಿಸುವುದು ಶಕ್ಯವಿಲ್ಲ.

'ನಾನು' ಎಂಬುದು ಇರುವುದಾದರೆ ಆತ್ಮನನ್ನೊಡಗೂಡಿಕೊಂಡೇ ಇರಬೇಕು. ಆತ್ಮನಿಲ್ಲದೆ 'ನಾನು' ಎಂಬುದು ಇರಲಾರದು. ಆತ್ಮನನ್ನು ಬಿಟ್ಟು ತನ್ನಷ್ಟಕ್ಕೆ ತಾನು ಸ್ವತಂತ್ರವಾಗಿ ಎಂದೂ ಇರಲಾರದು. ಆದುದರಿಂದ 'ನಾನು' ಎಂಬ ಶಬ್ದವು ಆತ್ಮನನ್ನೇ ತೋರಿಸುತ್ತದೆಂದು ಮುಖ್ಯವೃತ್ತಿಯಿಂದಲೂ ನಿರ್ದೇಶಿಸುತ್ತದೆಂದು ತಿಳಿಯಬೇಕು.

**ಪ್ರ : 72. ಹಿಂದೆ ಹೇಳಿದ ಲಕ್ಷಣಾವೃತ್ತಿ, ಮುಖ್ಯವೃತ್ತಿ ಮತ್ತು ಗುಣವೃತ್ತಿಗಳಿಂದ "ನಾನು ಬ್ರಹ್ಮನಿದ್ದೇನೆ" ಎಂಬ ವಾಕ್ಯದೊಳಗೆ 'ನಾನು' ಎಂಬ ಶಬ್ದದಿಂದ ಯಾವ ವಸ್ತುವನ್ನು ಸೂಚಿಸಿದಂತಾಯಿತು ?**

ಉ : "ನಾನು" ಎಂಬ ಶಬ್ದದಿಂದ ನಾಮರೂಪಗಳ ಆಚೆಯಿರುವ "ಭೂಮಾ" ಸ್ವರೂಪವಾದ, ಅನಂತವೂ ಪರಿಪೂರ್ಣವೂ ಆದ, ಕರ್ಮಮಾಡುವ ಸಾಧನಗಳಿಲ್ಲದುದಾಗಿರುವ, ಸ್ವತಃ ಎಂದೂ ಕರ್ಮಮಾಡದಂತಹದಾಗಿರುವ "ನಿರ್ಗುಣ ಬ್ರಹ್ಮವೇ" ಸೂಚಿಸಿದಂತಾಯಿತೆಂದು ತಿಳಿಯಬೇಕು. ಮತ್ತು ಆತ್ಮಾನುಭವಿಗಳು ಅನುಭವಿಸುವ ಆತ್ಮವಾದರೋ ಅದೇ ಆಗಿದೆ. ನಾವು ಸ್ವತಃಸಿದ್ಧವೆಂದು ಹೇಳುತ್ತಿರುವ ವಸ್ತುವಾದರೂ ಇದೇ ಆಗಿದೆ.

**ಪ್ರ : 73. ಭೂಮಾ ಎಂಬ ಪದಕ್ಕೆ ಅರ್ಥವೇನು ?**

ಉ : ನಾರದರಿಗೆ ಸನತ್ಕುಮಾರರು (ಛಾಂದೋಗ್ಯದಲ್ಲಿ) ನಾಮಧಿಂದ ಹಿಡಿದು ಆಸೆಯುವರೆಗಿನ ವಸ್ತುಗಳನ್ನು ಒಂದಕ್ಕಿಂತ ಒಂದು ಹೆಚ್ಚಿನದೆಂದು ಹೇಳಿ ಅವುಗಳನ್ನು ಬ್ರಹ್ಮವೆಂದೂ ಹೇಳಿ ಅದನ್ನು ಉಪಾಸನೆ ಮಾಡಿದವನಿಗೆ ಫಲವನ್ನು ಹೇಳಿ ಕೊನೆಗೆ ಅವೆಲ್ಲಕ್ಕಿಂತಲೂ ಹೆಚ್ಚಿನದಾದ ಪ್ರಾಣವನ್ನು ಬ್ರಹ್ಮವೆಂದು ಉಪಾಸನೆ ಮಾಡಿದವನು ಅತಿವಾದಿಯಾಗುವನೆಂದು ಹೇಳುತ್ತಾರೆ. ಬಳಿಕ ಪ್ರಾಣಕ್ಕಿಂತಲೂ ಹೆಚ್ಚಿನದಾದ ಪರಬ್ರಹ್ಮವನ್ನು ಉಪದೇಶಿಸಿ ಅದು ಸತ್ಯವೆಂದೂ ಅದನ್ನು ಅರಿತವನೇ ನಿಜವಾಗಿ ಅತಿವಾದಿ ಎಂದೂ ತಿಳಿಸಿದರು. ಆಮೇಲೆ ಅದೇ ಎಲ್ಲಕ್ಕೂ ಹೆಚ್ಚಿನ

'ಭೂಮಾ' ಎಂದು ಹೇಳಿ, ಎಲ್ಲಿ ಎರಡನೆಯದನ್ನು ಕಾಣುವುದೇ ಇಲ್ಲವೋ ಅದೇ ಭೂಮವು, ಎಂದು ಲಕ್ಷಣವನ್ನು ತಿಳಿಸಿದರು. ಈ ಭೂಮವೇ ಸ್ವತಃ ಸಿದ್ಧನಾದ ನಮ್ಮ ಆತ್ಮನು. ಇವನೇ "ಅಹಂ ಬ್ರಹ್ಮಾಸ್ಮಿ" ಎಂಬಲ್ಲಿ ಅಹಂ ಪದಕ್ಕೆ ಲಕ್ಷ್ಯಾರ್ಥವು ಎಂದರ್ಥ.

ಇಲ್ಲಿಯವರೆಗೆ ದೃಗ್ದೃಶ್ಯ ಅನ್ವಯ ವ್ಯತಿರೇಕಯುಕ್ತಿಯಿಂದ ಆತ್ಮನು ಸ್ವತಃ ಸಿದ್ಧನೆಂಬುದನ್ನೂ ತಿಳಿಸಿದ್ದಾಯಿತು.

## ೨ ಸಾಕ್ಷಿ ಸಾಕ್ಷ್ಯಾನ್ವಯ ವ್ಯತಿರೇಕಯುಕ್ತಿ

ಇನ್ನು ಮುಂದೆ ಸಾಕ್ಷಿ ಸಾಕ್ಷ್ಯಾನ್ವಯ ವ್ಯತಿರೇಕ ತರ್ಕವನ್ನು ಅವಲಂಬಿಸಿ ಭೇದವೆಲ್ಲಾ ಸುಳ್ಳೆಂದೂ, ಭೇದವು ಸ್ವತಃ ಸಿದ್ಧವಾಗಲಿ-ಪ್ರಕಾಶವಾಗಲಿ ಇರುವುದಿಲ್ಲ ಹೇಳಿದೆವೆಂದು. ಎರಡು ವಸ್ತುಗಳ ನಡುವೆಇರುವ ಭೇದವನ್ನು ನೋಡುತ್ತಿರುವ ಬೇರೊಬ್ಬ ಸಾಕ್ಷಿಯಿಂದಲೇ ಭೇದವು ಸಿದ್ಧವಾಗಬೇಕು. ಹೀಗೆ ಸಾಕ್ಷ್ಯವಾದ ವಸ್ತುವಿಗೆ ಸಾಕ್ಷಿಯ ಅಸ್ತಿತ್ವವನ್ನು ಬಿಟ್ಟು ಬೇರೆ ಸ್ವತಂತ್ರ ಅಸ್ತಿತ್ವವೇ ಇರುವುದಿಲ್ಲ.

ಇಲ್ಲಿಯವರೆಗೆ ನಿರ್ಗುಣ ಆತ್ಮನನ್ನು ಪ್ರತಿಪಾದಿಸಿರುವುದಿಲ್ಲ. ಹಾಗೆ ನಿರ್ಗುಣ ನಾದ ಆತ್ಮನನ್ನು ಪ್ರತಿಪಾದಿಸಲು ಹೊರಟರೆ ಅವನ ಬಗ್ಗೆ ಮಾತನಾಡುವುದೂ ಕಠಿಣವಾಗುತ್ತದೆ. ಆದುದರಿಂದ ಅಜ್ಞಾನದಿಂದಲೇ ಹುಟ್ಟುವ ಅಹಂಕಾರದ ಧರ್ಮವಾದ ಕರ್ತೃತ್ವವು ಆತ್ಮನಿಗೆ ಇರುವುದೆಂದೂ ಆದುದರಿಂದಲೇ ನಾನು ಸುಖಿ, ನಾನು ದುಃಖಿ ಎಂದು ವ್ಯವಹಾರವಾಗುತ್ತದೆಂಬೂ ನಂತರ ಅನ್ವಯ ವ್ಯತಿರೇಕಗಳ ಮೂಲಕ ಅಹಂಕಾರವು ಅನಾತ್ಮವೆಂದೂ ಸಿದ್ಧಮಾಡಿದ್ದಾಯಿತು.

ಇನ್ನು ಸಾಕ್ಷಿ ಸಾಕ್ಷ್ಯ ವಿವೇಚನೆಯಿಂದಲೂ ಇದೇಮಾತನ್ನೇ ಸಿದ್ಧಮಾಡಿ ತೋರಿಸಲಾಗುವುದು.

**ಪ್ರ : 74. ಹಾಗಾದರೆ ಸಾಕ್ಷಿಯಾರು ?**

ಉ : ಆತ್ಮನೇ ಸಾಕ್ಷಿ.

**ಪ್ರ : 75. ಆತ್ಮನಿಂದ ಬೇರೆಯಾದ ವಸ್ತುವೇ ಇಲ್ಲದ ಮೇಲೆ ಆತ್ಮನು ಯಾವುದಕ್ಕೆ ಸಾಕ್ಷಿ ?**

ಉ : ಆತ್ಮನನ್ನು 'ಸಾಕ್ಷಿ ಎಂದು ಹೇಳುವುದೂ ಸರಿಯಲ್ಲ ಆದರೆ ಮುಮುಕ್ಷುಗಳಿಗೆ ತಿಳಿಸಲು ಅನಿವಾರ್ಯವಾಗಿ ದ್ವೈತಭಾಷೆಯಿಂದ ಮಾತ ನಾಡಬೇಕಾಗಿದೆ. ಆದುದರಿಂದ ಆ ಅಜ್ಞಾನದಿಂದ ಕಲ್ಪಿಸಲ್ಪಟ್ಟ ಆತ್ಮನೇ ಸಾಕ್ಷಿಯಾಗಿರುವನು.

ಈ ಸಾಕ್ಷಿಯಾದ ಆತ್ಮನು ಅಂತಃಕರಣದ ಕುಣಿದಾಟವನ್ನು ನೋಡುತ್ತಿದ್ದರೂ ನೋಡದವನಂತೆ ಇರುತ್ತಾನೆ.

**ಪ್ರ : 76. ಎಲ್ಲಾ ಪಕ್ಷದವರು ತಮ್ಮ ತಮ್ಮ ದೃಷ್ಟಿಯಂತೆ ಹೇಳುತ್ತಾರೆ. ಅವುಗಳಲ್ಲಿ ನಾನು ಯಾವುದನ್ನು ನಂಬಲಿ.**

ಉ : ಅನೇಕರು ಅನೇಕ ತರ್ಕದಿಂದ ಸಿದ್ಧಮಾಡಿದರೂ ಅದು ಅನುಭವಕ್ಕೆ ಬರಬೇಕಲ್ಲವೇ ? ಎಲ್ಲಾ ತರದ ಅನುಮಾನವೂ ಅನುಭವದ ಮೇಲೆಯೇ ಅವಲಂಬಿಸಿರುತ್ತದೆ. ಅನುಭವವನ್ನು ಬಿಟ್ಟು ಅನುಮಾನವು ಇರಲಾರದು. ಆದುದರಿಂದ ಬೇರೆ ಸಂಗತಿಗಳಲ್ಲಿ ಎಷ್ಟೇ ಮತಭೇದವಿದ್ದರೂ ಅನುಭವಕ್ಕೆ ಎಲ್ಲರೂ ಶರಣು ಹೋಗಲೇಬೇಕು. ಅಂತಹ ಅನುಭವವನ್ನೇ ನಾವು ಇಲ್ಲಿ ಹೇಳುತ್ತಿರುವುದರಿಂದ ನಮ್ಮ ಮತದಲ್ಲಿ ಯಾವ ಶಂಕೆಯೂ ಇರುವುದಿಲ್ಲ.

**ಪೂರ್ವಪಕ್ಷಿ : ನಿಮ್ಮ ಮಾತಿನಂತೆ ಆತ್ಮನು ಅನುಭವರೂಪ ನಷ್ಟೆ ? ಅಂದರೆ ಪ್ರಮಾತೃವು ಅನುಭವಗಳನ್ನು ಅನುಭವಿಸುತ್ತಾನೆ. ಈ ಅನುಭವಗಳು ಆತ್ಮನಲ್ಲಿ ಏನಾದರೂ ಬದಲಾವಣೆ ಮಾಡುತ್ತಿದ್ದರೆ ಆತ್ಮನು ಅನಿತ್ಯನಾಗುವನು. ಏನೂ ಮಾಡದೇ ಹೋದರೆ ಆತ್ಮನು ಆಕಾಶದಂತೆ ಪ್ರಮಾತೃವೂ ಆಗಲಾರ ಅಂದರೆ ಅನುಭವಿಸುವವನಲ್ಲವಾಗುತ್ತಾನೆ. ಮಳೆಯಿಂದ ಬಿದ್ದನೀರು ಆಕಾಶವನ್ನು ಯಾವರೀತಿಯಿಂದಲೂ ಪರಿಣಾಮ ಮಾಡಲಾರದು. ಆದರೆ ಚರ್ಮದ ಮೇಲೆ ಮಾತ್ರ ಮಳೆ ನೀರಿನಿಂದ ಪರಿಣಾಮವಾಗುವುದು. ಈಗ ಆತ್ಮನು ಆಕಾಶದಂತೆ ಪರಿಣಾಮವಾಗಲಾರನೆಂದರೆ ಪ್ರಮಾ**

**ತೃವು ಆಗಲಾರ. ಇನ್ನು ಚರ್ಮದಂತೆ ಪರಿಣಾಮಗೊಳುತ್ತಾನೆಂದರೆ ಆತ್ಮನು ಅನಿತ್ಯನಾದಂತಾಯಿತು. ನೀವು ಆತ್ಮನು ಅನುಭವಿಸುತ್ತಾನೆನ್ನುತ್ತೀರಿ. ಇದರಿಂದ ಆತ್ಮನು ಅನಿತ್ಯನಾದಂತಾಯಿತಲ್ಲಾ? ಚೈತನ್ಯರೂಪನೆಂದು ಹೇಳುವುದೇ ಸರಿಯಾಗಲಿಲ್ಲ !**

**ಸಿದ್ಧಾಂತಿಯ ಸಮಾಧಾನ :** ಹೊಗೆಯು ಆಕಾಶವನ್ನು ಸೀಳಿ ಮೇಲಕ್ಕೆ ಹೋಗುತ್ತದೆಯೇ ? ಅಥವಾ ಸೀಳದೆ ಮೇಲಕ್ಕೆ ಹೋಗುತ್ತದೆಯೋ ? ಆಕಾಶವನ್ನು ಸೀಳದೆ ಮೇಲಕ್ಕೆ ಹೋಗುತ್ತದೆ ಅಂದರೆ ಆಕಾಶವು ಯಾವಾಗಲೂ ಇದ್ದಂತೆ ಇರುವುದರಿಂದ ಹೊಗೆಗೆ ಗತಿಯಿಲ್ಲ. ಆಗ ಹೊಗೆಯು ಇದ್ದಲ್ಲಿಯೇ ಇರಬೇಕಾಗುತ್ತದೆ. ಇಲ್ಲವೇ ಹೊಗೆಯು ಆಕಾಶವನ್ನು ಸೀಳಿಕೊಂಡು ಹೋಗುತ್ತದೆ ಎಂದರೆ ಹೊಗೆಯು ಆಕಾಶವನ್ನು ಸೀಳುವುದುಂಟೆ? ಆದ್ದರಿಂದ ಎರಡೂ ಅಶಕ್ಯವೆ ? ಆಕಾಶವನ್ನು ಸೀಳಿಕೊಂಡೂ ಹೋಗುವುದಿಲ್ಲ, ಅಲ್ಲಿಯೂ ಇರುವುದಿಲ್ಲ.

ತನ್ನ ಸ್ವಭಾವಕ್ಕೆ ಕುಂದುಂಟಾಗದಂತೆ,ಎರಡನೆಯ ಪದಾರ್ಥಕ್ಕೆ ಗತಿ ಉಂಟಾಗುವಂತೆ ಮಾಡುವುದೇ ಆಕಾಶದ ಸ್ವಭಾವವಾಗಿರುವಂತೆ-ಆತ್ಮವು ವಿಕಾರವನ್ನು ಹೊಂದದೆ ಅಂತಃಕರಣದೊಳಗೆ ಮೂಡುವ ತನ್ನ ಆಭಾಸ ಮೂಲಕ ಎಲ್ಲಾ ವ್ಯವಹಾರಿಕ ಅನುಭಗಳಿಗೂ ಅವಕಾಶವನ್ನು ಕಲ್ಪಿಸಿ ಕೊಡುತ್ತದೆ. ಇಲ್ಲಿ ಆತ್ಮದ ಸ್ವಭಾವಕ್ಕೆ ಕುಂದುಂಟಾಗಲಿಲ್ಲ. ಎರಡನೇ ಪದಾರ್ಥವಾದ ಅಂತಃಕರಣದಲ್ಲಿ ಪ್ರತಿಬಿಂಬಿಸಿದ ಆಭಾಸದ ಎಲ್ಲಾ ವ್ಯಾವಹಾರಕ್ಕೂ ಮುಕ್ತಿಗೂ ಅವಕಾಶವನ್ನು ಉಂಟುಮಾಡಿದಂತಾಯಿತು.

**ಪ್ರ : 77. ಆಭಾಸದ ಮೂಲಕ ಹೇಗೆ ಎಲ್ಲಾ ವ್ಯಾವಹಾರಿಕ ಅನುಭವವಾಗುತ್ತದೆ.**

ಉ : 'ನಾನು ಅರಿತೆ' ಎಂದು ಹೇಳುವಲ್ಲಿ ಬುದ್ಧಿಯು ಕರ್ತೃವೋ ? ಆತ್ಮನು ಕರ್ತೃವೋ? ಇಲ್ಲಿ ಬುದ್ಧಿಯು ಅರಿಯುತ್ತದೆ ಎಂದರೆ ಬುದ್ಧಿಗೆ ಜ್ಞಾನ ಶಕ್ತಿ ಇದೆ ಎಂದಾಗುತ್ತದೆ. ಆತ್ಮನು ಅರಿಯುತ್ತಾನೆಂದರೆ ಅರಿಯುವ ವಿಕಾರಕ್ಕೆ ಆತ್ಮನು ಅಧೀನನೆಂದು ಹೇಳಿದಂತಾಗುವುದು. ಇದನ್ನು ಆಚಾರ್ಯರು ತಮ್ಮ "ತತ್ವ ಬೋಧ" ಗ್ರಂಥದಲ್ಲಿ ಬಿಡಿಸಿದ್ದಾರೆ. "ನಾನು ಅರಿಯುತ್ತೇನೆ"

ಎಂಬ ವಾಕ್ಯದಲ್ಲಿ "ನಾನು" ಎಂಬುದರಿಂದ ಬೋಧವಾಗುವ ಕರ್ತೃವು ಬರೀ ಆತ್ಮನೂ ಅಲ್ಲ, ಬರೀ ಬುದ್ಧಿಯೂ ಅಲ್ಲ. ಆದರೆ ಇವೆರಡನ್ನು ಅಜ್ಞಾನದಿಂದ ಕೂಡಿಸಿ ಆದ ವಸ್ತುವಿಶೇಷವೇ ಅರಿಯುವುದು. ಈ ಅನುಭವ ವಾಕ್ಯದಲ್ಲಿ ಕಂಡುಬರುವ 'ಸತ್' ಮತ್ತು ಜ್ಞಾನಾಂಶಗಳು ಆತ್ಮನವು ಅರಿಯುತ್ತೇನೆಂಬುದರಿಂದ ಬೋಧವಾಗುವ ವಿಕಾರವು ಬುದ್ಧಿಯದು. ಅನಾದಿಯಾದ ಅಜ್ಞಾನದಿಂದ ಇವೆರಡನ್ನೂ ನಾವು ಕೂಡಿಸಿಯೇ ವ್ಯವಹಾರ ಮಾಡುತ್ತೇವೆ. ಈ ಆತ್ಮ ಅನಾತ್ಮ ಅಧ್ಯಾಸವೇ ಎಲ್ಲಾ ವ್ಯವಹಾರಕ್ಕೂ ಮೂಲ.

## ಪ್ರ : 78. ಹಾಗೆ ಅಧ್ಯಾಸವಾಗಲು ಕಾರಣವೇನು ?

ಉ : ಬುದ್ಧಿಯು ಕನ್ನಡಿಯಂತೆ ಸ್ವಚ್ಛವಾಗಿರುವುದರಿಂದ ಆತ್ಮನು ಅದರೊಳಗೆ ಪ್ರತಿಬಿಂಬಿಸುತ್ತಾನೆ; ಅದಕ್ಕೆ ಆಭಾಸವೆಂದು ಹೆಸರು. ಬುದ್ಧಿಯೊಳಗೆ ಕಾಣುವ ಆತ್ಮನ ಪ್ರತಿಬಿಂಬವು ಚೈತನ್ಯಮಯವಾಗಿರುವಂತೆಯೇ ತೋರುತ್ತದೆ. ಮತ್ತು ಈ ಆಭಾಸದಿಂದ ಒಡಗೂಡಿದ ಬುದ್ಧಿಯೂ ಸಹ ಸಹಜವಾಗಿ ಚೈತನ್ಯ ರೂಪ ಆಗಿರುವುದೆಂದು ತೋರಹತ್ತುತ್ತದೆ. ಈ ಕಾರಣದಿಂದಲೂ ನಾವು ಮೋಹಪಡುತ್ತೇವೆ. ಮತ್ತು ಇದರಿಂದಲೇ ಬುದ್ಧಿಯು ಎಲ್ಲಾ ವ್ಯವಹಾರವನ್ನೂ ಮಾಡುವಂತೆ ತೋರುತ್ತದೆ. ಆ ಆಭಾಸವು ತನ್ನ ಬುದ್ಧಿ ವೃತ್ತಿಗಳಿಂದ ಹೊರಗಿನ ವಸ್ತುಗಳನ್ನೂ ಬೆಳಗಿಸುತ್ತದೆ. ಮತ್ತು ಆ ಮೂಲಕ ನಮಗೆ ಆ ವಸ್ತುಗಳ ಜ್ಞಾನವನ್ನೂ ಮಾಡಿಕೊಡುತ್ತದೆ.

ಇದೇ ವಿಷಯವನ್ನು ಶ್ರೀ ವಿದ್ಯಾರಣ್ಯಸ್ವಾಮಿಗಳವರು ಪಂಚದಶಿ ಕೂಟಸ್ಥದೀಪಪ್ರಕರಣದಲ್ಲಿ ಹೀಗೆ ಹೇಳಿದ್ದಾರೆ.

ಸೂರ್ಯನು ಆಕಾಶದಲ್ಲಿಬೆಳಗುತ್ತಿರುತ್ತಾನೆ. ಅವನಿಂದ ಎಲ್ಲಾ ವಸ್ತುಗಳೂ ಬೆಳಗುತ್ತವೆ. ಕನ್ನಡಿಯೂಕೂಡ ಅವನ ಪ್ರಕಾಶದಿಂದಲೇ ಮತ್ತೊಂದುವಸ್ತುವನ್ನು ಬೆಳಗುವುದು. ಏಕೆಂದರೆ ಸೂರ್ಯನ ಪ್ರಕಾಶವಿಲ್ಲದಂತ ಕತ್ತಲೆಯಲ್ಲಿ ಕನ್ನಡಿ ಬೆಳಗಲಾರದು. ಸೂರ್ಯನ ಬೆಳಕಿನಲ್ಲಿ ಕನ್ನಡಿಯು ಸೂರ್ಯನನ್ನು ಪ್ರತಿಬಿಂಬಿಸುತ್ತದೆ. ಆ ಪ್ರತಿಬಿಂಬವನ್ನು ಮನೆಯೊಳಗೆ ಗೋಡೆಯ ಮೇಲೆ ಕತ್ತಲಲ್ಲಿ ಬಿಟ್ಟರೂ ಆ ಸ್ಥಳವನ್ನು ಸ್ವಚ್ಛವಾಗಿ

ಪ್ರಕಾಶ ಮಾಡುತ್ತದೆ. ಈಗ ಕನ್ನಡಿಯನ್ನು, ಆ ಗೋಡೆಯನ್ನು, ಆ ಗೋಡೆಯ ಭಾಗವನ್ನು ಎಲ್ಲವನ್ನು ಸೂರ್ಯನೇ ಬೆಳಗುತ್ತಾನೆ. ಹಾಗೆಯೇ ಕನ್ನಡಿಯಂತಿರುವ ಬುದ್ಧಿಯಲ್ಲಿ ಸೂರ್ಯನಂತಿರುವ ಚಿದ್ರೂಪ ಆತ್ಮನು ಪ್ರತಿಫಲಿಸುತ್ತಾನೆ. ಆಮೇಲೆ ಈ ಬುದ್ಧಿಯು ಯಾವ ವಸ್ತುವಿನಕಡೆ ಲಕ್ಷ್ಯಕೊಡುವುದೋ ಆ ವಸ್ತುವಿನ ಮೇಲೆ ಆಭಾಸ ಬುದ್ಧಿಯ ಬೆಳಕು ಬೀಳುವುದು. ಆದ್ದರಿಂದ ಆ ವಸ್ತುವು ನಮಗೆ ಪ್ರಕಟವಾಗುವುದು. ಈ ವೃತ್ತಿಗಳ ಮೂಲಕವೇ ನಮಗೆ ಬಾಹ್ಯವಸ್ತುಗಳ ಜ್ಞಾನವಾಗುವುದು. ಇಲ್ಲಿ ಆತ್ಮನ ಬುದ್ಧಿಯನ್ನು, ಬುದ್ಧಿ ವೃತ್ತಿಯನ್ನು, ಬುದ್ಧಿ ವೃತ್ತಿಯಿಂದ ಪ್ರಕಟವಾಗುವ ವಸ್ತುಗಳೆಲ್ಲವನ್ನು ಚಿದ್ರೂಪ ಆತ್ಮನೇ ಬೆಳಗುತ್ತಾನೆ, ಬುದ್ಧಿ ವೃತ್ತಿಯು ಆತ್ಮನು ಆಭಾಸದಿಂದ ಕೂಡಿರುವುದರಿಂದ ಚೈತನ್ಯಮಯವಾದಂತೆ ಕಂಡರೂ ಚೈತನ್ಯಮಯವಾಗಿರುವುದಿಲ್ಲ. ಆಭಾಸವು ಚೈತನ್ಯದಂತೆ ಕಂಡರೂ ಆಭಾಸವೇ ವಿನಃ ಚೈತನ್ಯವಲ್ಲ.

**ಪೂರ್ವಪಕ್ಷಿ :** ನಿಮ್ಮ ಮಾತಿನಂತೆ ಆತ್ಮನು ಅನುಭವರೂಪನಷ್ಟೆ! ಆ ಅನುಭವದಿಂದ ಆತ್ಮನು ವಿಕಾರಹೊಂದುವನು; ಒಂದು ಪಕ್ಷ ಅನುಭವದಿಂದ ಆತ್ಮನು ವಿಕಾರಹೊಂದದೆ ಹೋದರೂ ದೋಷವು ತಪ್ಪಿದ್ದಲ್ಲ. ಬಿಸಿಲು ಮತ್ತು ಮಳೆಯಿಂದ ಆಕಾಶವು ಯಾವ ವ್ಯತ್ಯಾಸವನ್ನು ಹೊಂದುವುದಿಲ್ಲ, ಏಕೆಂದರೆ ಆಕಾಶವು ಅವಿಕಾರಿ. ಆದರೆ ಆ ಬಿಸಿಲು ಮಳೆಗಳಿಂದ ಚರ್ಮವು ವಿಕಾರ ಹೊಂದುತ್ತದೆ. ಇನ್ನು ಇವುಗಳಲ್ಲಿ ಆತ್ಮನು ಚರ್ಮದಂತಿರುವನೆಂದರೆ ಚರ್ಮವು ವಿಕಾರವಾದಂತೆ ಆತ್ಮನೂ ವಿಕಾರಿಯಾಗಬೇಕಾಗುತ್ತದೆ; ವಿಕಾರಿಯಾದರೆ ಅನಿತ್ಯವಾಗಬೇಕಾಗುತ್ತದೆ. ಇನ್ನು ಆಕಾಶದಂತಿರುವನೆಂದರೆ ಸುಳ್ಳಾಗಬೇಕಾಗುತ್ತದೆ.

## ಆತ್ಮಾ ಬುದ್ಧಿಗಳ ವಿವೇಚನೆ

**ಪ್ರ : 79. ವಿಕಾರರಹಿತ ಆತ್ಮನೇ ಭೋಕ್ತೃವಿನಂತೆ ಕಾಣುವುದು ಹೇಗೆ? ಉದಾಹರಣೆಸಹಿತ ವಿವರಿಸಿರಿ.**

ಉ : ನದಿಯಲ್ಲಿ ಹೋಗುತ್ತಿರುವ ದೋಣಿಯಲ್ಲಿ ಕುಳಿತ ಮನುಷ್ಯನಿಗೆ ದೋಣಿಯ ವೇಗದಿಂದ ಭ್ರಮೆಗೊಂಡು, ನದಿ ದಂಡೆಯಲ್ಲಿರುವ ನಿಶ್ಚಲವಾದ ವೃಕ್ಷಾದಿಗಳು ಚಲಿಸುತ್ತಿರುವಂತೆ ತೋರುತ್ತವೆ. ಹಾಗೆಯೇ "ನಾನು" ಎಂಬುದೇ ಆತ್ಮವೆಂದು ಮೋಹಗೊಂಡು, "ನಾನು" ಎಂಬುದರ ಭೋಕ್ತೃತ್ವಾದಿಗಳನ್ನು ಆತ್ಮನಲ್ಲಿ ಭ್ರಮೆಯಿಂದ ಕಲ್ಪಿಸುವುದರಿಂದ ವಿಕಾರ ರಹಿತನಾದ ಆತ್ಮನೇ ಭೋಕ್ತೃವಂತೆ ಕಾಣುತ್ತಾನೆ.

ದೃಷ್ಟಾಂತ—೨ ಒಂದು ನಾಟಕ ರಂಗಭೂಮಿ. ಆ ರಂಗಭೂಮಿಯಲ್ಲಿ ಪಾತ್ರದಾರರು ಪಾತ್ರಮಾಡುತ್ತಿದ್ದರೂ ಅಲ್ಲಿ ಉರಿಯುತ್ತಿರುವ ಒಂದು ದೀಪವು ತೋರಿಸುತ್ತದೆ; ನಾಟಕವೆಲ್ಲಾ ಮುಗಿದು ಪಾತ್ರದಾರರೂ ಇಲ್ಲದೇ ಹೋದಾಗ್ಯೂ ಆ ಖಾಲೀ ರಂಗಮಂಟಪವನ್ನೂ ಆ ಜ್ಯೋತಿಯು ಬೆಳಗುತ್ತದೆ. ಹಾಗೆಯೇ ಆತ್ಮನು, ಒಂದೇ ಸಮನೆ "ನಾನು" ಎಂಬ ಪಾತ್ರದಾರನು ಒಂದು ಜಾಗ್ರತ್ತಿನಲ್ಲಿ ಕುಣಿಯುತ್ತಿದ್ದರೂ ಅದನ್ನು ನಿರ್ವಿಕಾರಿಯಾಗಿ ಬೆಳಗುತ್ತಾನೆ; ಸುಷುಪ್ತಿಯಲ್ಲಿ ಆ "ನಾನು" ಎಂಬ ಪಾತ್ರದಾರನು ಇಲ್ಲದಿರುವುದನ್ನು ಅವಿಕಾರಿಯಾಗಿ ಬೆಳಗುತ್ತಾನೆ.

ಜ್ಯೋತಿಯು ಬೆಳಗುವಿಕೆಯು, ಬೆಳಗದಿರುವಿಕೆಯು ಅದರ ಸಮೀಪದಲ್ಲಿರುವ ವಸ್ತುಗಳ ಇರುವಿಕೆ ಮತ್ತು ಇಲ್ಲದಿರುವಿಕೆಯನ್ನೇ ಅವಲಂಬಿಸಿರುತ್ತದೆ. ಇಷ್ಟೇವಿನಃ ಜ್ಯೋತಿಯು ಬೆಳಗುತ್ತದೆಂದರೆ ಆ ಬೆಳಗುವಿಕೆಯಿಂದ ಅದು ವಿಕಾರವನ್ನು ಹೊಂದಲಾರದು; ಬೆಳಗುವುದೆಂಬುದು ಅದಕ್ಕೆ ಒಂದು ಕ್ರಿಯೆಯಲ್ಲ, ಅದು ಒಂದು ಸ್ಥಿತಿ. ಬೇರೆವಸ್ತುಗಳ ದೃಷ್ಟಿಯಿಂದ ಮಾತ್ರ ಅದು ಬೆಳಗುತ್ತದೆ ಅಥವಾ ಬೆಳಗುವುದಿಲ್ಲವೆಂದು ಹೇಳಬೇಕಾಗುತ್ತದೆ.

ಹಾಗೆಯೇ ಚೈತನ್ಯರೂಪ ಆತ್ಮನು, ಅಂತಃಕರಣವು ಇರುವ ಜಾಗ್ರದಾವಸ್ಥೆಯಲ್ಲಿ ಅದನ್ನು ಬೆಳಗುವಂತೆಯೂ ಆ ಅಂತಃಕರಣವು ಇಲ್ಲದ ಸುಷುಪ್ತಿಯಲ್ಲಿ ಅದು ಇಲ್ಲವೆಂದು ಬೆಳಗುವಂತೆಯೂ, ಕಾಣುವುದು ಆ ಅಂತಃಕರಣ ದೃಷ್ಟಿಯಿಂದಲೇ ವಿನಃ ಆತ್ಮನಿಗೆ ಬೆಳಗುವುದೊಂದು ಕ್ರಿಯೆ ಆಗಲಾರದು. ಆ ಬುದ್ಧಿ ವೃತ್ತಿಗಳಿರಲಿ, ಇಲ್ಲದಿರಲಿ ತಾನು ಮಾತ್ರ ಅವಿಕಾರಿಯಾಗಿರುತ್ತಾನೆ.

ಬೆಳಗಿಸಿಕೊಳ್ಳುವ ವಸ್ತುಗಳು ಆತ್ಮನ ಸಮೀಪ ಬಂದಾಗ ಗೌಣ ರೀತಿಯಿಂದ ಆ ವಸ್ತುಗಳನ್ನು ಆತ್ಮ ಬೆಳಗುತ್ತಾನೆಂದು ಹೇಳುತ್ತೇವೆ, ಅಷ್ಟೇವಿನಃ ಆತ್ಮನು ತಾನು ಅವಿಕಾರಿಯಾಗಿ ಇದ್ದಂತೆಯೇ ಇರುತ್ತಾನೆ. ಆದರೆ ಅಂತಃಕರಣ ವೃತ್ತಿಗಳು ತಾವಾಗಿಯೇ ಅವನ ಸಮೀಪ ಬಂದಾಗ ಅವು ಅವನಿಂದ ಬೆಳಗಿಸಿಕೊಳ್ಳಲ್ಪಡುತ್ತವೆ ಎಂದೂ ಅವು ಅವನ ಸಮೀಪ ದಲ್ಲಿಲ್ಲದ ಕಾಲದಲ್ಲಿ ಪ್ರಕಾಶಿಸುವುದಿಲ್ಲವೆಂದೂ ಹೇಳುವುದು ಆ ಅಂತಃ ಕರಣದ ದೃಷ್ಟಿಯಿಂದಲೇ ವಿನಃ ಆತ್ಮನ ದೃಷ್ಟಿಯಿಂದಲ್ಲ.

**ಪೂರ್ವಪಕ್ಷಿ : "ಆತ್ಮವು ಅವಿಕಾರಿ. ಅದು ಬುದ್ಧಿವೃತ್ತಿ ಗಳನ್ನು ನಿರ್ವಿಕಾರಿಯಾಗಿ ಬೆಳಗುತ್ತದೆ" ಎಂದು ನೀವು ಹೇಳಿದಿರಿ. ಸಾಂಖ್ಯರೂ ಸಹಿತ "ಪುರುಷ"ನು ಅವಿಕಾರಿ; ಬುದ್ಧಿ ವೃತ್ತಿಗಳನ್ನೆಲ್ಲಾ ಕರ್ತೃತ್ವರಹಿತನಾಗಿ ಬೆಳಗುತ್ತಾನೆ ಎನ್ನುತ್ತಾರೆ. ಆದುದರಿಂದ ನೀವೂ ಸಾಂಖ್ಯಸಿದ್ಧಾಂತವನ್ನೇ ಹೇಳುತ್ತಿರುವುದಾಗಿ ಕಂಡು ಬರು ತ್ತದೆಯಲ್ಲಾ ?**

ಉ : ನಾವು ಪ್ರತಿಪಾದನೆಮಾಡುವ ಆತ್ಮನಿಗೂ ಸಾಂಖ್ಯರು ಪ್ರತಿ ಪಾದಿಸುವ ಪುರುಷ ಕಲ್ಪನೆಗೂ ಬಹಳ ವ್ಯತ್ಯಾಸವಿದೆ.

**ಪ್ರ : 80. ಸಾಂಖ್ಯ ಮತಕ್ಕೂ ಸಿದ್ಧಾಂತಮತಕ್ಕೂ ಇರುವ ವ್ಯತ್ಯಾಸವೇನು ?**

ಉ : ಸಾಂಖ್ಯ ಮತಕ್ಕೂ ಮತ್ತು ಸಿದ್ಧಾಂತಮತಕ್ಕೂ ಮೂರು ಮುಖ್ಯವಿಷಯಗಳಲ್ಲಿ ಭಿನ್ನಾಭಿಪ್ರಾಯವಿದೆ.

೧) ಪುರುಷರು ಅನೇಕರೆಂದು ಸಾಂಖ್ಯರು ಹೇಳುತ್ತಾರೆ. ವೇದಾಂತಿ ಗಳು ಆತ್ಮನು ಏಕಮಾತ್ರನೆಂದು ನಿಶ್ಚಯಿಸಿದ್ದಾರೆ.

೨) ಸಾಂಖ್ಯರು ಪ್ರಕೃತಿಯನ್ನು ಅಥವಾ ಪ್ರಧಾನವನ್ನು ಸ್ವತಂತ್ರ ವೆನ್ನುತ್ತಾರೆ; ಸಿದ್ಧಾಂತಿಗಳು ಅದನ್ನು ಅನಿರ್ವಚನೀಯವೆನ್ನುತ್ತಾರೆ.

೩) ಈ ಬ್ರಹ್ಮಾಂಡವೆಲ್ಲಾ ಸ್ವತಂತ್ರವಾದ ಪುರುಷನಿಗಿಂತ ಭಿನ್ನ ವಾದ ಪ್ರಧಾನ ಅಥವಾ ಪ್ರಕೃತಿಯ ಪರಿಣಾಮವೆಂದು ಸಾಂಖ್ಯರು ಹೇಳು

ತ್ತಾರೆ. ವೇದಾಂತಿಗಳು, ಬ್ರಹ್ಮಾಂಡವು ಸ್ವತಂತ್ರವಲ್ಲ, ಆತ್ಮನ ಇರುವಿಕೆಯಿಂದ ಇರುವಂತೆ ಕಾಣುತ್ತದೆ ಎಂದು ಹೇಳುತ್ತಾರೆ. ಇದೇ ಸಾಂಖ್ಯರಿಗೂ ಮತ್ತು ವೇದಾಂತಿಗಳಿಗೂ ಇರುವ ವ್ಯತ್ಯಾಸ.

**ಪ್ರ : 81. ಆತ್ಮನ ಇರುವಿಕೆಯಿಂದ ಬ್ರಹ್ಮಾಂಡವೆಲ್ಲಾ ಇರುವಂತೆ ತೋರುವುದು ಹೇಗೆ ?**

ಉ : ಸ್ವಚ್ಛಂದವಾದ ಆಕಾಶದಲ್ಲಿ ಒಂದೇಸಾರಿ ಮೋಡಗಳು ಎದ್ದು ಗುಂಪು ಗುಂಪಾಗಿ ಕಾಣಿಸಿಕೊಂಡು ಮತ್ತೆ ಕರಗಿ ಮಾಯವಾಗಿ ಹೋಗುವಂತೆಯೇ ಇಡೀ ಬ್ರಹ್ಮಾಂಡವೆಲ್ಲಾ ಆತ್ಮನ ಮೇಲೆ ಕಾಣಿಸಿಕೊಳ್ಳುವುದೆಂದು ಹೇಳಬಹುದು. ಬಾಹ್ಯ ಪದಾರ್ಥಗಳ ರೂಪದಿಂದ ಭಾಸವಾಗುತ್ತಿರುವ ಮತ್ತು ಕ್ಷಣ ಮಾತ್ರದಲ್ಲಿ ನಾಶವಾಗಿ ಹೋಗುವ ಬುದ್ಧಿವೃತ್ತಿಗಳೆಲ್ಲಾ ಆತ್ಮನ ಮೇಲೆ ಕಾಣಿಸಿಕೊಂಡು ಪುನಃ ಇಲ್ಲದಂತೆ ಕರಗಿ ಹೋಗುತ್ತವೆ. ಆದುದರಿಂದ ಆತ್ಮನ ಇರುವಿಕೆಯಿಂದ ಈ ಎಲ್ಲಾ ದೃಶ್ಯ ಪದಾರ್ಥಗಳೂ ಇರುವಂತೆ ತೋರುತ್ತವೆ. ಆದರೆ ಆತ್ಮನಿಗೂ ಆ ದೃಶ್ಯ ಪದಾರ್ಥಗಳಿಗೂ ಯಾವ ಸಂಬಂಧವೂ ಇಲ್ಲ.

ಈರೀತಿ ಬುದ್ಧಿಯೇ ಪರಿಣಾಮ ಹೊಂದುವುದೇ ವಿನಃ ಆತ್ಮನು ಯಾವ ಪರಿಣಾಮವನ್ನೂ ಹೊಂದುವುದಿಲ್ಲ.

**ಪ್ರ : 82. ಬುದ್ಧಿಯು ಹೇಗೆ ಪರಿಣಾಮ ಹೊಂದುತ್ತದೆ ?**

ಉ : ಕೊಡದ ಜ್ಞಾನವಾಯಿತೆಂದರೆ ಬುದ್ಧಿಯು ಕೊಡದ ಆಕಾರವಾಯಿತೆಂದು ಅರ್ಥ. ಬುದ್ಧಿ ವೃತ್ತಿಯು ಕೊಡದ ಆಕಾರದ ಪರಿಣಾಮ ಹೊಂದಿದಾಗಲೇ ಕೊಡ ಕಾಣುವುದು. ಇಲ್ಲಿ ಬುದ್ಧಿವೃತ್ತಿಯು ಒಂದು ಕಾಲಕ್ಕೆ ಒಂದೇ ವಸ್ತುವಿನ ಆಕಾರವಾಗಿ ಪರಿಣಾಮ ಹೊಂದುವುದು. ಈರೀತಿ ಒಂದು ವಸ್ತುವಿನ ಆಕಾರದ ಪರಿಣಾಮವನ್ನು ಹೊಂದಿದ ಬುದ್ಧಿ ವೃತ್ತಿಯು ಅದೇಕಾಲಕ್ಕೆ ಮತ್ತೊಂದು ವಸ್ತುವಿನ ಆಕಾರದ ಪರಿಣಾಮವನ್ನು ಹೊಂದಲಾರದು; ಮತ್ತೂ ಅದೇ ಕಾಲಕ್ಕೆ ಅದೇ ತರಹ ವಸ್ತುವಿನ ಆಕಾರದ ಪರಿಣಾಮವನ್ನೂ ಹೊಂದಲಾರದು. ಬೇರೆ ಬೇರೆಕಾಲದಲ್ಲಿ ಬೇರೆ ಬೇರೆ ವಸ್ತುಗಳ ಆಕಾರದ ಪರಿಣಾಮವನ್ನು ಹೊಂದುತ್ತದೆ. ಈ ರೀತಿ ಬುದ್ಧಿಯೇ

ಪರಿಣಾಮವನ್ನು ಹೊಂದಬಲ್ಲುದೇ ವಿನಃ ಆತ್ಮನು ಯಾವ ಪರಿಣಾಮವನ್ನೂ ಹೊಂದಲಾರನು.

**ಪ್ರ : 83. ಆತ್ಮನು ಪರಿಣಾಮ ಹೊಂದದವನು ಬುದ್ಧಿಯೇ ಪರಿಣಾಮ ಹೊಂದುವುದು. ಇದರಿಂದಾದ ಸಿದ್ಧಾಂತವೇನು ?**

ಉ : ಎಲ್ಲಾ ಬುದ್ಧಿ ವೃತ್ತಿಗಳ ವ್ಯಾಪಾರವೂ ಭಾಸವಾಗುವುದು ಆತ್ಮನ ಸಾನ್ನಿಧ್ಯದಿಂದಲೆ. "ನಾನು ಪುಸ್ತಕವನ್ನು ನೋಡಿದೆನು" ಇಲ್ಲಿ ನನ್ನ ಬುದ್ಧಿವೃತ್ತಿಯು ಪುಸ್ತಕದ ಆಕಾರವಾಗಿ ಪರಿಣಾಮ ಹೊಂದಿತು, ಆತ್ಮನು ಮಾತ್ರ ಯಾವ ಪರಿಣಾಮವನ್ನೂ ಹೊಂದಲಾರ. ಆದರೆ ಈ ಬುದ್ಧಿ ವೃತ್ತಿಯು ಪುಸ್ತಕದ ಆಕಾರವಾಗಿ ಪರಿಣಾಮ ಹೊಂದಿದ್ದು ಆತ್ಮನ ಸಾನ್ನಿಧ್ಯದಿಂದಲೆ. ಸೂರ್ಯನ ಸಾನ್ನಿಧ್ಯವಿಲ್ಲದ ಯಾವ ಕನ್ನಡಿಯೂ, ಯಾವ ವಸ್ತುವನ್ನೂ ಪ್ರತಿಬಿಂಬಿಸಲಾರದು. ಆದರೂ ಸೂರ್ಯನು ವಸ್ತುಗಳನ್ನು ಕನ್ನಡಿಯಲ್ಲಿ ಪ್ರತಿ ಬಿಂಬಿಸುವ ಕರ್ತೃವು ಅಲ್ಲ. ಹಾಗೆಯೇ ಆತ್ಮನ ಸಾನ್ನಿಧ್ಯವಿಲ್ಲದ ಯಾವ ಅಂತಃಕರಣವೂ ಯಾವ ವಸ್ತುವನ್ನೂ ನೋಡಲಾರದು.

ಆದುದರಿಂದ ಸೂರ್ಯನು ಕನ್ನಡಿಯಲ್ಲಿ ಪ್ರತಿ ಬಿಂಬಿಸುವ ವಸ್ತುಗಳಿಗೆ ಹೇಗೆ ಕರ್ತೃವಾಗಲಾರನೋ ಹಾಗೆಯೇ ಆತ್ಮನೂ ಬುದ್ಧಿವೃತ್ತಿಯಲ್ಲಿ ಪ್ರತಿಬಿಂಬಿಸುವ ಯಾವ ವಸ್ತುಗಳ ಪ್ರತಿಬಿಂಬವಾಗುವುದಕ್ಕೂ ಕರ್ತೃವಾಗಲಾರನು.೧) ಹೀಗೆಯೇ ಆತ್ಮನು ನೋಡದವನು; ಎಂದರೆ ನೋಡುವ ಕ್ರಿಯೆಯನ್ನು ಮಾಡದಂತವನು. ಬುದ್ಧಿಯು ಎಲ್ಲವನ್ನೂ ನೋಡುವಂತಾದ್ದು. ೨) ಅವನು ಕೇಳದಂತವನು; ಎಂದರೆ ಕೇಳುವ ಕ್ರಿಯೆಯನ್ನು ಮಾಡದಂತವನು; ಬುದ್ಧಿಯೇ ಎಲ್ಲವನ್ನೂ ಕೇಳುವುದು. ೩) ಅವನು ಯತ್ನ, ಕ್ರಿಯೆ, ಇಚ್ಛೆಗಳಿಲ್ಲದವನು; ಎಂದರೆ ಬುದ್ಧಿಯೇ ಯತ್ನ, ಕ್ರಿಯೆ, ಇಚ್ಛೆಗಳನ್ನು ಮಾಡುವುದು. ೪) ಆತ್ಮನು ಅಖಂಡನು ಮತ್ತು ದ್ವೇಷವಿಲ್ಲದವನು; ಬುದ್ಧಿಯು ಖಂಡವಾದುದು ಮತ್ತು ದ್ವೇಷವುಳ್ಳದ್ದು. ೫) ಆತ್ಮನು ಕೋಪರಹಿತನು; ಬುದ್ಧಿಯು ಕೋಪಿಸಿಕೊಳ್ಳುವಂತಾದ್ದು ೬) ಆತ್ಮನು ದುಃಖರಹಿತನು; ಬುದ್ಧಿಯು ದುಃಖಪಡುವಂತಾದ್ದು. ೭) ಆತ್ಮನು ಮೋಹಗೊಳ್ಳದವನು; ಬುದ್ಧಿಯು ಮೋಹ ಹೊಂದುವಂತಾದ್ದು. ೮)

ಆತ್ಮನು ನಿರ್ವಿಕಲ್ಪನು; ಬುದ್ಧಿಯು ಕಲ್ಪಿಸುವುದು, ಕಲ್ಪನೆಗಳಿರುವುದೆಲ್ಲಾ ಬುದ್ಧಿಯಲ್ಲೇ. ೯) ಆತ್ಮನು ಸ್ಮರಣೆಇಲ್ಲದಂತವನು; ಬುದ್ಧಿಯು ಸ್ಮರಿಸುವುದು ೧೦) ಆತ್ಮನು ಎಂದೂ ಮಲಗದಂತವನು; ಬುದ್ಧಿಯು ಮಲಗುವಂತಹದು ೧೧) ಆತ್ಮನು ನಿರಾಕಾರನು; ಬುದ್ಧಿಯು ಪ್ರತಿಯೊಂದು ವಸ್ತುವಿನ ಆಕಾರವನ್ನೂ ಹೊಂದುವುದು. ೧೨) ಆತ್ಮನು ತನ್ನ ರೂಪವನ್ನು ಬಿಟ್ಟು ಅನ್ಯರೂಪವನ್ನು ಎಂದೂ ತಾಳಲಾರನು: ಬುದ್ಧಿಯಾದರೋ ತನ್ನಲ್ಲಿ ಪ್ರತಿಬಿಂಬಿಸಿದ ಎಲ್ಲಾ ವಸ್ತುಗಳ ರೂಪವನ್ನೂ ತಾಳುತ್ತಿರುತ್ತದೆ, ಎಂದರೆ ದೇಹವೇ ತಾನೆಂದು, ದೇಹ ಸಂಬಂಧ ಬಂಧುಗಳೆಲ್ಲಾ ತನ್ನವರೆಂಬ ಅಭಿಮಾನವನ್ನು ಹೊಂದುತ್ತದೆ. ೧೩) ಆತ್ಮನು ಕಂಪವಿಲ್ಲದವನು; ಬುದ್ಧಿಯು ಸದಾ ನಡಗುತ್ತಿರುತ್ತದೆ. ಒಂದೇ ಸಮವಾಗಿ ಎಂದೂ ಇರಲಾರದು. ೧೪) ಆತ್ಮನು ಮೂರುಕಾಲಗಳನ್ನೂ ದಾಟಿದವನು; ಬುದ್ಧಿಯು ಗಡಿ ಮೂರೂ ಕಾಲಗಳೊಳಗೇ ಇರುತ್ತದೆ. ೧೫) ಆತ್ಮನು ಶಾಶ್ವತನು ಬುದ್ಧಿಯು ಕ್ಷಣ ಭಂಗುರವಾದುದು. ೧೬) ಆತ್ಮನು ನಿರಪೇಕ್ಷನು ಅಂದರೆ ಅನಂತನು; ಬುದ್ಧಿಯು ಸಾಪೇಕ್ಷವು ೧೭) ಆತ್ಮನು ಒಳಗಿರುವವನು ಮತ್ತು ಅದ್ವಯನು; ಬುದ್ಧಿಯು ಹೊರಗಿನದು ಅಂದರೆ ದೃಶ್ಯವಾದುದು. ೧೮) ಆತ್ಮನು ಯಾವ ಅಳತೆಗೂ ನಿಲುಕದವನು; ಬುದ್ಧಿಯು ಮರ್ಯಾದಿತವು.

ಆದುದರಿಂದ ಮೇಲೆ ಹೇಳಿದ ೧೮ ವಿಧದಿಂದಲೂ ಆತ್ಮನು ಎಲ್ಲಾ ದೇಹಗಳಲ್ಲೂ ಬುದ್ಧಿಯನ್ನು ನೋಡುತ್ತಿರುತ್ತಾನೆ. ಅಂದರೆ ಬುದ್ಧಿಯ ಎಲ್ಲಾ ಕ್ರಿಯೆಗಳನ್ನೂ ಬೆಳಗುತ್ತಾನೆ.

## ಆತ್ಮನಿಗೆ ಸುಖ ದುಃಖಾದಿಗಳು ಸ್ವರೂಪವಲ್ಲ.

**ಪ್ರ : 84 ಹಿಂದೆ ಅರನೇ ವಾಕ್ಯದಲ್ಲಿ ಆತ್ಮನು ದುಃಖ ರಹಿತನು–ಬುದ್ಧಿಯು ದುಃಖಪಡುವಂತಾದ್ದು ಎಂದಿರಿ. ಆತ್ಮನು ದುಃಖಿಯಾಗಲಾರನೆಂಬುದನ್ನು ಹೇಗೆ ನಿರ್ಣಯಿಸುತ್ತೀರಿ ?**

ಉ : ಆತ್ಮನೇ ದುಃಖಿಯಾದರೆ ಅದನ್ನು ತಿಳಿದು ಕೊಳ್ಳುವ ಸಾಕ್ಷಿಯಾರು ? ದುಃಖಿಯಾದವನಂತೂ ಸಾಕ್ಷಿಯಾಗಲಾರನು. ಏಕೆಂದರೆ ದುಃಖಿಯನ್ನು ನೋಡುವವನು ದುಃಖಿಗಿಂತಲೂ ಬೇರೆ ಇರಲೇಬೇಕು. ಈ ವಿಷಯವನ್ನು ಈ ಹಿಂದೆ ದೃಗ್ದೃಶ್ಯ ಅನ್ವಯ ವ್ಯತಿರೇಕಯುಕ್ತಿಯಲ್ಲಿಯೇ ಪ್ರತಿಪಾದಿಸಲಾಗಿದೆ. ಸಾಕ್ಷಿಯಾದವನಿಗಂತೂ ದುಃಖವಾಗಲಾರದೆಂಬುದು ಪ್ರಸಿದ್ಧ.

**ಪ್ರ : 85 ಸಾಕ್ಷಿಯ ಲಕ್ಷಣವೇನು ?**

ಉ : ಶ್ರುತಿಯಲ್ಲಿ ಸಾಕ್ಷೀ ಲಕ್ಷಣವನ್ನು "**ಸಾಕ್ಷೀಚೇತೋ ಕೇವಲೋನಿರ್ಗುಣಶ್ಚ**" ಕೇವಲನೂ, ನಿರ್ಗುಣನೂ ಆದವನೇ ಸಾಕ್ಷಿಯು **ಉದಾಶೀನತ್ವೇ ಸತಿ ಬೋದ್ಧಾ ಸಾಕ್ಷೀ ಲಕ್ಷಣಮ್**" ಉದಾಶೀನನಾಗಿದ್ದು ಪ್ರತ್ಯಕ್ಷ ನೋಡಿರುವವನೇ ಸಾಕ್ಷಿಯು ಎಂಬುದಾಗಿಯೂ, ಇನ್ನು ಭಗವದ್ಗೀತೆಯಲ್ಲಿ ಸಾಕ್ಷಿ ಲಕ್ಷಣವನ್ನು ೯ನೇ ಅಧ್ಯಾಯದ ೯ ನೇ ಶ್ಲೋಕದಲ್ಲಿ ಮತ್ತು ೧೪ ನೇ ಅಧ್ಯಾಯದ ೨೩ನೇ ಶ್ಲೋಕದಲ್ಲಿ "**ಉದಾಶೀನೋವದಾಸೀನೋ**"ಅಂದರೆ ಆಸಕ್ತಿ ಇಲ್ಲದೆ ತಟಸ್ಥನಾಗಿದ್ದು ನೋಡುವವನೇ ಸಾಕ್ಷಿ ಎಂದು ಹೇಳಲಾಗಿದೆ. ಅಂದರೆ ಯಾವ ಪಕ್ಷಕ್ಕೂ ಸೇರದೆ ಎರಡೂಪಕ್ಷವನ್ನು ಸಾಕ್ಷಾತ್ತಾಗಿ ನೋಡಿರುವವನೇ ಸಾಕ್ಷಿಯು ಎಂದು ಹೇಳಿದೆ. ಇನ್ನು ಉಪದೇಶ ಸಾಹಸ್ರಿಯ ೧೬ ನೇ ಪ್ರಕರಣದ ೮ ನೇ ಶ್ಲೋಕದಲ್ಲಿ "**ಶಿರೋದುಃಖಾದಿನಾತ್ಮಾನಂ ದುಃಖ್ಯಸ್ಮೀತಿ ಹಿ ಪಶ್ಯತಿ । ದ್ರಷ್ಟಾನ್ಯೋ ದುಃಖಿನೋ ದೃಶ್ಯಾದ್ದ್ರಷ್ಟೃತ್ವಾಚ್ಚ ನ ದುಃಖ್ಯಸೌ ॥** ಮನುಷ್ಯನು ತಲೆನೋವು ಇತ್ಯಾದಿ ದುಃಖಗಳಿಂದ"ತಾನೇ ದುಃಖಿ"ಎಂದು ತಿಳಿದುಕೊಳ್ಳುತ್ತಾನೆಯೇ ? ಇಲ್ಲ— ದೃಶ್ಯವಾದ ದುಃಖಂಕ್ಕಿತ ದ್ರಷ್ಟೃವಾದವನು ಬೇರೆಯೇ; ಅವನು ದ್ರಷ್ಟೃವಾಗಿರುವುದರಿಂದ ಎಂದೂ ದುಃಖಿಯಾಗಲಾರನು.

ಮತ್ತೊಂದು ವಿಷಯ— ದುಃಖಿಯಾದವನು ವಿಕಾರ ಹೊಂದಲೇಬೇಕು. ಈ ರೀತಿ ವಿಕಾರ ಹೊಂದುವವನು ಎಂದೂ ಸಾಕ್ಷಿಯಾಗಲಾರ. ಸಾಕ್ಷಿಯು ಕೇವಲನೂ, ನಿರ್ಗುಣನೂ ಆಗಿರುತ್ತಾನೆ. ಅವನೆಂದೂ ಬದಲಿ

ಯಾಗುವುದೇ ಇಲ್ಲ. ಆರೀತಿ ಸಾಕ್ಷಿಯೇ ಬದಲಾವಣೆ ಹೊಂದುತ್ತಿದ್ದರೆ ಆ ಬದಲಾವಣೆಗಳನ್ನು ತಿಳಿಯುವವರೇ ಇಲ್ಲದಂತಾಗುತ್ತದೆ ಮತ್ತು ಬದಲಾವಣೆಗಳನ್ನೆಲ್ಲಾ ನೋಡುವವನೊಬ್ಬನ ಹೊರತು ಉಳಿದ ಯಾರೂ ಬದಲಾವಣೆಯಾಯಿತೆಂದು ಹೇಳಿಯಾರು ? ಆದುದರಿಂದ ಎಲ್ಲಾ ಬುದ್ಧಿಗಳನ್ನೂ, ಬುದ್ಧಿಯ ವಿಕಾರಗಳನ್ನೂ ನೋಡುವವನು ಚೈತನ್ಯರೂಪನಾದ ನಾನು ಸಾಕ್ಷಿಯಾಗಿರುವೆನು. ಆದುದರಿಂದ ನಾನು ಅವಿಕ್ರಿಯನು.

**ಪ್ರ : 86. ಆತ್ಮನು ಅವಿಕಾರಿ ಎಂಬುದನ್ನು ಉದಾಹರಣೆ ಸಹಿತ ತಿಳಿಸಿರಿ.**

ಉ : ಕೊಡವು ಹುಟ್ಟಿದಾಗ ಆಕಾಶ ಹುಟ್ಟಲಿಲ್ಲ,ಕೊಡವು ಹೊಡೆದು ಹೋದಾಗ ಆಕಾಶವು ನಾಶವಾಗಲಿಲ್ಲ. ಹಾಗೆ ಕೊಡವು ಆಕಾಶದಲ್ಲೇ ಹುಟ್ಟಿ ಆಕಾಶದಲ್ಲೇ ಇದ್ದು, ಆಕಾಶದಲ್ಲೇ ನಾಶಹೊಂದಿದರೂ ಆಕಾಶವು ಯಾವರೀತಿಯಿಂದಲೂ ಬದಲಾವಣೆ ಹೊಂದದೆ ಅವಿಕಾರಿಯಾಗಿರುತ್ತದೆಯೋ—ಹಾಗೆಯೇ ಬುದ್ಧಿ ವೃತ್ತಿಯು ಹುಟ್ಟಿದಾಗ ಆತ್ಮನು ಹುಟ್ಟಲಿಲ್ಲ; ಅದು ನಾಶವಾದಮೇಲೆ ಆತ್ಮನು ನಾಶಹೊಂದಲಾರನು; ಈ ಬುದ್ಧಿ ವೃತ್ತಿಗಳು ಆತ್ಮನಲ್ಲಿಯೇ ಹುಟ್ಟಿ, ಆತ್ಮನಲ್ಲಿಯೇ ಇದ್ದು, ಆತ್ಮನಲ್ಲಿಯೇ ನಾಶವಾದರೂ ಆತ್ಮವು ಬದಲಾವಣೆಯನ್ನು ಹೊಂದದೆ ಅವಿಕಾರಿಯಾಗಿಯೇ ಇರುತ್ತದೆ.

**ಪ್ರ : 87. ಆತ್ಮನು ಬುದ್ಧಿಯನ್ನೂ ಬುದ್ಧಿವೃತ್ತಿಗಳನ್ನೂ ನೋಡುತ್ತಾನೆ ಎನ್ನುವುದನ್ನು ಉದಾಹರಣೆಸಹಿತ ವಿವರಿಸಿರಿ.**

ಉ : ಸುಖ ದುಃಖಗಳು ಅಂತಃಕರಣದಲ್ಲಿ ಕೂಡಿಕೊಂಡಿವೆ. ಆದುದರಿಂದ ಹಿಂದೆ ಹೇಳಿದಂತೆ ಸುಖ ದುಃಖವು ಆಗುವುದು ಮನಸ್ಸಿಗೆ ಮಾತ್ರ ಎನ್ನುವುದು ಪ್ರತ್ಯಕ್ಷ ಅನುಭವದ ಮಾತು.

ಒಬ್ಬನು ಕೈಯಲ್ಲಿ ಕೋಲು ಹಿಡಿದುಕೊಂಡು ಬರುತ್ತಾನೆ. ಅವನನ್ನು ಅವನ ಕೈಯಲ್ಲಿರುವ ಕೋಲನ್ನೂ ಎದುರಿಗಿರುವ ಮತ್ತೊಬ್ಬನು ತಟಸ್ಥನಾಗಿಯೇ ನೋಡುತ್ತಾನೆ. ನೋಡುವವನಲ್ಲಿ ಯಾವ ವಿಕಾರವೂ ಉಂಟಾಗುವುದಿಲ್ಲ.

ಹಾಗೆಯೇ ಸುಖ ದುಃಖಾದಿಗಳಿಂದ ಒಡಗೂಡಿದ ಬುದ್ಧಿಯನ್ನು ಆತ್ಮನು ತಟಸ್ಥನಾಗಿಯೇ ನೋಡುತ್ತಾನೆ. ಆದುದರಿಂದ ಅವನು ಸಾಕ್ಷಿ. ಅವನು ಅವಿಕಾರಿ. ಬುದ್ಧಿಯೇ ವಿಕಾರವನ್ನು ಹೊಂದುತ್ತಿರುತ್ತದೆ. ಹಿಂದೆ ಹೇಳಿದಂತೆ ಮಳೆಬಿಸಿಲುಗಳಿಂದ ಚರ್ಮವು ವಿಕಾರ ಹೊಂದುತ್ತದೆಯೇ ವಿನಃ ಆಕಾಶವು ಯಾವ ವಿಕಾರವನ್ನೂ ಹೊಂದಲಾರದು. ಹಾಗೆಯೇ ಸುಖ ದುಃಖಾದಿ ಪ್ರಾಪಂಚಿಕ ವ್ಯವಹಾರದಲ್ಲಿ ಬುದ್ಧಿಯು ವಿಕಾರವನ್ನು ಹೊಂದುತ್ತದೆಯೇ ವಿನಃ ಆತ್ಮನು ಯಾವ ವಿಕಾರವನ್ನೂ ಹೊಂದಲಾರನು.

**ಪ್ರ : 88. ಬುದ್ಧಿಯೇ ವಿಕಾರವನ್ನು ಹೊಂದುತ್ತದೆ ಎಂದು ಹೇಗೆ ತಿಳಿಯಬೇಕು.**

ಉ : ಸುಖ ದುಃಖಾದಿಗಳೊಡನೆ, ಪ್ರಾಪಂಚಿಕ ವಿಷಯಗಳೊಡನೆ ಬುದ್ಧಿಯು ಕೂಡಿಕೊಂಡಾಗ ಅಂದರೆ ಬುದ್ಧಿಯು ಆಯಾ ವಸ್ತುಗಳನ್ನು ಅರಿಯುವಾಗ ಆಯಾ ವಸ್ತುಗಳ ಆಕಾರವನ್ನು ತಾಳುತ್ತದೆ. ಒಂದುಕಾಲದಲ್ಲಿ ಕುರ್ಚಿಯನ್ನು ನೋಡುತ್ತಿರುವ ಬುದ್ಧಿ ವೃತ್ತಿಯು ಅದೇ ಕಾಲದಲ್ಲಿ ಮೇಜನ್ನು ನೋಡಲಾರದು. ಈ ರೀತಿ ಬುದ್ಧಿಯು ಒಂದು ಕಾಲದಲ್ಲಿ ಒಂದೇವಸ್ತುವನ್ನು ಅರಿಯುತ್ತದೆಯೇ ವಿನಃ ಅದೇಕಾಲದಲ್ಲಿ ಉಳಿದವುಗಳನ್ನು ಅರಿಯಲಾರದು. ಈ ಕಾರಣದಿಂದ ಆಯಾಯ ವಸ್ತುಗಳನ್ನು ಅರಿಯುವಾಗ ಬುದ್ಧಿಯು ವಿಕಾರವನ್ನು ಹೊಂದುತ್ತಲೇ ಇರುತ್ತದೆ.

**ಉದಾ :** ಧನದ ಅಪೇಕ್ಷೆಯಿರುವ ಒಬ್ಬನಿಗೆ ಅವನ ಮಿತ್ರನು ಅವನಿಗೆ ಅಗತ್ಯ ಇರುವಷ್ಟು ಹಣವನ್ನು ತಂದುಕೊಟ್ಟನು. ಆಗ ಅವನ ಅಂತಃಕರಣ ಸುಖದ ವಿಕಾರ ಹೊಂದಿತು. ಇನ್ನೂ ಸ್ವಲ್ಪಹೊತ್ತಿನ ನಂತರ "ಮಗನಿಗೆ ಸರ್ಪಕಚ್ಚಿದೆ" ಎಂಬ ವಿಷಯ ತಿಳಿಯಿತು. ಕೂಡಲೇ ಅವನ ಅಂತಃಕರಣ ದುಃಖಾಕಾರವಾಯಿತು.

ಈ ರೀತಿ ಅಂತಃಕರಣವು ವಿಕಾರವನ್ನು ಹೊಂದುತ್ತಲೇ ಇರುತ್ತದೆ.

**ಸಾರಾಂಶ :** ಹೀಗೆ ಅಂತಃಕರಣವು ವಿಕಾರವನ್ನು ಹೊಂದುತ್ತದೆ ಎನ್ನುವುದು ಯಾರಿಗೆ ತಿಳಿಯಬೇಕು ! ಯಾರು ಅಂತಃಕರಣಕ್ಕಿಂತ ಬೇರೆಯಿದ್ದು ವಿಕಾರವನ್ನು ಹೊಂದದೆ ಇರುತ್ತಾನೋ ಆಸಾಕ್ಷಿಯೇ ಈಬುದ್ಧಿಯು

ಅವಸ್ಥೆಗಳನ್ನೆಲ್ಲಾ ನೋಡುತ್ತಿರುತ್ತಾನೆ. ಅವನು ಮಾತ್ರ ವಿಕಾರಹೊಂದದೆ ತಿಳಿಯುತ್ತಿರುತ್ತಾನೆ. ಈ ಅಂತಃಕರಣವು ವ್ಯತ್ಯಾಸಹೊಂದುತ್ತಾ ಇರುವುದನ್ನು ತಾನೇ ತಿಳಿಯಲಾರದು. ಏಕೆಂದರೆ ಒಂದೇ ವಸ್ತುವು ಒಂದೇ ಕೆಲಸಕ್ಕೆ ಕರ್ತೃವೂ ಕರ್ಮವೂ ಆಗಲಾರದೆಂದು ಹಿಂದೆಯೇ ತಿಳಿದುಕೊಂಡಿದ್ದೇವೆ. ಆದುದರಿಂದ ಬುದ್ಧಿಯ ಹೆಚ್ಚುಕಡಿಮೆಗಳನ್ನು ಬುದ್ಧಿಯೇ ನೋಡಲಾರದು. ಬುದ್ಧಿಯನ್ನು ನೋಡುವ ಸಾಕ್ಷಿಯು ಅದಕ್ಕಿಂತ ಬೇರೆ ಇರಲೇಬೇಕು ಮತ್ತು ಬುದ್ಧಿಯ ಎಲ್ಲಾ ವಿಕಾರಗಳು ಸಾಕ್ಷಿಯಾದ ಆತ್ಮನ ಆಧಾರದ ಮೇಲೆಯೇ ಬದುಕಿಕೊಂಡಿವೆ.

**ಪ್ರ : 89. ಆತ್ಮನು ನಿತ್ಯನೆಂದೂ, ಅವಿಕಾರಿ ಎಂದೂ ಹೇಗೆ ಸಿದ್ಧಾಂತ ಮಾಡಬೇಕು ?**

ಉ : ಜಾಗ್ರತ್ಸ್ವಪ್ನ ಸುಷುಪ್ತಿ ಅವಸ್ಥೆಗಳಲ್ಲಿ ಬುದ್ಧಿಯು ಆಯಾಯ ಅವಸ್ಥೆಯನ್ನು ಹೊಂದುತ್ತಿರುತ್ತದೆ. ಆದರೆ ಅದು ಸಾಕ್ಷಿಯಾದ ಆತ್ಮನನ್ನು ಬಿಟ್ಟು ಸ್ವತಂತ್ರವಾಗಿ ಯಾವ ಅವಸ್ಥೆಯನ್ನೂ ಹೊಂದಲಾರದು ಮತ್ತು ಬುದ್ಧಿಯ ಬೇರೆ ಬೇರೆ ಅವಸ್ಥೆಗಳನ್ನು ಒಂದರಿಂದ ಒಂದನ್ನು ವಿಂಗಡಿಸಬಹುದು. ಆದರೆ ಈ ಎಲ್ಲಾ ಅವಸ್ಥೆಗಳಲ್ಲಿ ಸಾಮಾನ್ಯವಾಗಿ ಅನುಸ್ಯೂತನಾಗಿರುವ ಚೈತನ್ಯನಾದ ಆತ್ಮನು ಬೇರೆಯಾಗಿರುವುದಿಲ್ಲ. ಆದುದರಿಂದ ಆತ್ಮನು ಮೂರಾವಸ್ಥೆಗಳಲ್ಲಿರುವುದರಿಂದ ಸದ್ರೂಪನು. ಮೂರಾವಸ್ಥೆಗಳನ್ನು ನಿರ್ವಿಕಾರಿಯಾಗಿ ಅರಿಯುವದರಿಂದ ಚಿದ್ರೂಪನು. ಬುದ್ಧಿಯಾದರೋ ಜಾಗ್ರತ್ಸ್ವಪ್ನದಲ್ಲಿದ್ದು ಸುಷುಪ್ತಿಯಲ್ಲಿ ಇಲ್ಲದೆ ಇರುವುದರಿಂದ ಇದು ಅನಿತ್ಯ ಮತ್ತು ವಿಕಾರಿ. ಚೇತನನಾದ ಆತ್ಮನು ನಿತ್ಯನು ಮತ್ತು ಅವಿಕಾರಿಯು ಆಗಿದ್ದಾನೆ.

**ಸಾರಾಂಶ : (ಸಾಕ್ಷಿ ಸಾಕ್ಷ್ಯ ವಿವೇಕ) :** ಇಲ್ಲಿಯವರೆಗೆ ಸಾಂಖ್ಯರ ದೃಷ್ಟಿಯನ್ನು ಅಲ್ಲಗಳೆಯುವುದಕ್ಕಾಗಿ ಬುದ್ಧಿಯು ವಿಕಾರವನ್ನು ಹೊಂದುವುದೆಂದೂ, ಆತ್ಮನು ಆ ವಿಕಾರ ಹೊಂದುವ ಬುದ್ಧಿಗಿಂತ ಭಿನ್ನನಾಗಿದ್ದು, ಅದರ ವಿಕಾರಹೊಂದುವುದನ್ನು ನೋಡುತ್ತಲೂ, ಮತ್ತು ವಿಕಾರ ಹೊಂದಲು ಅವಕಾಶ ಕೊಡುತ್ತಲೂ ಇರುವನೆಂದು ಹೇಳಿದ್ದಾಯಿತು.

ಪ್ರ : 90. ಸಾಂಖ್ಯ ಸಿದ್ಧಾಂತವು ಈ ವಿಷಯದಲ್ಲಿ ಏನು ಹೇಳುತ್ತದೆ ?

ಉ : ಬುದ್ಧಿಯು ವಿಕಾರವನ್ನು ಹೊಂದುತ್ತಲೇ ಇರುತ್ತದೆ. ಈ ಬುದ್ಧಿಗೆ ಪ್ರಕೃತಿ ಅಥವಾ ಪ್ರಧಾನವೇ ಮೂಲಕಾರಣ. ಈ ಪ್ರಧಾನವು ಪುರುಷನಿಗಾಗಿ ನರ್ತನಮಾಡಿ ಪುರುಷನನ್ನು ಮೋಹಗೊಳಿಸುತ್ತದೆ. ಈ ಪ್ರಧಾನವು ಸತ್ಯವಾದುದು ಮತ್ತು ಸ್ವತಂತ್ರವಾದುದು. ಅದು ಪುರುಷನಿಗೆ ಅಧೀನವಾಗಿರುವುದಿಲ್ಲ. ಹಾಗೆಯೇ ಈ ಪ್ರಧಾನದಿಂದ ಹುಟ್ಟಿದ ಬುದ್ಧಿಯೂ ಸಹ ಪ್ರಧಾನದಂತೆ ಪುರುಷನಿಗಿಂತ ಭಿನ್ನವಾಗಿದೆ; ಸ್ವತಂತ್ರವಾಗಿದೆ ಹಾಗೂ ಮಾರ್ಪಾಟುಗಳನ್ನು ಹೊಂದುತ್ತಲೇ ಇರುತ್ತದೆ. ಇದೇ ಸಾಂಖ್ಯ ಸಿದ್ಧಾಂತ.

ಹಿಂದೆ, ಆತ್ಮನು ಅವಿಕಾರಿಯಾಗಿ ಬುದ್ಧಿ ವೃತ್ತಿಗಳನ್ನು ಬೆಳಗುತ್ತಾನೆ. ಆದರೂ ಆತ್ಮನು ಕರ್ತೃತ್ವರಹಿತನೆಂದು ಪ್ರತಿಪಾದಿಸಿದವಿಷಯವನ್ನು ಅಲ್ಲಗಳೆದು,ನೀವು ಸಾಂಖ್ಯ ಸಿದ್ಧಾಂತವನ್ನೇ ಒಪ್ಪಿಕೊಂಡಂತಾಯಿತು;ಸಾಂಖ್ಯರೂ ಸಹ ಪುರುಷನು ಕರ್ತೃತ್ವರಹಿತನೆಂದೂ ಅವಿಕಾರಿಯಾಗಿ ಬುದ್ಧಿ ವೃತ್ತಿ ಬೆಳಗುತ್ತಾನೆಂದೂ ಹೇಳುತ್ತಾರೆ. ನೀವೂ ಅದನ್ನೇ ಹೇಳುತ್ತೀರಿ ಎಂಬುದನ್ನು ಅಲ್ಲಗಳೆಯಲು ಇಲ್ಲಿಯವರೆಗೆ ಸಾಂಖ್ಯರು ಪ್ರತಿಪಾದಿಸುವ ಪುರುಷನಿಗೂ, ವೇದಾಂತಿಗಳು ಪ್ರತಿಪಾದನೆ ಮಾಡುವ ಆತ್ಮನಿಗೂ ಇರುವ ವ್ಯತ್ಯಾಸವನ್ನು ತಿಳಿಸಿದ್ದಾಯಿತು. ವೇದಾಂತ ಮತದಂತೆ ಆತ್ಮ ಒಂದೇ ಒಂದಾದ ತತ್ವವಿದ್ದು, ಅದಕ್ಕೆ ಬೇರೆಯಾದ ವಸ್ತುಗಳಿಗೆ ಇರುವಿಕೆಯೇ ಇಲ್ಲ; ಎಂದ ಮೇಲೆ ಬುದ್ಧಿಯು ಇರುವುದೆಂದೂ, ಅದು ವಿಕಾರ ಹೊಂದುತ್ತದೆ ಎಂದೂ, ಆತ್ಮನು ಅದಕ್ಕಿಂತ ಭಿನ್ನನಾಗಿದ್ದು ಅದನ್ನು ನೋಡುವವನೆಂದೂ ಹೇಳುವುದು ಸಾಂಖ್ಯರ ಪ್ರಕೃತಿಯನ್ನು ನಿಷೇಧಮಾಡುವುದಕ್ಕಾಗಿ ಹೇಳಿದ್ದಾಗಿದೆ. ಆತ್ಮನಿಗಿಂತ ಬೇರೆಯಾದ ವಸ್ತುವಿಗೆ ಇರುವಿಕೆಯೇ ಇಲ್ಲ. **"ನೇಹ ನಾನಾಸ್ತಿಕಿಂಚನ" ಸರ್ವಂಹ್ಯೇತದ್ಬ್ರಹ್ಮ, ಸರ್ವಂಖಲ್ವಿದಂ ಬ್ರಹ್ಮ, ವಾಸುದೇವ ಸರ್ವಮಿತಿ, ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ"** ಈ ಎಲ್ಲಾ ವಾಕ್ಯಗಳೂ, ಇದನ್ನೇ ಪುಷ್ಟೀಕರಿಸುತ್ತವೆ.

ಮೇಲೆ ಬುದ್ಧಿಯ ಕಲ್ಪನೆ, ಆದರ ವಿಕಾರ ಹೇಳಿದ್ದು ಸಾಂಖ್ಯರ ದೃಷ್ಟಿಯಿಂದ ಮಾತ್ರ. ವೇದಾಂತದ ದೃಷ್ಟಿಯಿಂದ ಅದು ಸರಿಯಾಗಲಾರದು. ಆತ್ಮನ ಇರುವಿಕೆಯಿಂದ ಬುದ್ಧಿಯೂ ಆದರ ವಿಕಾರಗಳೂ ಇವೆಲ್ಲವೂ ಕಲ್ಪಿಸಲ್ಪಟ್ಟಿವೆ. ಇವೆಲ್ಲವೂ ಹಗ್ಗದಲ್ಲಿ ಸರ್ಪವನ್ನೂ ಭ್ರಾಂತಿಯಿಂದ ಕಲ್ಪಿಸಿದಂತೆ ಆತ್ಮನಲ್ಲಿ ಬುದ್ಧ್ಯಾದಿಗಳನ್ನು ಬ್ರಾಂತಿಯಿಂದ ಕಲ್ಪಿಸಲಾಗಿದೆ ಎಂಬುದೇ ವೇದಾಂತ ಸಿದ್ಧಾಂತ.

ಸಾಂಖ್ಯರ ಪಕ್ರಿಯೆಯು ಅಯುಕ್ತವು. ಅವರು ಪ್ರಕೃತಿಯನ್ನು ಸ್ವತಂತ್ರವೆನ್ನುತ್ತಾರೆ. ಸ್ವತಂತ್ರವಾದ ಪ್ರಕೃತಿಯು ಪ್ರವೃತ್ತಿ ಹೊಂದಲಾರದು. ಯಾವಾಗ ಪ್ರಕೃತಿಯು ಪವೃತ್ತಿ ಹೊಂದಲಾರದೋ ಆಗ ಅದು ಯಾವರೀತಿಯಿಂದಲೂ ಪರಿಣಾಮವಾಗಲಾರದು, ಹೀಗೆ ಯಾವ ಪರಿಣಾಮವನ್ನೂ ಹೊಂದದ ಪಕೃತಿಯಿಂದ ಪುರುಷನಿಗೆ ಯಾವ ಭೋಗವೂ ಆಗಲಾರದು. ಆದುದರಿಂದ ಸಾಂಖ್ಯರು ಆತ್ಮರ ಅನೇಕತ್ವ ಕಲ್ಪಿಸುವುದು ಅಯುಕ್ತವೆ. ಅದು ಶ್ರುತಿ ವಿರುದ್ಧವಾದುದು. ಆದುದರಿಂದ ಒಬ್ಬನೇ ಒಬ್ಬನಾದ ಆತ್ಮನಲ್ಲಿಯೇ ಅವಿದ್ಯಾವಶದಿಂದ (ಭ್ರಾಂತಿಯಿಂದ) ಭೇದವೂ, ಪರಿಣಾಮವೂ, ಭೋಗಾಪವರ್ಗಗಳೂ ಕಲ್ಪಿತವಾಗಿ ತೋರುತ್ತವೆಂಬುದೇ ಶ್ರುತಿ ಸಮ್ಮತವಾದುದು.

ಈ ರೀತಿ ಇಲ್ಲಿಯವರೆಗೆ ಯುಕ್ತಿಯಿಂದ ಸಾಂಖ್ಯರ ಪುರುಷ ಕಲ್ಪನೆಯನ್ನೂ, ಪ್ರಕೃತಿಕಲ್ಪನೆಯನ್ನೂ ಅಲ್ಲಗಳೆದು ಆತ್ಮನು ಅವಿಕಾರಿ ಎಂದು ಪ್ರತಿಪಾದಿಸಿದ್ದಾಗಿದೆ. ಇನ್ನು ಮುಂದೆ ಆತ್ಮನು ಅವಿಕಾರಿ ಎಂಬುದನ್ನು ಶ್ರುತಿ ಪ್ರಮಾಣದಿಂದಲೂ ಸಿದ್ಧಮಾಡಲಾಗುವುದು.

**ಪ್ರ : 91. ಆತ್ಮನು ವಿಕಾರಹೊಂದದೆ ಹೋದರೂ ಅಧ್ಯಾಸದಿಂದಲಾದರೂ ವಿಕಾರ ಹೊಂದುವನೆಂದು ಹೇಳಬಹುದಲ್ಲ ?**

ಉ : ಆತ್ಮನು ಶ್ರುತಿ ಅಭಿಪ್ರಾಯದಂತೆ ಯಾವ ಪರಿಣಾಮವನ್ನೂ ಹೊಂದದವನು ಅಧ್ಯಾಸದಿಂದಲಾದರೂ ಪರಿಣಾಮ ಹೊಂದುವನೆಂದರೂ ಶ್ರುತಿಯಲ್ಲಿ "**ಅವ್ಯಕ್ತ, ಅಚಿಂತ್ಯ, ಅವಿಕಾರಿ**" ಎಂಬುದಾಗಿಯೂ ಕೂಟಸ್ಥ ಎಂದರೆ ಯಾವ ಬದಲಾವಣೆ ಹೊಂದದವನೆಂದೂ ಹೇಳುತ್ತದೆ.

ಉದಾ : ಒಂದು ನೇರವಾದ ಕೋಲು ನೀರಿನಲ್ಲಿ ನೆಟ್ಟಗೆ ನಿಲ್ಲಿಸಿದ಴ೆ ಡೊಂಕಾಗಿ ಕಾಣುತ್ತದೆ, ಆದರೂ ಆ ಕೋಲು ಡೊಂಕಾಗಿಯೇ ಇಲ್ಲ. ನೀರಿನ ಅಧ್ಯಾಸದಿಂದ ಹಾಗೆ ಕಾಣುತ್ತದೆ.

ಹಾಗೆಯೇ ಕೂಟಸ್ಥನಾದ ಆತ್ಮನು ಅಧ್ಯಾಸದಿಂದ ಪರಿಣಾಮ ಹೊಂದುವನೆಂದು ಕಂಡುಬಂದರೂ ನಿಜವಾಗಿ ನೋಡಿದರೆ ಈ ಪರಿಣಾಮವೂ ಸಹ ಕಲ್ಪಿಸಲ್ಪಟ್ಟಿರುವುದೇ ಆಗಿದೆ.

ಈ ಕಾರಣದಿಂದ ಷಡ್ಭಾವ ವಿಕಾರಗಳಿಲ್ಲದ ಆತ್ಮನಿಗೆ ತಾರ್ಕಿಕರೆಂಬ ನಾಯಿಗಳು ಯಾವ ತರ್ಕವನ್ನೇ ಮುಂದೆ ಮಾಡಿಕೊಂಡು ಬಂದರೂ ಆತ್ಮನು ವಿಕಾರಿ ಎಂದು ಸಿದ್ಧಾಂತಮಾಡಲು ಆಗುವುದೇ ಇಲ್ಲ

**ಇನ್ನು ಮುಂದೆ ಸಾಂಖ್ಯರ ದೃಷ್ಟಿಯನ್ನೇ ಅವಲಂಬಿಸಿ ಬುದ್ಧಿಯೇ ವಿಕಾರ ಹೊಂದುವುದೆಂದೂ ಆತ್ಮನು ಎಂದೂ ವಿಕಾರ ಹೊಂದಲಾರನೆಂದೂ ಯುಕ್ತಿಯಿಂದ ತೋರಿಸಲಾಗುವುದು.**

**ಪ್ರ : 92. ಬುದ್ಧಿಯೇ ವಿಕಾರಹೊಂದುತ್ತದೆ ಎಂಬುದನ್ನು ಯುಕ್ತಿಯಿಂದ ತೋರಿಸಿರಿ ?**

ಉ : ಹಣ್ಣನ್ನು ತಿಳಿದುಕೊಳ್ಳಬೇಕೆಂಬ ಅಂತಃಕರಣ ವೃತ್ತಿಯು ಇಂದ್ರಿಯಗಳ ದ್ವಾರ ಹೊರಹೊರಟು ವಿಷಯಗಳವರೆಗೆ ಹೋಗಿ ಆಯಾಯ ವಿಷಯದ ಆಕಾರವನ್ನೇ ತಾಳುತ್ತದೆ. ಆಗ ಆ ವಸ್ತುವು ಇಂತಾದ್ದೆ ಎಂಬ ಜ್ಞಾನವಾಗುತ್ತದೆ. ಅಂತಃಕರಣಕ್ಕೂ, ಆ ಬುದ್ಧಿವೃತ್ತಿಗೂ ಆ ಬುದ್ಧಿವೃತ್ತಿಯು ಶರೀರದಿಂದ ಹೊರಗೆ ವಸ್ತುವಿನವರೆಗೆ ಹೋಗುವುದಕ್ಕೂ, ವಸ್ತುವಿನ ಮೇಲೆ ಬಿದ್ದು ವಸ್ತುವಿನ ಆಕಾರ ತಾಳುವುದಕ್ಕೂ, ಚೇತನವೇ ಮೂಲ. ಚೇತನವಿಲ್ಲದೆ ಆ ಅಂತಃಕರಣವು ಯಾವ ಕೆಲಸವನ್ನೂ ಮಾಡಲು ಶಕ್ಯವಾದುದಲ್ಲ.

ಉದಾ : ಸಿನಿಮಾ ಚಿತ್ರಮಂದಿರದಲ್ಲಿ ಒಂದು ಪರದೆ ಇರುತ್ತದೆ. ಅದು ಎಲ್ಲಾ ಸಿನಿಮಾ ಚಿತ್ರಗಳಿಗೂ ಆಧಾರ—ಆದರೂ ಸಿನಿಮಾದಲ್ಲಿ ಮಳೆ ಬಂದರೆ ಆ ಪರದೆಯ ಒಂದು ಎಳೆಯೂ ನೆನೆದಿರುವುದಿಲ್ಲ ಸಿನಿಮಾದಲ್ಲಿ ಬೆಂಕಿ ಹತ್ತಿದಾಗ ಆ ಪರದೆಯ ಒಂದು ಎಳೆಯೂ ಸುಡುವುದಿಲ್ಲ. ಹಾಗೆಯೇ

ಆತ್ಮನು ಅಂತಃಕರಣದ ಸರ್ವವೃತ್ತಿಗಳಿಗೆಲ್ಲಾ ಅವಕಾಶಕೊಟ್ಟು ತಾನು ಏನೂ ಮಾಡದಂತೆ ಇರುತ್ತಾನೆ. ಇವನು ಯಾವ ಭೇದವನ್ನೂ ಹೊಂದದವನು. ಪರಿಣಾಮ ಹೊಂದುವುದೆಲ್ಲಾ ಬುದ್ಧಿಯೇ

**ಪ್ರ : 93. ಚೇತನದಲ್ಲಿ ಯಾವಭೇದವೂ ಇಲ್ಲವೆಂದೂ ಬುದ್ಧಿವೃತ್ತಿಗಳಲ್ಲೇ ಭೇದವೂ, ಪರಿಣಾಮವೂ ಇದೆ ಎಂದು ಉದಾಹರಣೆ ಸಹಿತ ತಿಳಿಸಿರಿ.**

ಉ : ಈ ವಿಷಯವನ್ನು ಶ್ರೀ ವಿದ್ಯಾರಣ್ಯ ಸ್ವಾಮಿಗಳು ಪಂಚದಶಿಯ ಕೂಟಸ್ಥದೀಪ ಪ್ರಕರಣದಲ್ಲಿ ಹೆಚ್ಚು ಸ್ಪಷ್ಟಪಡಿಸಿರುತ್ತಾರೆ. ನಾವೂ ಇಲ್ಲಿ ಅದನ್ನೇ ತಿಳಿದುಕೊಳ್ಳೋಣ.

ಸೂರ್ಯನು ಬೆಳಗುತ್ತಿರುತ್ತಾನೆ. ಆ ಸೂರ್ಯನ ಬೆಳಕಿಗೆ ಸಂಬಂಧಪಟ್ಟ ಎಲ್ಲಾ ವಸ್ತುಗಳೂ ಬೆಳಗಲ್ಪಡುವುವು. ಆ ಸೂರ್ಯನ ಬೆಳಕಿನಲ್ಲಿ ಒಂದು ಕನ್ನಡಿಯನ್ನು ಇಟ್ಟರೂ ಆ ಕನ್ನಡಿಯೂ ಬೆಳಗಲ್ಪಡುವುದು. ಮತ್ತು ಆ ಕನ್ನಡಿಯು ಸೂರ್ಯನ ಬೆಳಕಿನಲ್ಲಿ ತಾನೂ ಬೆಳಗಲ್ಪಟ್ಟು, ಮತ್ತೊಂದು ವಸ್ತುವನ್ನೂ ಬೆಳಗಿಸಲ್ಪಡುವುದು. ಏಕೆಂದರೆ ಸೂರ್ಯ ಪ್ರಕಾಶವಿಲ್ಲದ ಸ್ಥಳದಲ್ಲಿ ಕನ್ನಡಿಯನ್ನಿಟ್ಟರೆ ಅದು ಮುಖವನ್ನು ಪ್ರತಿಬಿಂಬಿಸಲಾರದು. ಸೂರ್ಯನ ಪ್ರಕಾಶದಲ್ಲಿ ಕನ್ನಡಿಯನ್ನು ಹಿಡಿದರೆ ಅದರಲ್ಲಿ ಸೂರ್ಯನು ಪ್ರತಿಬಿಂಬಿತನಾಗುತ್ತಾನೆ. ಆ ಸೂರ್ಯ ಪ್ರತಿಬಿಂಬಿತ ಕನ್ನಡಿಯನ್ನು ಮನೆಯ ಒಳಗೆ ಕತ್ತಲಲ್ಲಿರುವ ಯಾವ ವಸ್ತುಗಳ ಮೇಲೆ ಬಿಟ್ಟರೂ ಆ ವಸ್ತುಗಳು ಬೆಳಗಲ್ಪಡುವುವು. ಗೋಡೆಯ ಮೇಲೆ ಬಿಟ್ಟರೆ ಕನ್ನಡಿಯು ವರ್ತುಳದಷ್ಟು ಭಾಗದ ಗೋಡೆಯು ಮಾತ್ರ ಸ್ಪಷ್ಟವಾಗಿ ಪ್ರಕಟವಾಗುವುದು. ಈಗ ಕನ್ನಡಿ–ಗೋಡೆ—ಗೋಡೆಯ ಭಾಗ ಎಲ್ಲವನ್ನೂ ಸೂರ್ಯನೇ ಬೆಳಗುತ್ತಾನೆ ಎನ್ನುತ್ತೇವೆ. ನಿಜವಾಗಿ ನೋಡಿದರೆ ಸೂರ್ಯನು ತನ್ನ ಕಿರಣಗಳನ್ನು ಹರಿಸುವುದೊಂದೇ ಅವನ ಕರ್ತವ್ಯ. ಆ ಕಿರಣಗಳನ್ನು ಕನ್ನಡಿಯು ಗ್ರಹಿಸಿ ಮತ್ತೊಂದು ವಸ್ತುವನ್ನು ತೋರಿಸುತ್ತದೆ. ಆ ವಸ್ತುವನ್ನು ತೋರಿಸಿದ್ದು ಸೂರ್ಯನಲ್ಲ–ಸೂರ್ಯನ ಆಭಾಸ ಮಾತ್ರ. ಆ ಆಭಾಸವು ಸೂರ್ಯನಂತೆ ಕಂಡರೂ ಸೂರ್ಯನಲ್ಲ.

ಹಾಗೆಯೇ ಬುದ್ಧಿಎಂಬ ಕನ್ನಡಿಯಲ್ಲಿ ಚಿದ್ರೂಪ ಸೂರ್ಯನು ಪ್ರತಿಫಲಿಸುತ್ತಾನೆ. ಆಮೇಲೆ ಬುದ್ಧಿಯು ಯಾವ ವಸ್ತುವಿನ ಕಡೆ ಹರಿಯುತ್ತದೆಯೋ ಆ ವಸ್ತುವಿನಮೇಲೆ ಸಾಭಾಸ ಬುದ್ಧಿಯ ಬೆಳಕು ಬೀಳುತ್ತದೆ. ಆಗ ನಮಗೆ ಆ ವಸ್ತು ಕಾಣುತ್ತದೆ. ಈ ರೀತಿಯಾಗಿ ಬುದ್ಧಿಯ ವಿಕಾರಗಳೆಲ್ಲಾ ಆ ಪ್ರತಿಫಲಿತವಾದ ಚೈತನ್ಯದಿಂದ ಕೂಡಿಕೊಂಡೇ ಇರುತ್ತವೆ. ಇಂತಹ ಬುದ್ಧಿ ವೃತ್ತಿಗಳ ಮೂಲಕವಾಗಿಯೇ ನಮಗೆ ಬಾಹ್ಯ ವಸ್ತುಗಳ ಜ್ಞಾನವಾಗುವುದು.

ಆದರೆ ಆ ಬುದ್ಧಿಯನ್ನು, ಆ ಬುದ್ಧಿ ವೃತ್ತಿಗಳನ್ನೂ ಆ ವೃತ್ತಿಗಳ ಮೂಲಕ ಪ್ರಕಟವಾಗುವ ಎಲ್ಲಾ ಪದಾರ್ಥಗಳನ್ನೂ ಚಿದ್ರೂಪ ಆತ್ಮನೇ ಬೆಳಗುತ್ತಾನೆ ಎಂಬುದು ಸ್ಪಷ್ಟವಿದೆ. ಹೊರಗಿನ ವಸ್ತುಗಳ ಮೇಲೆ ಬಿದ್ದ ವೃತ್ತಿಯು ಆತ್ಮನ ಆಭಾಸದಿಂದ ಕೂಡಿಕೊಂಡಿರುವುದರಿಂದ ಆ ಬುದ್ಧಿ ವೃತ್ತಿಯು ಚೈತನ್ಯಮಯವಾಗಿ ಕಾಣುತ್ತದೆ. ಆದರೆ ನಿಜವಾಗಿ ನೋಡಿದರೆ ಅದು ಆತ್ಮನ ಆಭಾಸ ಮಾತ್ರ. ಅದೇ ಚೈತನ್ಯವಾಗಿರುವುದಿಲ್ಲ. ಆಭಾಸವು ಚೈತನ್ಯದಂತೆಕಂಡರೂ ಅದು ಆಭಾಸವೇ ಹೊರತು ಚೈತನ್ಯವಲ್ಲ.

ಆದುದರಿಂದ ವಿಷಯಗ್ರಹಣಮಾಡಬೇಕೆಂದು ಹೊರಟ ಬುದ್ಧಿ ವೃತ್ತಿಗಳು ಆಯಾ ವಿಷಯಕ್ಕನುಸರಿಸಿ ಬೇರೆ ಬೇರೆ ಆಕಾರವನ್ನು ಹೊಂದಿ ಬೇರೆ ಬೇರೆಯಾಗುತ್ತವೆ. ಆದರೆ ಆ ಎಲ್ಲಾ ಬುದ್ಧಿವೃತ್ತಿಗೂ ಆಧಾರವಾಗಿರುವ ಆತ್ಮನು ಮಾತ್ರ ಬೇರೆ ಬೇರೆ ಯಾಗಿರುವುದಿಲ್ಲ. ಒಬ್ಬನೇ ಸೂರ್ಯನು ಅನೇಕ ಕನ್ನಡಿಯಲ್ಲಿ ಪ್ರತಿಬಿಂಬಿಸಿ ಗೋಡೆಯ ಮೇಲೆ ಆ ಪ್ರತಿ ಬಿಂಬವನ್ನು ಬಿಟ್ಟರೆ ಆ ಪ್ರತಿಬಿಂಗಳೆಲ್ಲಾ ಅನೇಕವಾಗಿ ಕಾಣುತ್ತವೆ. ಉಪಾದಿಗಳ ದೃಷ್ಟಿಯಿಂದ ಬೇರೆ ಬೇರೆಯಾಗಿ ಕಾಣುತ್ತವೆ. ಆದರೆ ಅವೆಲ್ಲಕ್ಕೂ ಆಧಾರವಾಗಿರುವ ಸೂರ್ಯನು ಮಾತ್ರ ಬೇರೆ ಬೇರೆಯಾಗಿರುವುದಿಲ್ಲ.

**ಪ್ರ : 94. ಮತ್ತೊಂದು ಉದಾಹರಣೆಯಿಂದ ವಿವರಿಸಿರಿ.**

ಉ : ವಸ್ತುತ ಆಕಾಶದಲ್ಲಿ ಯಾವ ಭೇದವೂ ಇಲ್ಲದೆ ಹೋದರೂ, ಘಟದ ಉಪಾದಿಯಿಂದ ಘಟಾಕಾಶವೆಂದೂ, ಮಠದ ಉಪಾದಿಯಿಂದ ಮಠಾಕಾಶವೆಂದು ಆಕಾಶದಲ್ಲಿ ಭೇದವನ್ನು ಕಲ್ಪಿಸಲಾಗಿದೆ.

ಹಾಗೆಯೇ ಬುದ್ಧಿ ಎಂಬ ಉಪಾದಿಯಿಂದ ಹೊರಟ ಚೈತನ್ಯವು ಪುಸ್ತಕದ ಆಕಾರವಾಗಿ ಪುಸ್ತಕವನ್ನು ತಿಳಿಯುತ್ತದೆ; ಮೇಜಿನ ಆಕಾರವಾಗಿ ಮೇಜನ್ನು ತಿಳಿಯುತ್ತದೆ. ಹೀಗೆ ಬುದ್ಧಿಯೆಂಬ ಉಪಾದಿಯಿಂದ ತಿಳಿದು ಬರುವ ಭೇದಪದಾರ್ಥಗಳ ಜ್ಞಾನವೂ ಭೇದವಾಗಿ ಕಂಡುಬಂದರೂ ವಸ್ತುತ ಜ್ಞಾನದಲ್ಲಿ ಯಾವ ಭೇದವೂ ಇರುವುದಿಲ್ಲ.

**ಸಾರಾಂಶ :–** ಬುದ್ಧಿಯು ತನಗೆ ವಿಷಯವಾಗಿರುವ ವಸ್ತುವನ್ನು ಮಾತ್ರ ಅರಿಯುತ್ತದೆ. ಆದುದರಿಂದ ಅದು ಪರಿಣಾಮವುಳ್ಳದ್ದು. ಏಕೆಂದರೆ ಅದು ಎಲ್ಲಾ ವಸ್ತುಗಳನ್ನು ಒಂದೇ ಸಾರಿ ತಿಳಿಯಲಾರದು. ಮೇಜಿನ ಮೇಲೆ ಬುದ್ಧಿ ವೃತ್ತಿಹರಿದಾಗ ಮೇಜನ್ನು ಮಾತ್ರ ಅರಿಯಿತು. ಅದೇ ಕಾಲಕ್ಕೆ ಮತ್ತೊಂದನ್ನು ಅರಿಯುವ ಶಕ್ತಿ ಅದಕ್ಕಿಲ್ಲ. ಆದ್ದರಿಂದ ಅದು ಪರಿಣಾಮ ಹೊಂದುವುದಾಗಿದೆ. ಅದು ಪರಿಣಾಮ ಹೊಂದದೆ ಹೋದರೆ ಆತ್ಮನಂತೆ ಸರ್ವಜ್ಞವಾಗಬೇಕಾಗುತ್ತಿತ್ತು. ಆದ್ದರಿಂದ ಬುದ್ಧಿಯೇ ಪರಿಣಾಮ ಹೊಂದುವುದೇ ವಿನಃ ಆತ್ಮನು ಪರಿಣಾಮ ಹೊಂದುವನಲ್ಲ.

**ಪ್ರ : 95. ಹೀಗೆ ಆತ್ಮನು ಪರಿಣಾಮ ಹೊಂದದೆ ಹೋದರೂ, ಏಕವಾಗಿದ್ದರೂ ಅನೇಕವಾಗಿ ತೋರಲು ಕಾರಣ ವೇನು ?.**

ಉ : ಒಂದೇ ಒಂದಾದ ಚೇತನವು ಚಾಂಡಲನ ಬುದ್ಧಿಯನ್ನು ಬ್ರಹ್ಮದೇವನ ಬುದ್ಧಿಯನ್ನು ಬೆಳಗಿದರೂ ಅದು ಬುದ್ಧಿಯಂತೆ ಪರಿಣಾಮ ಹೊಂದುವುದಿಲ್ಲ. ಒಂದೇ ಚೇತನವು ಸರ್ವಬುದ್ಧಿಗಳಿಗೂ ಸಾಕ್ಷಿಯಾಗಿ ರುತ್ತದೆ. ಆದರೂ ಬೆಳಗಿಸಲ್ಪಡುವ ಬುದ್ಧಿಗಳ ಭೇದದಿಂದ ಅದೂ ಬಹು ರೂಪವಾಗಿರುವಂತೆ ಕಾಣುವುದು.

**ಉದಾ:** ಒಂದೇ ಒಂದಾದ ಸೂರ್ಯ ಪ್ರಕಾಶವು ಅನೇಕ ಕನ್ನಡಿಯಲ್ಲಿ ಪ್ರತಿಬಿಂಬಿಸಿ ಅನೇಕ ಸೂರ್ಯರಂತೆ ಕಾಣುತ್ತದೆ. ಹೀಗೆ ಅನೇಕವಾಗಿ ಕಾಣುವುದು ಕನ್ನಡಿಯ ಬಹುತ್ವದಿಂದಲೇ ವಿನಃ ಸೂರ್ಯನ ಬಹುತ್ವದಿಂದಲ್ಲ.

ಈ ಕಾರಣದಿಂದ ಒಂದೇ ಒಂದಾದ ಚೇತನವು ಜಗತ್ತಿನ ಎಲ್ಲಾ ಅಂತಃಕರಣಗಳಿಗೂ ಸಾಕ್ಷಿಯಾಗಿರುತ್ತದೆ. ಪ್ರಕಾಶ್ಯ ವಸ್ತುಗಳಾದ ಅಂತಃಕರಣಗಳು ಅನೇಕ. ಪ್ರಕಾಶವಸ್ತುವು ಮಾತ್ರ ಒಂದೆ. ಈ ಪ್ರಕಾಶ್ಯ ವಸ್ತುಗಳೊಳಗಿನ ಭೇದವು ಪ್ರಕಾಶ ವಸ್ತುವಿಗೆ ಯಾವ ಭೇದವನ್ನೂ ಉಂಟುಮಾಡಲಾರವು.

**ಪೂರ್ವಪಕ್ಷ :- ಎಲ್ಲಾ ದೇಹಗಳಲ್ಲಿಯೂ ಒಬ್ಬನೇ ಆತ್ಮನಿರುವುದಾದರೆ—ಆತ್ಮಜ್ಞಾನಿಯಾದವನಿಗೆ ಅಜ್ಞಾನಿಗಳ ದೇಹ ಸಂಬಂಧದಿಂದ ಅಜ್ಞಾನಿಗಳ ಎಲ್ಲಾ ದುಃಖಗಳೂ ಗಂಟು ಬೀಳಬೇಕಲ್ಲವೆ ?**

**ಸಮಾಧಾನ :** ಈ ಆಕ್ಷೇಪಣೆಯು ಸರಿಯಾದುದಲ್ಲ. ಜ್ಞಾನವಾಗುವ ಮೊದಲೂ ಸಹ ಬೇರೆ ಯಾವ ದೇಹಗಳಿಗಾಗುವ ದುಃಖಗಳಿಂದ ನಮಗೆ ಎಂದೂ ದುಃಖ ಉಂಟಾಗುವುದೇ ಇಲ್ಲ. ಎಂದ ಮೇಲೆ ಜ್ಞಾನವಾದ ಮೇಲೆ ಮತ್ತೊಬ್ಬರ ದೇಹಗಳಿಗಾಗುವ ದುಃಖವು ನಮಗೆ ಹೇಗೆ ಗಂಟು ಬಿದ್ದೀತು ! ಇನ್ನು ಜ್ಞಾನವಾದ ಮೇಲಂತೂ ಸ್ವದೇಹದಿಂದಾಗುವ ದುಃಖವೇ ಮಿಥ್ಯವೆಂದು ತಿಳಿದಿರುವಾಗ ಮತ್ತೊಂದು ದೇಹದ ದುಃಖ ಹೇಗೆ ಬರಬಲ್ಲದು. !!

**ಪ್ರ : 96. ಇದನ್ನು ವೇದ ಪ್ರಮಾಣದಿಂದ ಸ್ಪಷ್ಟೀಕರಿಸಿರಿ.**

ಉ : ಸುಖ ದುಃಖದ ಎಲ್ಲೆ ಬುದ್ಧಿವರೆಗೆ ಮಾತ್ರ. ಆತ್ಮನಿಗೆ ಅದು ಸಂಬಂಧ ಪಡಲಾರದು. ಇದಕ್ಕೆ ಬೃಹದಾರಣ್ಯಕ ಶ್ರುತಿಯು ಪ್ರಮಾಣವೂ ಇದೆ. **"ನ ದೃಷ್ಟೇರ್ದ್ರಷ್ಟಾರಂ ಪಶ್ಯೇರ್ನ ಶ್ರುತೇಃ ಶ್ರೋತಾರಗ್ಂ ಶೃಣುಯಾನ ಮತೇರ್ಮಂತಾರಂ ಮನ್ವಿಥಾ ನ ವಿಜ್ಞಾತೇರ್ವಿಜ್ಞಾತಾರಂ ವಿಜಾನಿಯಾಃ । ಏಷಾತ ಆತ್ಮಾ ಸರ್ವಾಂತರೋಽತೋಽನ್ಯದಾರ್ತಂ"** ಅಂತಃಕರಣದ ದೃಷ್ಟಿಯನ್ನೇ ನೋಡುತ್ತಿರುವ ಆತ್ಮನನ್ನು ದೃಶ್ಯವಾದ ಅಂತಃಕರಣದಿಂದ ನೋಡಲಾರೆ, ಹಾಗೆಯೇ ಶ್ರುತಿಯು

ಶ್ರೋತೃವನ್ನು ಕೇಳಲಾರೆ; ಮತಿಯು ಮಂತೃವನ್ನು ತಿಳಿಯಲಾರೆ; ವಿಜ್ಞಾತಿಯು ವಿಜ್ಞಾತೃವನ್ನು ಅರಿಯಲಾರೆ. ಇವನೇ ಸರ್ವಾಂತರ ಆತ್ಮನು ಇವನಿಗಿಂತ ಬೇರೆಯಾದುದೆಲ್ಲವೂ ಆರ್ತವು" ಎಂಬುದಾಗಿ ಬೃಹದಾರಣ್ಯಕ ಶ್ರುತಿಯ ಮೂರನೇ ಅಧ್ಯಾಯದ ನಾಲ್ಕನೆ ಬ್ರಾಹ್ಮಣದ ಎರಡನೇ ಮಂತ್ರದಲ್ಲಿ ಹೇಳಲಾಗಿದೆ.

೨) **ಯತ್ರಹಿದ್ವೈತಮಿವ ಭವತಿ ತದಿತರ ಇತರಂ ಜಿಘ್ರತಿ ತದಿತರ ಇತರಂ ಪಶ್ಯತಿ ತದಿತರ ಇತರಗ್ಂ ಶೃಣೋತಿ ತದಿತರ ಇತರಮಭಿವದತಿ ತದಿತರ ಇತರಂ ಮನುತೇ ತದಿತರ ಇತರಂ ವಿಜಾನಾತಿಯತ್ರ, ವಾ ಅಸ್ಯ ಸರ್ವಮಾತ್ಮೈವಾ ಭೂತ್ತತ್ಕೇನ ಕಂ ಜಿಘ್ರೇತ್ ತತ್ಕೇನ ಕಂ ಪಶ್ಯೇತ್ ತತ್ಕೇನ ಕಗ್ಂ ಶೃಣುಯಾತ್ ತತ್ಕೇನ ಕಂ ಅಭಿವದೇತ್ ತತ್ಕೇನ ಕಂ ಮನ್ವೀತ ತತ್ಕೇನ ಕಂ ವಿಜಾನೀಯಾತ್ । ಯೇನೇದಗ್ಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾದ್ವಿಜ್ಞಾತಾರಮರೇ ಕೇನ ವಿಜಾನೀಯಾದಿತಿ ॥**

ಎಲ್ಲಿ ದ್ವೈತವಿದ್ದಂತೆ ಇರುವುದೋ ಅಲ್ಲಿ ಒಬ್ಬನು ಇನ್ನೊಂದನ್ನು ಮೂಸುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಕಾಣುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಕೇಳುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಹೇಳುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಆಲೋಚಿಸುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಅರಿತುಕೊಳ್ಳುತ್ತಾನೆ. ಎಲ್ಲಿ ಅವನಿಗೆ ಎಲ್ಲವೂ ಆತ್ಮನೇ ಆಯಿತೋ ಅಲ್ಲಿ ಏತರಿಂದ ಏನನ್ನು ಮೂಸಿಯಾನು ? ಅಲ್ಲಿ ಏತರಿಂದ ಏನನ್ನು ಕಂಡಾನು ? ಅಲ್ಲಿ ಏತರಿಂದ ಏನನ್ನು ಕೇಳಿಯಾನು ? ಅಲ್ಲಿ ಏತರಿಂದ ಏನನ್ನು ಹೇಳಿಯಾನು ? ಅಲ್ಲಿ ಏತರಿಂದ ಏನನ್ನು ಆಲೋಚಿಸಿಯಾನು ? ಅಲ್ಲಿ ಏತರಿಂದ ಏನನ್ನು ಅರಿತಾನು ? ಯಾವನಿಂದ ಇದೆಲ್ಲವನ್ನೂ ಅರಿತುಕೊಳ್ಳುತ್ತಿರುವನೋ ಅವನನ್ನು ಏತರಿಂದ ಅರಿತುಕೊಂಡಾನು? ಎಲೆ, ವಿಜ್ಞಾತೃವನ್ನು ಏತರಿಂದ ಅರಿತುಕೊಂಡಾನು ?" ಎಂಬುದಾಗಿ ಬೃಹದಾರಣ್ಯಕೋಪನಿಷತ್ತಿನ ಎರಡನೇ ಅಧ್ಯಾಯದ ನಾಲ್ಕನೇ ಬ್ರಾಹ್ಮಣದ ಹದಿನಾಲ್ಕನೆಯ ಮಂತ್ರದಲ್ಲಿ ಹೇಳಿದೆ.

೩) ಮತ್ತು ಇದೇರೀತಿ ಬೃಹದಾರಣ್ಯಕದ ನಾಲ್ಕನೇ ಅಧ್ಯಾಯದ ಐದನೇ ಬ್ರಾಹ್ಮಣದ ಹದಿನೈದನೆ ಮಂತ್ರದಲ್ಲೂ ಹೇಳಿದೆ.

೮) ಮತ್ತು **ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್ವಾಚೋಹ ವಾಚಂ ಸ ಉಪ್ರಾಣಸ್ಯಪ್ರಾಣಃ ॥ ಚಕ್ಷುಂ ಷಶ್ಚಕ್ಷುರತಿ ಮುಚ್ಯಧೀರಾಃ ಪ್ರೇತ್ಯಾಸ್ಮಾಲ್ಲೋಕಾದಮೃತಾಭವಂತಿ ।** ಶ್ರೋತ್ರೇಂದ್ರಿಯಕ್ಕೆ ಶ್ರೋತ್ರವಾಗಿಯೂ, ಮನನಮಾಡುವ ಮನಸ್ಸಿಗೆ ಮನನ ಮಾಡುವ ಶಕ್ತಿಯನ್ನು ಕೊಟ್ಟಿರುವುದಾಗಿಯೂ, ಮಾತಿನಿಂದ ಹೇಳುವ ವಾಗೇಂದ್ರಿಯಕ್ಕೆ ಶಕ್ತಿಕೊಟ್ಟು ಮಾತನಾಡಿಸುವುದಾಗಿಯೂ, ದೇಹಧಾರಣೆ ಮಾಡುವ ಪ್ರಾಣಕ್ಕೂ ಪ್ರಾಣಧಾರಣೆ ಮಾಡಿರುವುದಾಗಿಯೂ, ಸರ್ವರೂಪವನ್ನು ಗ್ರಹಿಸುವ ನೇತ್ರಕ್ಕೂ ನೇತ್ರವಾಗಿರುವವನೇ ಆತ್ಮನು ಎಂಬುದಾಗಿ ಕೇನೋಪನಿಷತ್ತಿನ ಎರಡನೇ ಮಂತ್ರವು ಹೇಳುತ್ತದೆ.

ಈ ಎಲ್ಲಾ ಕಾರಣದಿಂದ ಆತ್ಮನ ಅಧಿಷ್ಠಾನದಿಂದ ಸರ್ವ ಇಂದ್ರಿಯಗಳೂ ಕೆಲಸಮಾಡುತ್ತವೆ. ಮನಸ್ಸು ಸಹ ಅವನ ಅಧಿಷ್ಠಾನದಿಂದಲೇ ಸುಖದುಃಖವನ್ನು ಅನುಭವಿಸುತ್ತದೆ. ಜ್ಞಾನಿಯು ತಾನು ಅಧಿಷ್ಠಾನ ರೂಪ ಆತ್ಮನೆಂದು ತಿಳಿದಿರುವುದರಿಂದ ಯಾವ ಇಂದ್ರಿಯದ, ಮನಸ್ಸಿನ ವಿಕಾರಗಳು ನನಗೆ ಸಂಬಂಧವಿಲ್ಲವೆಂದು ತಿಳಿದಿರುತ್ತಾನೆ. ಆದರೆ ಅಜ್ಞಾನಿಗಳು ಅಧ್ಯಾಸದಿಂದ ಮನಸ್ಸಿನ ಸುಖದುಃಖಗಳು ನನಗೇ ಎಂದು ತಿಳಿದು ವ್ಯಥೆಪಡುತ್ತಾರೆ. ಜ್ಞಾನಿಯಾದರೋ ನಿರ್ಲಿಪ್ತನು. ಸುಖದುಃಖಗಳು ಮನಸ್ಸಿನ ವಿಕಲ್ಪಗಳೆಂದು ತಿಳಿದಿರುತ್ತಾನೆ. ಈ ಕಾರಣದಿಂದ ಅಜ್ಞಾನಿಯ ಸುಖದುಃಖವಾದರೂ ಜ್ಞಾನಿಗೆ ಹೇಗೆ ಬಂದು ಗಂಟುಬೀಳುತ್ತವೆ !

ಆತ್ಮನಿಗೆ ದ್ವೈತತತ್ವವೇ ಇಲ್ಲ. ಆತ್ಮನು ಅದ್ವೈತನು. ದ್ವೈತವು ಸುಳ್ಳಾಗಿದೆ. ಆದುದರಿಂದ ಅಹಂಕಾರಸಹಿತವಾದ ಹುಟ್ಟುಸಾವುಗಳಿಗೀಡಾದ ವಿಶ್ವವು ಜ್ಞಾನ ಸ್ವರೂಪನಾದ, ಏಕನಾದ ಆತ್ಮನ ಮೇಲೆ ಭಾಸವಾಗುತ್ತಿರುತ್ತದೆ. ಈ ಕಾರಣದಿಂದ ಕೂದಲು ಮೊದಲಾದವುಗಳು ದೇಹಕ್ಕೆ ಹೇಗೆ ಆಗುಂತಕವೋ ಹಾಗೆಯೇ ಅಹಂಕಾರ ಸಹಿತವಾದ ಹುಟ್ಟು ಸಾವಿಗೆ

ಈಡಾದ ಈ ಜಗತ್ತು ಸಹ ಆತ್ಮ ಸ್ವರೂಪವಾಗಿರದೆ ಆತ್ಮನ ಮೇಲೆ ಆಗುಂತಕವಾಗಿರುತ್ತದೆ. ಅಂದರೆ ಅಜ್ಞಾನಕಾಲದಲ್ಲಿ ಜಗತ್ತು ಸತ್ಯವಾಗಿರುವಂತೆಯೂ, ಜ್ಞಾನಾವಸ್ಥೆಯಲ್ಲಿ ಮಿಥ್ಯವಾಗಿರುವಂತೆಯೂ ಕಾಣುತ್ತದೆ.

**ಉದಾ :** ಹಗ್ಗದ ಅಜ್ಞಾನಕಾಲದಲ್ಲಿ ಸರ್ಪವು ಭಾಸವಾಗುತ್ತದೆ. ಹಗ್ಗವನ್ನು ಹಗ್ಗವನ್ನಾಗಿ ತಿಳಿದಾಗ ಸರ್ಪವು ಅತ್ಯಂತ ಅಭಾವವಾಗಿರುತ್ತದೆ. ಹಾಗೆಯೇ ಅತ್ಯಂತಾಭಾವವಾದ ಈ ತೋರುವ ಜಗತ್ತು ಸಹಿತ ಆತ್ಮನ ಅಜ್ಞಾನಕಾಲದಲ್ಲಿ ಆತ್ಮನ ಮೇಲೆ ಭಾಸವಾಗಿ ಆತ್ಮಜ್ಞಾನವಾದ ಕೂಡಲೇ ಇಲ್ಲದಂತಾಗುತ್ತದೆ. ಹಗ್ಗದ ಅಜ್ಞಾನದಿಂದ ಭಾಸವಾದ ಸರ್ಪವು ಹಗ್ಗವನ್ನು ವಿಷಯುಕ್ತವನ್ನಾಗಿ ಮಾಡುತ್ತದೆಯೆ ! ಎಂದಿಗೂ ಇಲ್ಲ. ಹಾಗೆಯೇ ಆತ್ಮನ ಅಜ್ಞಾನದಿಂದ, ಆತ್ಮನಲ್ಲಿ ಭಾಸವಾಗುವ ಈ ಸುಖದುಃಖಾಕಾರವಾದ, ಮಿಥ್ಯವಾದ ಜಗತ್ತು ಆತ್ಮನ ಮೇಲೆ ಯಾವ ಪರಿಣಾಮವನ್ನು ಉಂಟುಮಾಡಲಾರದು.

## ೩ ಆತ್ಮಾನಾತ್ಮ ವಿವೇಕ.

### (ಅನ್ವಯ ವ್ಯತಿರೇಕ ತರ್ಕದ ಕೊನೆ)

**ಪೂರ್ವಪಕ್ಷಿ : ಆತ್ಮನು ಅನುಮಾನದಿಂದಲೇ ಸಿದ್ಧನಾಗುವುದರಿಂದ ಆತ್ಮನು ಅನುಮಾನ ಪ್ರಮಾಣಕ್ಕೆ ಗಮ್ಯನಾದಂತಾಯಿತು. ಮತ್ತು ತಾವು ಹಿಂದೆ ಒಂದನೇ ಅಧ್ಯಾಯದಲ್ಲಿ ಆತ್ಮನು ಅಪ್ರಮೇಯನೆಂದು ತಿಳಿಸಿದ್ದಿರಿ. ಈಗ ಆತ್ಮನನ್ನು ಅನುಮಾನ ಪ್ರಮಾಣದಿಂದ ಸಿದ್ಧಮಾಡುತ್ತೀರಿ. ಇದರಿಂದ ಆತ್ಮನು ಸ್ವಯಂ ಪ್ರಕಾಶನೆಂದು ಹೇಗೆತಿಳಿಯಬೇಕು ?**

ಉ : ಆತ್ಮನು ಅನುಮಾನ ಪ್ರಮಾಣಕ್ಕೆ ಎಂದೂ ವಿಷಯನಲ್ಲ. ಅವನ ಅಧಿಷ್ಠಾನದಿಂದಲೇ ಅನುಮಾನ ಪ್ರಮಾಣವೂ ಜೀವಿಸಿರುವುದು.

**ಪ್ರ : 97. ಹೀಗಿರುವುದರಿಂದ ಅನುಮಾನ ಪ್ರಮಾಣದಿಂದ ನಮಗಾಗುವ ಪ್ರಯೋಜನವಾದರೂ ಏನು ?**

ಉ : ಅನುಮಾನ ಅಥವ ತರ್ಕ ಪ್ರಮಾಣವು "ಅನಾತ್ಮ ಪದಾರ್ಥವು ಆತ್ಮನಿಂದ ಬೇರೆಯಾಗಿದೆ" ಎಂಬುದನ್ನು ಮಾತ್ರ ತೋರಿಸುತ್ತದೆಯೇ ವಿನಃ ಸ್ವಯಂ ಪ್ರಕಾಶನಾದ ಶುದ್ಧನಾದ ಆತ್ಮನನ್ನು ಎಂದೂ ತೋರಿಸಲಾರದು. ಆದುದರಿಂದ ಆತ್ಮನು ಅನುಮಾನ ಗಮ್ಯನಲ್ಲ. ಸ್ವತಃ ಸಿದ್ಧನು ಮತ್ತು ಸ್ವಯಂಪ್ರಕಾಶನು.

**ಪ್ರ. 98. ಸ್ವಯಂ ಪ್ರಕಾಶವೆಂದರೇನು ?**

ಉ : "ತತ್ತ್ವಪ್ರದೀಪಿಕಾ" ಅಥವಾ "ಚಿತ್ಸುಖೀ" ಎಂಬ ಗ್ರಂಥ ಕರ್ತೃವಾದ ಶ್ರೀ ಚಿತ್ಸುಖಾಚಾರ್ಯರು ಗ್ರಂಥದ ಆರಂಭದಲ್ಲಿಯೇ "**ಅವೇದ್ಯತ್ವೇಸತಿ ಅಪರೋಕ್ಷ ವ್ಯವಹಾರ ವಿಷಯತ್ವಂ ಸ್ವಪ್ರಕಾಶತ್ವಂ**" ಉಳಿದೆಲ್ಲಾ ವ್ಯವಹಾರ ವಿಷಯಗಳು ಪ್ರತ್ಯಕ್ಷಾದಿ ಪ್ರಮಾಣಗಳ ಮೂಲಕ ಗೊತ್ತಾಗುತ್ತವೆ. ಆದರೆ ಆತ್ಮನು ಈ ವ್ಯವಹಾರ ವಿಷಯಗಳಂತೆ ಪ್ರತ್ಯಕ್ಷಾದಿ ಪ್ರಮಾಣಗಳ ಮೂಲಕ ಗೊತ್ತಾಗುವವನಲ್ಲ. ಆದ್ದರಿಂದ ಇವನ್ನು "ಅವೇದ್ಯನು" ವ್ಯವಹಾರ ವಿಷಯಗಳು "ವೇದ್ಯಗಳು" ಮತ್ತು ಆತ್ಮನು ನಮ್ಮ ಸ್ವರೂಪವೇ ಆಗಿರುವುದರಿಂದ ಅವನು ಅಪರೋಕ್ಷನು ಎಂದರೆ ಸಾಕ್ಷಾತ್ ವ್ಯವಹಾರಕ್ಕೆ ವಿಷಯನಾಗುತ್ತಾನೆ.

ಹೇಗೆಂದರೆ "ನಾನು" ಎಂಬ ಸಾಕ್ಷಾದನುಭವಕ್ಕೆ ಆತ್ಮನು ವಿಷಯನಾಗಿರುತ್ತಾನೆ. ಈ ಅನುಭವದಿಂದ ಹೊರಗಿನ ವಿಷಯಗಳ ಜ್ಞಾನದಂತೆ ಆತನ ಜ್ಞಾನವು ಆಗದಿದ್ದರೂ, ಮೂಕನು ಸಕ್ಕರೆಯನ್ನು ತಿಂದು ಸಿಹಿ ಅನುಭವಿಸುವಂತೆ ಆಗುತ್ತದೆಂದು ಮಾತ್ರ ಹೇಳಬಹುದು. ಸಕ್ಕರೆಯ ಸಿಹಿಯಾದರೂ ಹೊರಗಿನದೆ. ಆದರೂ ಉದಾಹರಣೆಗಾಗಿ ಹಾಗೆ ಹೇಳಬೇಕಾಗಿದೆ ಅಷ್ಟೆ. ಯಾವ ಪ್ರಮಾಣಗಳಿಗೂ ದೊರೆಯದವನಾದುದರಿಂದ ಅವೇದ್ಯನು. ನಮ್ಮ ಸ್ವರೂಪವೇ ಆದುದರಿಂದ ಆತ್ಮನು ಅಪರೋಕ್ಷನು. ಆದುದರಿಂದ ಅನುಮಾನ ಪ್ರಮಾಣದಿಂದ ಆತ್ಮನನ್ನು ಸಿದ್ಧಮಾಡಲಾಗುವುದಿಲ್ಲ.

ಅನುಮಾನ ಪ್ರಮಾಣದಿಂದ ಬುದ್ಧಿ ಅಥವಾ ಅಂತಃಕರಣವೂ ಸಹ ಅನಾತ್ಮವೆಂದು ಸಿದ್ಧವಾಗುತ್ತದೆ. ಆದರೆ ಆತ್ಮನು ಅದ್ವಿತೀಯನೆಂಬುದು

ಅನುಮಾನ ಪ್ರಮಾಣದಿಂದ ಸಿದ್ಧವಾಗುವುದಿಲ್ಲ. ಆತ್ಮನು ಅದ್ವಿತೀಯತ್ವವು ಆತ್ಮನ ಸ್ವರೂಪವೇ ಆಗಿರುವುದರಿಂದ ಸ್ವಯಂ ಪ್ರಕಾಶನಾದ ಆತ್ಮನ ಸಂಗಡವೇ ಆ ಅದ್ವಿತೀಯತ್ವವೂ ಸ್ಪಷ್ಟವಾಗಿ ಸಿದ್ಧವಾಗುತ್ತದೆ.

## ಸಾಂಖ್ಯ ಮತ್ತು ವೇದಾಂತ ಮತಗಳ ತಾರತಮ್ಯ

**ಪ್ರ : 99. ಹಿಂದೆ ಸಾಕ್ಷಿ ಸಾಕ್ಷ್ಯ ಅನ್ವಯ ವ್ಯತಿರೇಕಯುಕ್ತಿಯ ಕೊನೆಯಲ್ಲಿ ಸಂಸಾರವು ಆತ್ಮನ ಮೇಲೆ (ಹಗ್ಗದ ಮೇಲೆ ಸರ್ಪವು ಭಾಸವಾಗುವಂತೆ) ಭಾಸವಾಗುತ್ತದೆ ಎಂದು ಹೇಳಿದಿರಿ. ಈ ವಿಷಯದಲ್ಲಿ ಸಾಂಖ್ಯರ ಅಭಿಪ್ರಾಯವೇನು ?**

ಉ : ಪ್ರಮಾತೃ, ಪ್ರಮಾಣ, ಪ್ರಮೇಯ ರೂಪದಿಂದ ಭಾಸವಾಗುತ್ತಿರುವ ಮತ್ತು ಬ್ರಹ್ಮನಿಂದ ಮೊದಲು ಮಾಡಿ ಹುಲ್ಲುಕಡ್ಡಿಯವರೆಗೆ ಭಾಸವಾಗುತ್ತಿರುವ ಈ ಸಂಸಾರವು ಅನ್ವಯ ವ್ಯತಿರೇಕಯುಕ್ತಿಯಿಂದ ಅನಾತ್ಮನೆಂದೂ ಮಿಥ್ಯವೆಂದೂ ಸಿದ್ಧವಾಯಿತು. ಆದರೂ ಸಾಂಖ್ಯರು ಮಾತ್ರ ಈ ಸಂಸಾರವನ್ನು ಹಾಗೆ ತಿಳಿಯುವುದಿಲ್ಲ. ಆತ್ಮನಿಂದ ಭಿನ್ನವಾದ, ಸ್ವತಃ ಸಿದ್ಧವಾದ, ಜಡರೂಪವಾದ ಪ್ರಕೃತಿ ಅಥವಾ ಪ್ರಧಾನವೆಂಬ ಪದಾರ್ಥದ ಪರಿಣಾಮವೇ ಈ ಸಂಸಾರವೆಂದು ಹೇಳುತ್ತಾರೆ. ಅಂದರೆ ಈ ಸಂಸಾರವು ನಿತ್ಯವಾದ ಪ್ರಧಾನದ ಆಶ್ರಯದಲ್ಲಿರುತ್ತದೆಂದು ಅವರ ಅಭಿಪ್ರಾಯ.

**ಪ್ರ : 100. ಸಿದ್ಧಾಂತ ಮತದ ಅಭಿಪ್ರಾಯವೇನು ?**

ಉ : ಹಗ್ಗವನ್ನು ಹಗ್ಗವನ್ನಾಗಿ ತಿಳಿಯದಿರುವ ಅಜ್ಞಾನ—ಅಥವಾ ಅವಿಚಾರದಿಂದ ಸರ್ಪವು ಭಾಸವಾಗುತ್ತದೆ. ಹಾಗೆಯೇ ಆತ್ಮನನ್ನು ಆತ್ಮನನ್ನಾಗಿ ತಿಳಿಯದಿರುವ ಅಜ್ಞಾನ ಅಥವಾ ಅವಿಚಾರದಿಂದ ಈ ಸಂಸಾರವು ಭಾಸವಾಗುತ್ತದೆ. ಮತ್ತು ಸ್ವಯಂ ಪ್ರಕಾಶನಾದ, ಸ್ವತಃ ಸಿದ್ಧನಾದ, ನಿರ್ವಿಕಾರನಾದ ಆತ್ಮನ ಕೇವಲ ಶುದ್ಧ ಚೈತನ್ಯದ ಪ್ರತಿಬಿಂಬವೇ ಆಗಿದೆ. ಆದುದರಿಂದ ಈ ಸಂಸಾರವು ಕಾಲ್ಪನಿಕ. ಇದಕ್ಕೆ ಅಜ್ಞಾನ ಒಂದೇ ಉಪಾದಾನಕಾರಣವಾಗಿರುತ್ತದೆ.

**ಉದಾ :** ಮಣ್ಣಿನ ಪಾತ್ರೆಗಳಿಗೆಲ್ಲಾ ಮಣ್ಣೇ ಉಪಾದಾನಕಾರಣ; ಆಭರಣಗಳಿಗೆಲ್ಲಾ ಬಂಗಾರವೇ ಉಪದಾನಕಾರಣ; ಬಟ್ಟೆಗಳಿಗೆಲ್ಲಾ ನೂಲೇ ಅಥವ ಹರಳೆಯೇ ಉಪಾದಾನಕಾರಣವಾಗಿರುವಂತೆ ಈ ಸಂಸಾರಕ್ಕೆಲ್ಲಾ ಅಂದರೆ ಈ ಪ್ರಪಂಚಕ್ಕೆಲ್ಲಾ ಅಜ್ಞಾನವೇ ಉಪದಾನಕಾರಣವಾಗಿರುತ್ತದೆ.

ಪ್ರ : 101. **ಮಣ್ಣಿನ ಪಾತ್ರೆಗಳಿಗೆಲ್ಲಾ ಮಣ್ಣೇ ಉಪಾದಾನ ಕಾರಣವಾಗಿರುವಂತೆ ಈ ಪ್ರಪಂಚಕ್ಕೆಲ್ಲಾ ಅಜ್ಞಾನವೇ ಉಪಾದಾನ ಕಾರಣವೆನ್ನುತ್ತೀರಿ. ಹಾಗಾದರೆ ಅಜ್ಞಾನವೆಂಬ ಒಂದು ಪದಾರ್ಥಕ್ಕೆ ಇರುವಿಕೆ ಇದೆ ಎಂದು ನಿಮ್ಮ ಮಾತಿನಿಂದ ತಿಳಿಯ ಬರುತ್ತದೆ. ಇದಕ್ಕೆ ನಿಮ್ಮ ಸಮಾಧಾನವೇನು?**

ಉ : ಅಜ್ಞಾನವೆಂಬುದೊಂದು ದ್ರವ್ಯವೆಂದೂ, ಇದರಿಂದ ಸಾಂಖ್ಯ ಮತದಲ್ಲಿ ಹೇಳಿರುವಂತೆ ಇದರಿಂದ ಜಗದುತ್ಪತ್ತಿಯಾಗುತ್ತದೆ ಎಂದೂ ಯಾರೂ ತಿಳಿಯಬಾರದು. ನಿಜವಾಗಿ ನೋಡಿದರೆ ವೇದಾಂತದಲ್ಲಿ ಸೃಷ್ಟಿಯೇ ಇಲ್ಲ. ಆದರೆ ಅಜ್ಞರಿಗೆ ತಿಳಿಸಿಕೊಡುವುದಕ್ಕಾಗಿ ಅಜ್ಞಾನವು ಉಪಾದಾನ ಕಾರಣವೆಂದೂ– ಅದರಿಂದ ಕಾರ್ಯರೂಪಜಗತ್ತು ಆಯಿತೆಂದೂ ಹೇಳಲಾಗಿದೆ. "ಹಗ್ಗದ ಅಜ್ಞಾನದಿಂದಲೇ ಸರ್ಪವು ಭಾಸವಾಯಿತು" ಇಲ್ಲಿ ಹಗ್ಗದ "ಅಜ್ಞಾನ" ವೆಂಬುದು ಒಂದುದ್ರವ್ಯವೇ? ಇಲ್ಲ ತಪ್ಪುತಿಳುವಕೆಯೇ ಉಪಾದಾನಕಾರಣ. ವೇದಾಂತದಲ್ಲಿ ಅಜ್ಞಜನಗಳಿಗೆ ಆತ್ಮಸಾಕ್ಷಾತ್ಕಾರ ಮಾಡಿಕೊಡುವುದಕ್ಕಾಗಿ ಇಲ್ಲದ ಜಗತ್ತನ್ನು ಅಜ್ಞಾನೋಪಾದಾನಕಾರಣದಿಂದ ಸೃಷ್ಟಿ ಮಾಡಿ ನಂತರ ಮಿಥ್ಯವೆಂದು ತೆಗೆಯುತ್ತಾರೆ. ಇದನ್ನು "**ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚತೇ**" ಎಂದು ಹೇಳುತ್ತಾರೆ.

ಪ್ರ : 102. **ಅನುಮಾನ ಪ್ರಮಾಣದಿಂದ ಏನನ್ನು ನಿಶ್ಚಯಿಸಬೇಕು.?**

ಉ : ನೋಡುವವನಿಲ್ಲದ ಹೊರತು ಕಾಣುವ ಯಾವ ಪದಾರ್ಥಗಳೂ ಕಾಣಲಾರವಲ್ಲವೆ! ಹಾಗೆಯೇ ತಿಳಿದುಕೊಳ್ಳುವವನಿಲ್ಲದೆ ತಿಳಿಯಲ್ಪಡುವ ಅಹಂಕಾರಾದಿಗಳು ಇರಲಾರವು. ಆದರೆ ಈ ತಿಳಿಯಲ್ಪಡುವ ಅಹಂಕಾರಾದಿಗಳಿಲ್ಲದೆಯೇ ತಿಳಿದುಕೊಳ್ಳುವವನು ಮಾತ್ರ ಇರಬಲ್ಲನು.

ಹೀಗೆ ಜ್ಞಾನಸ್ವರೂಪ ಆತ್ಮನು ಈ ದೃಶ್ಯ ಜಗತ್ತಿನ ಅಸ್ತಿತ್ವಕ್ಕೆ ಮೂಲವಾಗಿರುವನು. ಆದುದರಿಂದ ಅರಿಯುವವನು ಅರಿಯಲ್ಪಡುವ ವಸ್ತುವಿಗಿಂತ ಭಿನ್ನವಾಗಿರುವಂತೆ, ಆತ್ಮನು ಅರಿಯಲ್ಪಡುವ ಅಹಂಕಾರ ಬುದ್ಧ್ಯಾದಿ ಪ್ರಪಂಚಕ್ಕಿಂತ ಬೇರೆಯಾಗಿರುವನೆಂದು ಅನುಮಾನದಿಂದ ನಿಶ್ಚಯಿಸಬೇಕು.

**ಪ್ರ : 103. ಆತ್ಮನು ಯಾವ ಪ್ರಮಾಣಕ್ಕೂ ವಿಷಯನಲ್ಲವೆಂದು ಹೇಳಿದಿರಿ. ಅನುಮಾನ ಪ್ರಮಾಣದಿಂದ ಅರಿಯಲ್ಪಡುವ ಪ್ರಪಂಚಕ್ಕೆ ಭಿನ್ನನೆಂದು ತಿಳಿಸಿದಿರಿ. ಹೀಗಿರುವುದರಿಂದ ಅಪ್ರಮೇಯನೆಂದು ಹೇಗೆ ಸಿದ್ಧಮಾಡುವಿರಿ ?**

ಉ : ಪ್ರಮಾತೃ, ಪ್ರಮಾಣ, ಪ್ರಮೇಯವ್ಯವಹಾರವೆಲ್ಲಾ ಆತ್ಮನನ್ನು ಆತ್ಮನನ್ನಾಗಿ ತಿಳಿಯದ ಅಜ್ಞಾನದಿಂದಲೇ ಹುಟ್ಟಿರುವುದೆಂದು ಹಿಂದೆಯೆ ತಿಳಿಸಿದ್ದಾಗಿದೆ. ಈತ್ರಿಪುಟೀವ್ಯವಹಾರವೆಲ್ಲಾ ಪ್ರಮಾಣಗೋಚರವಾಗುತ್ತವೆ. ಆತ್ಮನಾದರೋ ತ್ರಿಪುಟೀವ್ಯವಹಾರಕ್ಕೆ ಆಶ್ರಯನು.

ಅವನು ಪ್ರಮಾಣಗೋಚರನಲ್ಲ. ಸ್ವತಃಸಿದ್ಧನು. ಇಂದ್ರಿಯಜನ್ಯವಾದ ಜ್ಞಾನವೆಲ್ಲಾ ಅಜ್ಞಾನದ ಕಾರ್ಯವೆ. ಈ ಜಗತ್ತೆಲ್ಲವೂ ಇಂತಹ ಅಜ್ಞಾನಕಾರ್ಯವೇ ಆಗಿವೆ. ಕಾರ್ಯರೂಪವಾದ ಈ ಜಗತ್ತು ತನ್ನ ಕಾರಣವಾದ ಅಜ್ಞಾನವನ್ನು ಬಿಟ್ಟು ಬೇರೆ ಮತ್ತಾರ ಆಶ್ರಯವನ್ನು ಹೊಂದೀತು !

ಯಾವ ವಸ್ತುಗಳು ನಮಗಿಂತ ಭಿನ್ನವಾಗಿರುತ್ತವೆಯೋ ಅವುಗಳ ಜ್ಞಾನವಾಗುವುದು ಶಕ್ಯವಿದೆ. ಭೌತಿಕ ವಸ್ತುಗಳು ನಮ್ಮ ದೇಹಕ್ಕಿಂತ ಹೊರಗಿರುತ್ತವೆ. ದೇಹಕ್ಕಿಂತ ಹೊರಗಿರುವ ಕುರ್ಚಿ, ಮೇಜು ಇತ್ಯಾದಿ ವಸ್ತುಗಳ ಜ್ಞಾನ ನಮಗೆ ಆಗುತ್ತದೆ. ಇನ್ನು ಇಂದ್ರಿಯಗಳ ದೃಷ್ಟಿಯಿಂದ ನೋಡಿದರೆ ದೇಹವು ಹೊರಗಿನದಾಗುತ್ತದೆ; ಏಕೆಂದರೆ ಇಂದ್ರಿಯಗಳು ತಿಳಿಯುವುವು, ದೇಹವು ತಿಳಿಸಿಕೊಳ್ಳುವುದು. ಇನ್ನು ಮನಸ್ಸಿನ ದೃಷ್ಟಿಯಿಂದ ಇಂದ್ರಿಯಗಳುಹೊರಗಿನವು, ಮನಸ್ಸು ಒಳಗಿನದಾಗುತ್ತದೆ. ಏಕೆಂದರೆ ಮನಸ್ಸು ಅರಿಯುವುದಾಗುತ್ತದೆ; ಇಂದ್ರಿಯಗಳು ಅರಿಯಲ್ಪಡುವುವಾ

ಗಿರುತ್ತವೆ. ಹಾಗೆಯೇ ಅಂತಹ ಮನಸ್ಸುಕೂಡ ಹೊರಗಿನದಾಗುತ್ತದೆ; ಸಾಕ್ಷಿಚೈತನ್ಯವು ಒಳಗಿನದಾಗಿರುತ್ತದೆ. ಏಕೆಂದರೆ ಸಾಕ್ಷೀ ಚೈತನ್ಯವು ಅರಿಯುತ್ತದೆ; ಮನಸ್ಸು ಅರಿಸಿಕೊಳ್ಳುತ್ತದೆ. ಅಂದರೆ ಸಾಕ್ಷೀ ಚೈತನ್ಯವು ಮನಸ್ಸನ್ನು ಪ್ರಕಾಶಮಾಡುತ್ತದೆ. ಇನ್ನು ಆ ಸಾಕ್ಷೀ ಚೇತನವಾದರೋ ತನಗೆ ತಾನೇ ಹೊರಗಿನದಾಗಲಾರದು. ಅದನ್ನು ಯಾರಾದರೂ ಪ್ರಕಾಶಪಡಿಸುವವರಿದ್ದರೆ ಮಾತ್ರ ಅದು ಹೊರಗಿನದಾಗುತ್ತಿತ್ತು. ಅದನ್ನು ಯಾರೂ ಪ್ರಕಾಶ ಪಡಿಸಲಾರರು. ಅದು ಎಲ್ಲವನ್ನು ಪ್ರಕಾಶಪಡಿಸುತ್ತದೆ. ಆದ್ದರಿಂದ ಆತ್ಮನು ಅಪ್ರಮೇಯನು. ಭಗವಂತನು ಶ್ರೀ ಮದ್ಭಗವದ್ಗೀತೆಯ ಮೂರನೇ ಅಧ್ಯಾಯದ ೪೨ ನೇ ಶ್ಲೋಕದಲ್ಲಿ "ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂಮನಃ । ಮನಸಸ್ತು ಪರಾಬುದ್ಧಿಯೋಃ ಬುದ್ಧೇಃಪರತಸ್ತು ಸಃ ॥ ವಿಷಯುಗಳು ದೇಹಕ್ಕಿಂತಲೂ ಹೊರಗಿರುವುವು, ಆದ್ದರಿಂದ ದೇಹವು ವಿಷಯುಗಳಿಗಿಂತ ಶ್ರೇಷ್ಠ. ಇನ್ನು ಇಂದ್ರಿಗಳ ದೃಷ್ಟಿಯಿಂದ ದೇಹ ಹೊರಗಿರುವುದು, ಅರಿಯಲ್ಪಡುವುದು. ಮನಸ್ಸಿನ ದೃಷ್ಟಿಯಿಂದ ಇಂದ್ರಿಯುಗಳು ಹೊರಗೆ ಇವೆ. ಏಕೆಂದರೆ ಅವು ಅರಿಸಿಕೊಳ್ಳುವವು ಮನಸ್ಸು ಅರಿಯುವುದು; ಬುದ್ಧಿಯ ದೃಷ್ಟಿಯಿಂದ ಮನಸ್ಸು ಹೊರಗಿರುವುದು; ಬುದ್ಧಿಯು ಒಳಗಿರುವುದು; ಬುದ್ಧಿಯ ದೃಷ್ಟಿಯಿಂದ ಮನಸ್ಸು ಅರಿಸಿಕೊಳ್ಳುವುದು, ಏಕೆಂದರೆ ಬುದ್ಧಿಯು ಅರಿಯುವುದು ಮನಸ್ಸು ಅರಿಸಿಕೊಳ್ಳುವುದು. ಇನ್ನು ಆತ್ಮನದೃಷ್ಟಿಯಿಂದ ಬುದ್ಧಿಯು ಹೊರಗಿದೆ. ಏಕೆಂದರೆ ಬುದ್ಧಿಯು ಅರಿಸಿಕೊಳ್ಳುವುದು, ಆತ್ಮ ಅರಿಯುವುದು. ಇನ್ನು ಆತ್ಮನನ್ನು ಅರಿಯುವವರು ಯಾರೂ ಬೇರೆ ಇಲ್ಲ. ಆದ್ದರಿಂದ ಆತ್ಮನು ಅಪ್ರಮೇಯನೆಂದು ಸ್ಪಷ್ಟಪಡಿಸಿದ್ದಾರೆ.

ಈ ಬುದ್ಧ್ಯಾದಿ ದೃಶ್ಯವಸ್ತುಗಳು, ಪ್ರಕಟವಾಗಲು ಮತ್ತೊಂದು ಪ್ರಮಾಣವನ್ನು ಅಪೇಕ್ಷಿಸುತ್ತವೆ. ಏಕೆಂದರೆ ಇವುದೃಶ್ಯಪದಾರ್ಥಗಳು. ಇವು ದ್ರಷ್ಟನಿಲ್ಲದೆ ಇವುಗಳು ಸಿದ್ಧವಾಗಲಾರವು. ಇವುಗಳಿಗೆ ಅಜ್ಞಾನ ಒಂದೇ ಕಾರಣ. ಇವು ಪ್ರಕಟವಾಗಲು ಪ್ರತ್ಯಕ್ಷ ಅನುಮಾನಾದಿ ಪ್ರಮಾಣವನ್ನು ಅಪೇಕ್ಷಿಸುತ್ತವೆ. ಆದುದರಿಂದ ಪ್ರಮಾಣಗಳಿಲ್ಲದೆ ಅವು ತಮ್ಮಷ್ಟಕ್ಕೆ ತಾವೇ ಸಿದ್ಧವಾಗಲಾರವು. ಆತ್ಮನಾದರೋ ಚೈತನ್ಯರೂಪನಾಗಿರು

ವುದರಿಂದ ಅವನು ಪ್ರಕಟವಾಗಲೂ ಮತ್ತೇನನ್ನು ಅಪೇಕ್ಷಿಸಲಾರನು. ಆದ್ದು ದರಿಂದ ಆತ್ಮನು ಸ್ವಯಂಪ್ರಕಾಶನು. ಉಳಿದ ವಸ್ತುಗಳೆಲ್ಲಾ ಇಂದ್ರಿಯ ಗೋಚರಗಳು. ಆತ್ಮನು ಇಂದ್ರಿಯಗೋಚರನಾಗದಿದ್ದರೂ ಅವನ ಅಸ್ತಿತ್ವದ ಬಗ್ಗೆ ನಮಗೆ ಏನೂ ಸಂದೇಹ ಬರುವಕಾರಣವೇ ಇಲ್ಲ. ಯಾರೂ ತನ್ನ ಇರುವಿಕೆಯ ಬಗ್ಗೆ ಎಂದೂ ಸಂದೇಹ ಪಟ್ಟಿರುವುದು ಕಾಣುವುದಿಲ್ಲ.

**ಉದಾ :–** ಒಬ್ಬ ಮುಗ್ಧಮನುಷ್ಯ ದಾರಿಯಲ್ಲಿ ಹೋಗುತ್ತಿದ್ದ. ಅವನು ಮುಗ್ಧನೆಂಬುದನ್ನು ಅರಿತ ಚತುರನೊಬ್ಬ ಅವನನ್ನು ಭೆಟ್ಟಿಯಾದ. ನಮಸ್ಕಾರ ಚಮತ್ಕಾರಗಳೂ, ಕುಶಲ ಪ್ರಶ್ನೆಯೂ ಆದವು. ಎಲ್ಲಿಂದ ಬಂದಿರಿ? ಮುಗ್ಧಮನುಷ್ಯನ ಪ್ರಶ್ನೆ. ನಿನ್ನ ಹೆಂಡತಿ ಊರಿನಿಂದ ಬಂದೆ. ಚತುರನ ಉತ್ತರ. ಅಲ್ಲಿ ಏನು ವಿಶೇಷ ? ಮತ್ತೇನೂ ಇಲ್ಲ ಅಲ್ಲಿ ದೊಡ್ಡ ಅಪಚಾರವಾಗಿದೆ. ಹೇಳಲಿಕ್ಕೂ ಭಯವಾಗುತ್ತದೆ. ನಿನ್ನ ಮನಸ್ಸಿಗೂ ನೋವಾಗುತ್ತದೆ ಎಂದ ಚತುರ ಮನುಷ್ಯ. ಅಂತಾದ್ದೇನು ? ದಯಮಾಡಿ ಹೇಳಿರಿ. ಏನೂ ಇಲ್ಲ, ಪಾಪ! ಚಿಕ್ಕವಯಸ್ಸಿನ ನಿನ್ನ ಹೆಂಡತಿ ನಿನ್ನೆಯ ದಿನ"ರಂಡೆ"ಯಾದಳು! ಅದನ್ನು ಕೇಳಿದ ಮನುಷ್ಯ ಹೌಹಾರಿ, ಬಸವಳಿದು, ಹುಚ್ಚನಂತಾಗಿ ಎಲ್ಲಾಕಡೆ ಓಡುತ್ತಾ ಎದುರಿಗೆ ಸಿಕ್ಕವರಿಗೆಲ್ಲಾ "ನನ್ನ ಹೆಂಡತಿ ರಂಡೆಯಾದಳು" ಎಂದು ಹೇಳುತ್ತಾ ವ್ಯಥೆಪಡುತ್ತಿದ್ದ. ಒಬ್ಬ ಬುದ್ಧಿವಂತ "ಅಯ್ಯಾ ನೀನು ದನ ಇದಂತೆ ಇದ್ದೀಯೆ! ನಿನ್ನ ಹೆಂಡತಿ ಹೇಗೆ ವಿಧವೆ ಯಾಗುತ್ತಾಳೆ"? ಎಂದ. ಆಗ ಅವನಿಗೆ ತನ್ನ ಅಸ್ತಿತ್ವದ ಬಗ್ಗೆ ನಂಬಿಗೆ ಬಂತು. ಹೀಗೆ ತನ್ನ ಇರುವಿಕೆಯನ್ನು ಯಾರೂ ಒಪ್ಪಿಕೊಳ್ಳದೆ ಇರಲಾರರು.

ಇಷ್ಟು ಸ್ಪಷ್ಟವಾಗಿದ್ದರೂ ದೇಹವೇ ತಾನೆಂದು– ಪ್ರಪಂಚವೇ ಸತ್ಯವೆಂದು ವ್ಯವಹಾರ ಮಡುತ್ತಾರೆ. ಇದೆಲ್ಲಕ್ಕೂ ಅಧ್ಯಾಸವೇ ಕಾರಣ.

**ಪ್ರ : 104. ಅಧ್ಯಾಸವೆಂದರೇನು ?**

ಉ : ಅಧಿ=ಮೇಲೆ, ಅಸ್=ಒಗೆ. ಒಂದರ ಮೇಲೆ ಮತ್ತೊಂದನ್ನು ಹೇರು, ಅಥವ ಒಂದು ವಸ್ತುವನ್ನು ಮತ್ತೊಂದು ವಸ್ತುವೆಂದು ಕಲ್ಪಿಸು ಎಂದು ಅರ್ಥ. ಅಧ್ಯಾಸವೆಂಬಪದಕ್ಕೆ ೧) ಮಿಥ್ಯಾಜ್ಞಾನ, ಅಯ

ತಾರ್ಥಾನುಭವ ೨) ಅದಲ್ಲದ್ದನ್ನು ಅದೆಂದು ತಿಳಿ ಎಂದು ಅರ್ಥ. ಶ್ರೀ ಶಂಕರ ಭಗವತ್ಪಾದರು ಬ್ರಹ್ಮಸೂತ್ರ ಭಾಷ್ಯದ ಪ್ರಾರಂಭದಲ್ಲಿ "ಅತಸ್ಮಿನ್ ತದ್ಬುದ್ಧಿಃ" ಅಥವಾ "ಸ್ಮೃತಿರೂಪಃ ಪರತ್ರಪೂರ್ವ ದೃಷ್ಟಾವಭಾಸಃ" ಒಂದು ವಸ್ತುವನ್ನು ಬೇರೊಂದು ವಸ್ತುವೆಂದು ತಿಳಿಯುವುದು ಎಂದು ವಿವರಣೆ ಮಾಡಿದ್ದಾರೆ. ಅಧ್ಯಾರೋಪವೆಂದರೂ ಅಧ್ಯಾಸವೆಂದರೂ ಒಂದೆ. ಆತ್ಮಾನಾತ್ಮಗಳ ಅಧ್ಯಾಸವೇ ಎಲ್ಲಾ ಸಂಸಾರದ ಮೂಲ.

**ಪ್ರ : 105 ಈ ಅಧ್ಯಾಸವು ಹೇಗೆ ಆಗುತ್ತದೆ ?**

ಉ : ಒಂದು ವಸ್ತುವಿನಲ್ಲಿ ಮತ್ತೊಂದು ವಸ್ತುವನ್ನು ಕಾಣುವುದು ಅಧ್ಯಾಸ. ಭಿನ್ನ ಭಿನ್ನ ಧರ್ಮದ ಎರಡು ವಸ್ತುಗಳಿಲ್ಲದೆ ಈ ಅಧ್ಯಾಸವು ಆಗಲಾರದು. ಕೊಡವನ್ನು ನೋಡುವವನು ಕೊಡವೆಂಬ ವಸ್ತುವಿನಿಂದಲೂ, ಕೊಡದ ಆಕಾರವನ್ನು ಹೊಂದುವ ಅಂತಃಕರಣದಿಂದಲೂ ಬೇರೆಯಾಗಿಯೇ ಇರುವಂತೆ, ಸಾಕ್ಷಿಯಾದ ಆತ್ಮನು "ನಾನು" ಎಂಬುದರಿಂದ ಬೋಧ್ಯವಾಗುವ ಸುಖ ದುಃಖಗಳಿಗಾಧಾರವಾದ ಅಂತಃಕರಣದಿಂದಲೂ. "ನಾನು" ಎಂಬ ಅಂತಃಕರಣ ವೃತ್ತಿಯಿಂದಲೂ ಬೇರೆಯಾಗಿಯೇ ಇರುತ್ತಾನೆ.

ಇಲ್ಲಿ ಆತ್ಮನು ಸ್ವಯಂ ಪ್ರಕಾಶನಾದುದರಿಂದ ಸ್ವತಂತ್ರನಾಗಿದ್ದಾನೆ. ಅಂತಃಕರಣವು ಅನಾತ್ಮವು. ಈ ಅನಾತ್ಮವಾದ ಅಂತಃಕರಣಾದಿಗಳು ಪರಪ್ರಕಾಶವಾದುದರಿಂದ ತಮ್ಮ ಪ್ರಕಟಣೆಗಾಗಿ ಮತ್ತೊಂದು ಪ್ರಕಾಶವಸ್ತುವನ್ನೇ ಅವಲಂಬಿಸಬೇಕಾಗುತ್ತದೆ. ಒಂದು ಸ್ವಯಂ ಪ್ರಕಾಶ, ಮತ್ತೊಂದು ಪರಪ್ರಕಾಶ. ಹೀಗೆ ತೀರಾ ವಿರುದ್ಧ ಸ್ವಭಾವವುಳ್ಳ ಎರಡು ಪದಾರ್ಥಗಳ ಸಂಬಂಧವನ್ನೇ ಅಧ್ಯಾಸವೆಂದು ಕರೆಯುತ್ತಾರೆ.

**ಉದಾ ೧ :–** ಹಗ್ಗದ ಮೇಲೆ ಸರ್ಪದ ಅಧ್ಯಾಸವೂ, ಸಿಂಪಿಯ ಮೇಲೆ ಬೆಳ್ಳಿಯ ಅಧ್ಯಾಸವೂ ಆಗಿರುವುದೂ ಹೀಗೆಯೇ. ಆತ್ಮಾನಾತ್ಮಗಳ ಪರಸ್ಪರ ಅಧ್ಯಾಸವೂ ಹೀಗೆಯೇ ಅಜ್ಞಾನದಿಂದಲೇ ಆಗಿದೆ. ಅಂದರೆ ಒಂದನ್ನು ಮತ್ತೊಂದರಂತೆ ನೋಡುತ್ತೇವೆ.

**ಉದಾ ೨. –:** ಚಂದ್ರನು ಚಲಿಸದಿದ್ದರೂ ಅಜ್ಞಾನದಿಂದ ಮೋಡಗಳ ಚಲನೆಯನ್ನೇ ಚಂದ್ರನಲ್ಲಿ ಕಲ್ಪಿಸುತ್ತೇವೆ.

ಉದಾ ೩ :– ರೈಲು, ಬಸ್ಸುಗಳಲ್ಲಿ ಪ್ರಯಾಣ ಮಾಡುವವನೊಬ್ಬ ತಾನು ಹತ್ತಿಕೊಂಡಿರುವ ರೈಲಿನ ಚಲನೆಯನ್ನು ಹೊರಗಿರುವ ಗಿಡ, ಮರ, ಮನೆ ಗುಡ್ಡ ಬೆಟ್ಟಗಳಲ್ಲಿ ಕಲ್ಪಿಸಿ ಗಿಡ, ಮರಗಳೇ ಚಲಸುತ್ತವೆನ್ನುತ್ತಾನೆ.

ಹಾಗೆಯೇ ಸುಖ ದುಃಖಾದಿ ಬುದ್ಧಿಯ ಧರ್ಮವನ್ನು ಅಜ್ಞಾನದಿಂದ ಆತ್ಮನ ಮೇಲೆ ಹೇರಿ "ನನಗೇ ಸುಖ,ನನಗೇ ದುಃಖ"ವೆಂದು ಕಲ್ಪಿಸಿದ್ದೇವೆ. ಕಾಯ್ದ ಕಬ್ಬಿಣದ ಸುಡುವ ಗುಣವನ್ನು ಬೆಂಕಿಯ ಮೇಲೆ ಹಾಕದೆ ಕಬ್ಬಿಣದ ಮೇಲೆ ಹೇರಿ ಕಬ್ಬಿಣವೇ ಸುಡುತ್ತದೆಂದು ತಿಳಿಯುತ್ತೇವೆ. ಹಾಗೆಯೇ ಆತ್ಮನ ಚೈತನ್ಯ ರೂಪವನ್ನು ಬುದ್ಧಿಯ ಮೇಲೂ, ಬುದ್ಧಿಯ ಸುಖ ದುಃಖಾದಿ ಧರ್ಮಗಳನ್ನು ಆತ್ಮನ ಮೇಲೂ ಹೇರಿದ್ದೇವೆ. ಹೀಗೆ ಒಂದರ ಧರ್ಮವನ್ನು ಮತ್ತೊಂದರ ಮೇಲೆ ಹೇರುವುದರಿಂದ ಪರಸ್ಪರ ಅಧ್ಯಾಸವಾಗುವುದು. ಇದೇ ಎಲ್ಲಾ ಅನರ್ಥಗಳಿಗೆ ಬೇರಾದ ಅಜ್ಞಾನವು. ಪ್ರತ್ಯಕ್ಷಾದಿ ಪ್ರಮಾಣಗಳಿಗೆ ಸಿಕ್ಕುವಂತಹ ಆತ್ಮಾನಾತ್ಮ ವಿವೇಕವೂ ಸಹ ಈ ಅಧ್ಯಾಸ ಅಥವಾ ಅಜ್ಞಾನದ ಆಶ್ರಯದಲ್ಲಿಯೇ ಬದುಕಿಕೊಂಡಿದೆ. ಅಂದರೆ ಆತ್ಮಾನಾತ್ಮ ವಿಚಾರವೂ ಸಹ ಅಜ್ಞಾನದ ದೃಷ್ಟಿಯಿಂದಲೇ ಹೇಳಲ್ಪಡುತ್ತದೆ. ಆತ್ಮ–ಅನಾತ್ಮ ಎಂಬ ಎರಡು ವಸ್ತುಗಳಿವೆ; ಅವು ಬೇರೆ ಬೇರೆಯಾಗಿವೆ; ಆತ್ಮ ದೃಕ್, ಅನಾತ್ಮ ದೃಶ್ಯ; ಎಂದು ತಿಳಿಯುವವನೂ ಸಹ ಇನ್ನೂ ಅಜ್ಞಾನಾವಸ್ಥೆಯಲ್ಲಿಯೇ ಇರುವನೆಂದು ತಿಳಿಯಬೇಕು. ಪಾರಮಾರ್ಥ ದೃಷ್ಟಿಯಿಂದ ಆತ್ಮ ತತ್ತ್ವ ಒಂದೇ ಇರುವುದು. ಅದಕ್ಕಿಂತ ಬೇರೆಯಾದುದಕ್ಕೆ ಇರುವಿಕೆಯೇ ಇಲ್ಲ.

**ಪ್ರ : 106. ಈ ಅನರ್ಥಕ್ಕೆ ಅಂದರೆ ಈ ದುಃಖ ರೂಪವಾದ ಸಂಸಾರಕ್ಕೆ ಅಧ್ಯಾಸವೇ ಮೂಲವು; ಈ ಅಧ್ಯಾಸಕ್ಕೆ ಅಜ್ಞಾನವೇ ಮೂಲವು. ಇಂತಹ ಅನರ್ಥವನ್ನುಂಟುಮಾಡುವ ಅಜ್ಞಾನವು ನಾಶವಾಗುವುದು ಹೇಗೆ ?**

ಉ : ದುಃಖ ರೂಪವಾದ ವಿಚಿತ್ರವಾದ ಈ ಸಂಸಾರವೆಂಬ ವೃಕ್ಷಕ್ಕೆ ಅನಾದಿಯಾದ ಅಜ್ಞಾನವೇ ಮೂಲ; ತತ್ತ್ವಜ್ಞಾನದಿಂದಲೇ ಅದರ ನಾಶವು.

**ಪ್ರ : 107. ತತ್ವಜ್ಞಾನದಿಂದಲೇ ಅಜ್ಞಾನವು ನಾಶವಾಗುವುದೆಂಬುದು ಹೇಗೆ ?**

ಉ : ಸಾಮಾನ್ಯ ಜನರಿಂದ ಹಿಡಿದು ಪಂಡಿತರವರೆಗೂ ಸರ್ವರ ಅಭಿಪ್ರಾಯದಂತೆ "ಜ್ಞಾನದಿಂದ ಅಜ್ಞಾನವು ನಾಶವಾಗುತ್ತದೆ" ಎಂಬ ಮಾತಿನ ಅನುಭವ ಇರುತ್ತದೆ. ಆದುದರಿಂದ ಜ್ಞಾನದಿಂದಲೇ ಅಜ್ಞಾನದ ನಾಶವು.

ಉದಾ : ಹಗ್ಗದ ಅಜ್ಞಾನದಿಂದ ಸರ್ಪವು ತೋರುತ್ತದೆ. ಹಗ್ಗದ ಅಜ್ಞಾನದಿಂದ ಭಾಸವಾದ ಸರ್ಪವು ಹಗ್ಗದ ಜ್ಞಾನವಾದ ಕೂಡಲೇ ನಾಶವಾಗುತ್ತದೆ. ಹಾಗೆಯೇ ಆತ್ಮನ ಅಜ್ಞಾನದಿಂದ ಈ ದೇಹಾದಿ ಪ್ರಪಂಚವು ಭಾಸವಾಗುತ್ತದೆ. ಆತ್ಮಜ್ಞಾನವಾದಕೂಡಲೇ ಕಾರಣವಾದ ಅಜ್ಞಾನ ಸಹಿತವಾದ ದೇಹಾದಿ ಸಂಸಾರವು ನಾಶವಾಗುತ್ತವೆ.

**ಪ್ರ : 108. ಈ ಆತ್ಮಜ್ಞಾನವು ಹೇಗೆ ಆಗುತ್ತದೆ ?**

ಉ : ಮಹಾವಾಕ್ಯವು ಶ್ರೋತೃವಿನ ಶ್ರೋತ್ರಕ್ಕೆ ಸಂಬಂಧಪಟ್ಟ ಕೂಡಲೇ ಈ ಆತ್ಮಜ್ಞಾನವು ಆಗುತ್ತದೆ.

**ಪ್ರ : 109. ಹಾಗಾದರೆ ಮಹಾ ವಾಕ್ಯವು ಆತ್ಮನನ್ನು ಸಾಕ್ಷಾತ್ಕರಿಸುವುದರಿಂದ ಅದು ಒಂದು ಪ್ರಮಾಣವಾಗಲಿಲ್ಲವೆ ?**

ಉ : ಹೌದು ! ಮಹಾವಾಕ್ಯವೂ ಒಂದು ಪ್ರಮಾಣವೇ. ವೇದ ಪ್ರಮಾಣದಿಂದಲೇ ನಮಗೆ ಆತ್ಮಜ್ಞಾನವಾಗುವುದು.

**ಪ್ರ : 110. ಆತ್ಮ ಜ್ಞಾನವು ವೇದ ಪ್ರಮಾಣದಿಂದ ಲಭಿಸುವುದಾದರೆ ಆತ್ಮನು ಪ್ರಮಾಣಗಮ್ಯನೆಂದಾಗಲಿಲ್ಲವೆ ? ತಾವು ಈ ಹಿಂದೆ ಆತ್ಮನು ಅಪ್ರಮೇಯನೆಂದು ಹೇಳಿದ್ದಿರಲ್ಲವೆ ?**

ಉ : ಹಾಗಲ್ಲ. ಪ್ರತ್ಯಕ್ಷಾದಿ ಪ್ರಮಾಣಗಳು ನಮಗೆ ಮೊದಲು ಗೊತ್ತಿರದಿದ್ದ ಹೊಸ ಜ್ಞಾನವನ್ನು ಮಾಡಿಕೊಡುತ್ತವೆ. ಆತ್ಮಜ್ಞಾನವಾದರೋ ಹೀಗಲ್ಲ. ಆತ್ಮನು ಹೊಸದಾಗಿ ತಿಳಿದುಕೊಳ್ಳುವ ಯಾವ ಲೌಕಿಕ ವಸ್ತುಗಳಂತೆಯೂ ಇರುವುದಿಲ್ಲ. ವೇದ ಪ್ರಮಾಣದಿಂದ ನಮಗೆ ಆತ್ಮ ಜ್ಞಾನವಾಗುತ್ತದೆ ಎಂದರೆ ಆತ್ಮನ ಬಗ್ಗೆ ನಮಗೆ ಗೊತ್ತಿರದಿದ್ದ ಹೊಸ

ಜ್ಞಾನವನ್ನು ಆ ಮಹಾವಾಕ್ಯಗಳು ಮಾಡಿಕೊಡುತ್ತವೆಂದು ತಿಳಿಯ ಬಾರದು. ಆತ್ಮನು ಚೈತನ್ಯ ಸ್ವರೂಪನಾಗಿರುವುದರಿಂದ ಸ್ವತಃ ಸಿದ್ಧನೂ ಸ್ವಯಂ ಪ್ರಕಾಶನೂ ಆಗಿದ್ದಾನೆ. ಆದುದರಿಂದ ಆತ್ಮನ ಬಗ್ಗೆ ಮೊದಲು ಗೊತ್ತಿರದಿದ್ದ ಹೊಸ ಜ್ಞಾನವು ವೇದಾಂತ ಪ್ರಮಾಣದಿಂದಾಗುವುದೆಂದು ಹೇಳುವುದು ಸರಿಯಾಗಲಾರದು. ಆದರೆ ಇಷ್ಟೆ. ವೇದಾಂತ ಪ್ರಮಾಣ ದಿಂದ ಹೊಸ ಜ್ಞಾನವಾಗದೆ ಮೊದಲಿನಿಂದ ಇದ್ದ ಅಜ್ಞಾನವು ಮಾತ್ರ ನಾಶ ವಾಗುತ್ತದೆ. ಅಜ್ಞಾನ ನಾಶವೇ ವೇದ ಪ್ರಮಾಣದ ಫಲವೇ ವಿನಃ ಹೊಸ ಜ್ಞಾನವನ್ನು ತಂದುಕೊಡುವುದಲ್ಲ. ಈ ಕಾರಣದಿಂದ ವೇದಾಂತ ಪ್ರಮಾಣ ದಿಂದ ಆತ್ಮಜ್ಞಾನವಾಗುತ್ತದೆಂದು ಹೇಳುವುದು ಉಪಚಾರಕ್ಕಾಗಿಯೇ ವಿನಃ ನಿಜವಾದುದಲ್ಲ.

**ಪ್ರ : 111. ಆತ್ಮನು ಸ್ವಯಂ ಪ್ರಕಾಶನು ಎಂಬುದನ್ನು ಹೇಗೆ ತಿಳಿಯಬೇಕು ?**

ಉ : ಜ್ಞಾತೃ, ಜ್ಞಾನ, ಜ್ಞೇಯ ಇವು ಮೂರೂ ಆತ್ಮನನ್ನು ಆತ್ಮ ನನ್ನಾಗಿ ತಿಳಿಯದಂತೆ ಮಾಡಿರುವ ಅಜ್ಞಾನ ಮಾತ್ರದಿಂದಲೇ ಜೀವಿಸುತ್ತವೆ. ಈ ಜ್ಞಾತೃ, ಜ್ಞಾನ, ಜ್ಞೇಯಗಳು ತಮ್ಮ ಅಸ್ತಿತ್ವವನ್ನು ತಾವೇ ಅರಿಯ ಲಾರವು; ಮತ್ತು ಅವುಗಳಲ್ಲಿ ಒಂದು ಮತ್ತೊಂದರ ಅಸ್ತಿತ್ವವನ್ನೂ ಅರಿಯ ಲಾರದು. ಆದುದರಿಂದ ಅವುಗಳ ಜ್ಞೇಯತ್ವಕ್ಕೆ ಬೇರೆ ಸಾಧನವು ಬೇಕೇ ಬೇಕು. ಅವು ಮೂರನ್ನು ತಿಳಿಯುವವನು ಆ ಮೂರಕ್ಕಿಂತಲೂ ಬೇರೆ ಯಾಗಿರಬೇಕು. ಅವನೇ ಆತ್ಮನು. ಆತ್ಮನು ಆ ತ್ರಿಪುಟಿಗಳಿಗಿಂತ ಬೇರೆ ಯಾಗಿರುವುದರಿಂದಲೇ ಆ ತ್ರಿಪುಟಿಗಳನ್ನೆಲ್ಲಾ ತಿಳಿಯುತ್ತಾನೆ ಮತ್ತು ಆತ್ಮನು ಆ ತ್ರಿಪುಟಿಗಳನ್ನು ತಿಳಿಯಬೇಕಾದರೆ ಆ ಜ್ಞಾತೃವನ್ನಾಗಲೀ, ಜ್ಞೇಯವನ್ನಾಗಲೀ, ಜ್ಞಾನವನ್ನಾಗಲೀ ಅವಲಂಬಿಸುವ ಅಗತ್ಯತೆಯೇ ಇರು ವುದಿಲ್ಲ. ಆದುದರಿಂದ ಆತ್ಮನು ಸ್ವಯಂ ಪ್ರಕಾಶನು.

**ಪ್ರ : 112. ಪ್ರಮಾತೃ (ಜ್ಞಾತೃ) ಎಂದರೆ ಯಾರು ?**

ಉ : ತಿಳಿಯಲ್ಪಡುವ (ಜ್ಞೇಯ ಅಥವಾ ಪ್ರಮೇಯ) ವಸ್ತು ಜಾಲ ವೆಲ್ಲಾ ಹೊರಗೆ ಇರುತ್ತದೆ ಮತ್ತು ಯಾವುದಾದರೂ ಒಂದೇ ಆಕಾರವನ್ನು

ಹೊಂದಿರುತ್ತದೆ ಆ ಪ್ರಮೇಯದ ಗ್ರಹಣ ಅಥವ ತಿಳುವಳಿಕೆಯು ಒಂದು ಮನೋ ವ್ಯಾಪಾರ ಆ ಮನೋ ವ್ಯಾಪಾರವು ಎಷ್ಟೋ ರೂಪಗಳಿಂದ ಪ್ರಕಟವಾಗುತ್ತದೆ ಒಂದು ಸಾರಿ ಅದು "ನಿಶ್ಚಿತ ಜ್ಞಾನ" ವೆಂದೂ, ಇನ್ನೊಂದು ಸಾರಿ ಅದು "ಸಂಶಯಯುಕ್ತ ಜ್ಞಾನ"ವಂದೂ ಮತ್ತೊಂದು ಸಾರಿ "ಕೇವಲ ಸ್ಮರಣೆ" ಎಂದರೆ ನೆನಪೆಂದೂ ಪ್ರಕಟವಾಗುತ್ತದೆ ಕೊಡವನ್ನು ನೋಡಿದೆ- "ಇದು ಕೊಡವೇ ಆಗಿದೆ"ಎಂದು ತಿಳಿಯುವುದು ಮನೋವ್ಯಾಪಾರದ ನಿಶ್ಚಿತ ಜ್ಞಾನ (೨) "ಎದುರಿಗೆ ಕಾಣುವುದು ಮೋಟು ಮರವೋ ಅಥವಾ ಮನುಷ್ಯನೋ"ಎಂದು ಒಂದೊಂದು ಸಾರಿ ಮನಸ್ಸು ಸಂಶಯ ಪಡುತ್ತದೆ ಇದಕ್ಕೆ ಸಂಶಯ ಜ್ಞಾನವೆಂದೂ ಕರೆಯುತ್ತಾರೆ ಹಿಂದೆ ಒಂದು ಸಾರಿ ಭಯಂಕರವಾದ ಹುಲಿಯನ್ನು ನೋಡಿ, ಹೆದರಿ ಮರ ಹತ್ತಿದ್ದ ಮನುಷ್ಯನು ಪುನಃ ಅದರ ಸ್ಮರಣೆ ಮಾಡಿಕೊಳ್ಳುತ್ತಾನೆ ಇದೇ ಮನೋವ್ಯಾಪಾರದ ಸ್ಮರಣ ಜ್ಞಾನವು. ಈ ರೀತಿ ಇರುವ ನಿಶ್ಚಿತಜ್ಞಾನ, ಸಂಶಯ ಜ್ಞಾನ, ಸ್ಮರಣ ಜ್ಞಾನ' ಈ ಮೂರರೂ ಮನೋ ವ್ಯಾಪಾರಗಳಲ್ಲಿಯೂ ಅಹಂಕಾರವು ಮಾತ್ರ ಇದ್ದೇ ಇರುತ್ತದೆ ಮತ್ತು ಆ ಮೂರನ್ನೂ ಅದು ಹಿಂಬಾಲಿಸುತ್ತದೆ. ಅಂದರೆ ಆ ಸಂಶಯಾದಿ ಜ್ಞಾನಗಳೆಲ್ಲಾ "ನನ್ನ" ವೆಂದು ಅಭಿಮಾನ ಪಡುತ್ತದೆ ಅದೇ ಪ್ರಮಾತೃವು ಅಥವಾ ಜ್ಞಾತೃವು

**ಪ್ರ : 113 ಈ ಮೂರರೂ ಜ್ಞಾನಗಳಲ್ಲಿ ಆತ್ಮನ ಸಂಬಂಧ ವೇನು ?**

ಉ . ಆತ್ಮನಾದರೂ ಈ ಮೂರರೂ ಜ್ಞಾನಗಳ ಆಚೆ ಇದ್ದು, ಈ ಮೂರಕ್ಕೂ ಸಾಕ್ಷಿಯಾಗಿ,ಆ ಮೂರನ್ನೂ ಹಿಂಬಾಲಿಸುವ ಅಹಂಕಾರ ಅಥವ ಪ್ರಮಾತೃವಿನ ಆಗು ಹೋಗುಗಳನ್ನು ತಿಳಿಯುತ್ತಾ,ನಿತ್ಯನಾಗಿ ಇರುತ್ತಾನೆ. ಆದುದರಿಂದ ಆತ್ಮನಿಗೆ ಈ ಸಂಸಾರದ ಸಂಬಂಧವೇ ಇಲ್ಲ.

**ಪ್ರ : 113. ಪ್ರಮಾತೃ, ಪ್ರಮಾಣ, ಪ್ರಮೇಯಗಳ ಹುಟ್ಟು ಸಾವುಗಳನ್ನು ನೋಡುವುದಕ್ಕೆ ಸಾಕ್ಷೀ ಚೈತನ್ಯವನ್ನು ಒಪ್ಪಲೇ ಬೇಕೆಂದು ನೀವು ಹೇಳಿದಿರಿ. ಆದರೆ ಆ ತ್ರಿಪುಟಿಗಳು ತಮ್ಮ ಹುಟ್ಟು ಸಾವುಗಳನ್ನು ತಾವೇ ಅರಿಯುತ್ತವೆಂದು ಏಕೆ ತಿಳಿಯಬಾರದು ?**

**ಆ ತ್ರಿಪುಟಿಗಳು ತಮ್ಮ ಹುಟ್ಟು ಸಾವುಗಳನ್ನು ತಾವೇ ಅರಿಯುವು ದಾದರೆ ಸಾಕ್ಷೀ ಚೈತನ್ಯದ ಅವಶ್ಯಕತೆಯೇ ಇಲ್ಲವಲ್ಲ !!**

ಉ : ಅದು ಸರಿಯಲ್ಲ. ಅವು ತಮ್ಮ ಆಗು ಹೋಗುಗಳನ್ನು ತಾವೇ ತಿಳಿಯಲಾರವು. ಏಕೆಂದರೆ ಯಾವುದು ಮತ್ತೊಂದರ ಆಗು ಹೋಗು ಗಳನ್ನು ತಿಳಿಯ ಬಲ್ಲದೋ ಅದು, ಆ ವಸ್ತುವು ಹುಟ್ಟುವುದಕ್ಕಿಂತ ಮುಂಚೆ ಮತ್ತು ಆ ವಸ್ತುವು ಸತ್ತ ಮೇಲೂ ಇರಬೇಕು. ಈ ತ್ರಿಪುಟಿಗಳು ತಮ್ಮ ಹುಟ್ಟು ಸಾವುಗಳನ್ನು ತಾವೇ ನೋಡಿಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ ತಾನು ಹುಟ್ಟುವುದಕ್ಕಿಂತ ಮುಂಚೆ ಅದು ಇಲ್ಲದೆ ಇರುವುದರಿಂದ ತನ್ನ ಹುಟ್ಟನ್ನು ತಾನೇ ತಿಳಿಯಲಾರದು. ಮತ್ತು ತಾನು ನಾಶವಾದ ಮೇಲೂ ತಾನು ಇಲ್ಲದೆ ಹೋಗುವುದರಿಂದ ತನ್ನ ನಾಶವನ್ನು ಅದು ತಾನೇ ತಿಳಿಯ ಲಾರದು. ಈ ಕಾರಣದಿಂದ ಆ ತ್ರಿಪುಟಿಗಳಲ್ಲಿ ಪ್ರತಿಯೊಂದು, ತಾನು ಹುಟ್ಟಿ ದಿರುವಾಗ ಉಳಿದವುಗಳ ಹುಟ್ಟನ್ನೂ, ತಾನು ನಾಶವಾದಾಗ ಉಳಿದವುಗಳ ನಾಶವನ್ನೂ ಅರಿಯಲಾರದು. ಆದುದರಿಂದ ಈ ತ್ರಿಪುಟಿಗಳ ಆಗು ಹೋಗು ಗಳನ್ನು ತಿಳಿಯಲು ಅವು ಹುಟ್ಟುವುದಕ್ಕೆ ಮುಂಚೆ, ಅವು ಸತ್ತನಂತರ ಇರುವ ಸಾಕ್ಷೀ ಚೈತನ್ಯವನ್ನು ನಾವು ಪರಿಗ್ರಹಿಸಲೇ ಬೇಕು.

**ಪ್ರ : 114. ಸಾಕ್ಷೀ ಚೇತನದ ಇರುವಿಕೆಯನ್ನು ಉದಾ ಹರಣೆ ಸಹಿತ ಸ್ಪಷ್ಟಪಡಿಸಿರಿ.**

ಉ : ಗಾಢ ನಿದ್ರೆಯಲ್ಲಿ ಈ ಪ್ರಮಾತೃ, ಪ್ರಮಾಣ, ಪ್ರಮೇಯ ಗಳಾವೂ ಇರುವುದಿಲ್ಲವೆಂಬುದಂತೂ ಸರ್ವರಿಗೂ ಸಮ್ಮತವಾದ ಮಾತೇ ಆಗಿದೆ. ಎಂದ ಮೇಲೆ ಗಾಢ ನಿದ್ರೆಯಲ್ಲಿ ಆ ಮೂರರ ನಾಶವನ್ನು ನಿರ್ವಿ ಕಾರಿಯಾಗಿ ನೋಡಲು ಶುದ್ಧ ಚೇತನ ರೂಪ ಸಾಕ್ಷಿಯು ಇದ್ದೇ ಇರುವ ನೆಂದು ಒಪ್ಪಲೇ ಬೇಕಾಗುವುದು. ಆದುದರಿಂದ ಅವೆಲ್ಲವುಗಳ ಆಗು ಹೋಗುಗಳನ್ನು ನೋಡುವ, ಅವೆಲ್ಲವುಗಳಿಗಿಂತ ಬೇರೆಯಾಗಿರುವ ಸಾಕ್ಷೀ ಆತ್ಮನು ಇದ್ದೇ ಇರುವನೆಂಬುದು ಸಿದ್ಧವಾಗುತ್ತದೆ.

**ಪೂ. ಪ. : ಈ ತ್ರಿಪುಟಿಗಳಿಗೆ ಬೇರೆಯಾದ ಸಾಕ್ಷೀ ಆತ್ಮನು ಇರುವನೆಂದು ಸಿದ್ಧವಾಯಿತು. ಈ ಸಾಕ್ಷಿಯನ್ನು ನೋಡುವ**

ಮತ್ತೊಬ್ಬ ಸಾಕ್ಷೀ ಇರಬೇಕಲ್ಲವೆ. ಆ ರೀತಿ ಸಾಕ್ಷಿ ಇಲ್ಲದೆ ಈ ಸಾಕ್ಷಿ ಸಿದ್ಧವಾಗುವುದು ಹೇಗೆ ?

ಉ : ಅದು ತಪ್ಪು. ಸಾಕ್ಷಿಯನ್ನು ನೋಡುವ ಮತ್ತೊಬ್ಬ ಸಾಕ್ಷಿ ಇಲ್ಲವೇ ಇಲ್ಲ. ಮತ್ತೊಂದರ ಹುಟ್ಟು ಸಾವುಗಳನ್ನು ಅವು ಹುಟ್ಟುವುದಕ್ಕೆ ಮುಂಚೆ ಇದ್ದು–ಅವು ಸತ್ತಮೇಲೆ ಇದ್ದು ನೋಡುವವನನ್ನೇ ಸಾಕ್ಷಿ ಎನ್ನುತ್ತಾರೆ. ಒಂದು ಪಕ್ಷ ಸಾಕ್ಷಿಯು ತನ್ನ ಆಗು ಹೋಗುಗಳನ್ನು ತಾನೇ ನೋಡಿಕೊಳ್ಳುತ್ತಾನೆಂದರೆ ಆತ್ಮಾಶ್ರಯ ದೋಷಬರುತ್ತದೆ. ಯಾವುದೂ ತನಗೆ ತಾನೇ ಕರ್ತೃ, ತನಗೆ ತಾನೇ ಕರ್ಮವಾಗಲಾರದು.

**ಉದಾ :-** ಒಬ್ಬ ನದಿದಾಟಿ ಈಚೆ ಬಂದ. ಅವನನ್ನು ಮತ್ತೊಬ್ಬ ಕೇಳುತ್ತಾನೆ, ನದಿಯನ್ನು ಹೇಗೆ ದಾಟಿದೆ ? ನಾನು ನನ್ನ ಹೆಗಲ ಮೇಲೆ ಕುಳಿತುಕೊಂಡು ದಾಟಿದೆ ಎಂದ, ಇದು ಸಾಧ್ಯವೇ ? ಇಲ್ಲ ಹಾಗೆಯೇ ಸಾಕ್ಷಿಯು ತನ್ನ ಹುಟ್ಟು ಸಾವುಗಳನ್ನು ತಾನೇ ನೋಡಿಕೊಳ್ಳುತ್ತಾನೆನ್ನುವುದೂ ಅಸಮಂಜಸ.

ಒಂದು ಪಕ್ಷ ಈ ಸಾಕ್ಷಿಯ ಆಗು ಹೋಗುಗಳನ್ನು ಮತ್ತೊಬ್ಬ ಸಾಕ್ಷಿಯು ನೋಡುತ್ತಾನೆ ಎಂದರೂ ಅದೂ ಸಮಂಜಸವಾಗುವುದಿಲ್ಲ. ಏಕೆಂದರೆ ಆ ಸಾಕ್ಷಿಯ ಆಗು ಹೋಗುಗಳನ್ನು ನೋಡುವವರಾರು ? ಇಲ್ಲವೆ ಈ ಸಾಕ್ಷಿಯ ಆಗು ಹೋಗುಗಳನ್ನು ಆ ಸಾಕ್ಷಿಯೂ, ಆ ಸಾಕ್ಷಿಯ ಆಗು ಹೋಗುಗಳನ್ನು ಈ ಸಾಕ್ಷಿಯೂ ನೋಡುತ್ತಾನೆಂದರೆ ಅನ್ಯೋನ್ಯಾಶ್ರಯ ದೋಷಬರುತ್ತದೆ.

**ಉದಾ :-** ನದಿದಾಟಿದ ಇಬ್ಬರನ್ನು ಹೇಗೆ ದಾಟಿದಿರಿ ? ಎಂದು ಒಬ್ಬ ಪ್ರಶ್ನಿಸಿದ. "ಅವನ ಹೆಗಲ ಮೇಲೆ ನಾನು, ನನ್ನ ಹೆಗಲ ಮೇಲೆ ಅವನು ಒಬ್ಬರನ್ನೊಬ್ಬರು ಹೊತ್ತುಕೊಂಡು ನದಿ ದಾಟಿ ಈಚೆ ಬಂದೆವು" ಎಂದರು. ಇದು ಸಮಂಜಸವೇ ! ಅಲ್ಲ.

ಹಾಗಲ್ಲ, ಒಂದನೇ ಸಾಕ್ಷಿಯ ಹುಟ್ಟು ಸಾವನ್ನು ಎರಡನೇ ಸಾಕ್ಷಿಯು ನೋಡುತ್ತಾನೆ. ಎರಡನೇ ಸಾಕ್ಷಿಯ ಹುಟ್ಟು ಸಾವನ್ನು ಮೂರನೇ ಸಾಕ್ಷಿಯು ನೊಡುತ್ತಾನೆ, ಮೂರನೇ ಸಾಕ್ಷಿಯ ಹುಟ್ಟು ಸಾವನ್ನು ಒಂದನೇ ಸಾಕ್ಷಿ ನೋಡುತ್ತಾನೆಂದರೆ ? ಚಕ್ರಕಾಪತ್ತಿ ದೋಷಬರುತ್ತದೆ.

ಒಂದನೇ ಸಾಕ್ಷಿಯು ಹುಟ್ಟು ಸಾವನ್ನು ಎರಡನೇ ಸಾಕ್ಷಿಯೂ, ಎರಡನೇ ಸಾಕ್ಷಿಯು ಹುಟ್ಟು ಸಾವನ್ನು ಮೂರನೇ ಸಾಕ್ಷಿಯೂ, ಮೂರನೇ ಸಾಕ್ಷಿಯು ಹುಟ್ಟು ಸಾವನ್ನು ನಾಲ್ಕನೇ ಸಾಕ್ಷಿಯೂ, ಹೀಗೆ ಐದು-ಆರು ಇತ್ಯಾದಿ ಸಾಕ್ಷಿಗಳನ್ನು ಕಲ್ಪಿಸಿದರೆ ಇದನ್ನು ಅನವಸ್ಥಾದೋಷವೆನ್ನುತ್ತಾರೆ.

ಹೀಗೆ ಎಷ್ಟುವಿಧವಾಗಿ ನೋಡಿದರೂ ಸಾಕ್ಷಿಗೆ ಮತ್ತೊಬ್ಬ ಸಾಕ್ಷಿಯು ಕಲ್ಪನೆ ಮಾಡುವುದು ಸಮಂಜಸವಾಗಲಾರದು. ಆದುದರಿಂದ ಸಾಕ್ಷಿಯಾದ ಆತ್ಮನಿಗೆ ಬೇರೊಂದು ಕಾರಣ ಅವಶ್ಯಕತೆಯೇ ಇರುವುದಿಲ್ಲ. ವಿಕಾರರಹಿತನಾದ,ಸ್ವತಃ ಸಿದ್ಧನಾದ, ಸ್ವಯಂ ಪ್ರಕಾಶನಾದ ಸಾಕ್ಷಿ ಆತ್ಮನು ಜಡವಾದ ಬುದ್ಧಿಯಂತೆ, ತ್ರಿಪುಟಿಗಳಂತೆ ಮತ್ತೊಬ್ಬರಿಂದ ತನ್ನಸಿದ್ಧಿಯನ್ನು ಅಪೇಕ್ಷಿಸುವುದೇ ಇಲ್ಲ. ಬೇರೆ ವಸ್ತುಗಳು ತಮ್ಮ ಸಿದ್ಧಿಗೆ ಆತ್ಮನನ್ನೇ ಅವಲಂಬಿಸಿಕೊಂಡಿರುತ್ತವೆ. ಆತ್ಮನು ಮಾತ್ರ ನಿರಪೇಕ್ಷನಾಗಿದ್ದಾನೆ.

**ಸಾರಾಂಶ :** ಪ್ರಮಾತೃ, ಪ್ರಮಾಣ, ಪ್ರಮೇಯಗಳನ್ನೇ ಆತ್ಮನೆಂದು, ಆತ್ಮಾನಾತ್ಮಗಳ ಅಧ್ಯಾಸದಿಂದ ತಿಳಿದಿದ್ದೇವೆ. ಇದೇ ಅಜ್ಞಾನ. ಈ ಆತ್ಮಾನಾತ್ಮರ ಅಧ್ಯಾಸವನ್ನು ಅನ್ವಯ ವ್ಯತಿರೇಕ ತರ್ಕದಿಂದ ಆತ್ಮನನ್ನು ಅನಾತ್ಮದಿಂದ ಬಿಡಿಸಿ ಪ್ರಯತ್ನ ಪೂರ್ವಕವಾಗಿ ವಿಂಗಡಿಸಬೇಕು. ಈ ಜಗತ್ತು ಉತ್ಪತ್ತಿ, ಸ್ಥಿತಿ, ನಾಶಗಳೆಂಬ ವಿಕಾರವನ್ನು ಹೊಂದುತ್ತಿದ್ದರೂ, ಅವುಗಳನ್ನೆಲ್ಲಾ ವಿಕಾರ ಹೊಂದದೆ ಶುದ್ಧ ಚೈತನ್ಯ ರೂಪ ಸಾಕ್ಷಿಯಾಗಿ ನೋಡುತ್ತಿರುವವನೇ ಈ ಆತ್ಮನು. "ಈ ಆತ್ಮನೇ ನೀನು"ಎಂಬ ತತ್ತ್ವಮಸಿ ಮಹಾವಾಕ್ಯದ ಬೋಧದಿಂದ "ನಾನು ನಿಜವಾಗಿ ಶುದ್ಧ ಚೇತನ ಸ್ವರೂಪ ಪರಬ್ರಹ್ಮನೇ ಆಗಿದ್ದೇನೆಂದು'' ತಿಳಿಯಬೇಕು. ಈ ನಶ್ವರವಾದ ತ್ರಿಪುಟಿರೂಪ ಈ ಪ್ರಪಂಚವನ್ನು ನಾನೆಂದು ತಿಳಿಯಬಾರದು.

**ಪೂ. ಪ. :- 'ನಾನು' ಬುದ್ಧಿ ಮೊದಲಾದವುಗಳಲ್ಲವೆಂದೂ ಅವಿಕಾರಿಯಾದ ಶುದ್ಧ ಚೇತನ ಪರಬ್ರಹ್ಮವೇ "ನಾನೆಂದು" ತಿಳಿಯಬೇಕೆಂದು ನೀವು ಹೇಳಿದಿರಿ. ನಿಮ್ಮ ಮಾತಿನ ರೀತಿಯಂತೆ ಬುದ್ಧಿ ಮೊದಲಾದ ದ್ವೈತ ಪ್ರಪಂಚವು ಸತ್ಯವೆಂದೂ, ಆ ತ್ರಿಪುಟೀರೂಪ ಪ್ರಪಂಚಕ್ಕೆ ನಾನು ಭಿನ್ನನೆಂದೂ ತಿಳಿಯಬೇಕೆಂದು ನೀವು ಹೇಳಿದಂ**

**ತಾಯಿತು. ಆ ಕಾರಣದಿಂದ ನಿತ್ಯನಾದ ಆತ್ಮನೂ; ವಿಕಾರಿಯಾದ ಈ ಬುದ್ಧ್ಯಾದಿ ಪ್ರಪಂಚವೂ ಸಹ ನಿಜವಾಗಿ ಇರುವುವೆಂದೇ ಸಿದ್ಧವಾಯಿತು. ಎಂದ ಮೇಲೆ ಆತ್ಮನ ಅದ್ವೈತತ್ವಕ್ಕೆ ಭಂಗಬರಲಿಲ್ಲವೆ?**

ಉ : ಇದು ಸರಿಯಲ್ಲ. ವಿಕಾರವೆಂಬುದಾಗಲೀ, ವಿಕಾರ ಹೊಂದುವ ದ್ವೈತವೆಂಬುದಾಗಲೀ ಇರುವುದೇ ಇಲ್ಲ. ಅಜ್ಞಾನದಿಂದ ತೋರುವ ಈ ದ್ವೈತ ರೂಪ ಜಗತ್ತೆಲ್ಲಾ ಸ್ವತಃ ಸಿದ್ಧವಾದ ಆತ್ಮ ಚೈತನ್ಯದೊಳಗಿನ ಪ್ರತಿಬಿಂಬದಂತೆ ಇದ್ದು ಆತ್ಮನ ಮೇಲೆ ಅದು ಇಂದ್ರಜಾಲದಂತೆ ಮಾತ್ರ ತೋರುತ್ತಿರುತ್ತದೆ. ಇದು ಬರೀ ಆತ್ಮವಿಷಯಕವಾದ ಅಜ್ಞಾನದಿಂದ ಹೊರಟಿದ್ದು; ಮತ್ತು ಇದು ಕೇವಲ ಅವಿಚಾರದಿಂದ ಮಾತ್ರ ಸಿದ್ಧವಾಗುವಂತೆ ತೋರುತ್ತದೆ. ಭೇದವಿಲ್ಲದವಿನಃ ದ್ವೈತವು ಇರುವುದೇ ಇಲ್ಲ.

**ಉದಾ :–** ರಾಮ ಮತ್ತು ಭೀಮ ಎಂಬ ಎರಡು ಜನರಿದ್ದಾರೆ. ಅವರಿಬ್ಬರ ನಡುವೆ ಭೇದವಿದ್ದರೆ ಮಾತ್ರ ಅವರಿಬ್ಬರೂ ಬೇರೆ ಬೇರೆ ಎಂದು ತಿಳಿಯುತ್ತೇವೆ. ಇವರಿಬ್ಬರ ನಡುವೆ ಭೇದವಿರುವುದೆಂದು ಹೇಳಬೇಕಾದರೆ ರಾಮನಿಂದ ಭೀಮನೂ ಮತ್ತು ಭೀಮನಿಂದ ರಾಮನೂ ಬೇರೆಯಾಗಿರಬೇಕಾಗುವುದು ಇವರಿಬ್ಬರು ಹೀಗೆ ಬೇರೆಯಾಗಿರಲು ಇವರಿಬ್ಬರಲ್ಲಿ ಮೊದಲು ಒಬ್ಬ ಇದ್ದೇ ತೀರಬೇಕು. ಒಬ್ಬನು ಇದ್ದ ಹೊರತು ಮತ್ತೊಬ್ಬನು ಅವನಿಂದ ಬೇರೆಯಾಗಿರುವುದೇ ಶಕ್ಯವಿಲ್ಲ. ಎಂದರೆ ರಾಮನಿದ್ದರೆ ಮಾತ್ರ ಭೀಮನ ಸಿದ್ಧಿ; ಭೀಮನಿದ್ದರೆ ಮಾತ್ರ ರಾಮನ ಸಿದ್ಧಿ: ಹೀಗೆ ಒಬ್ಬನು ತನ್ನ ಸಿದ್ಧಿಗಾಗಿ ತನ್ನಿಂದ ಬೇರ್ಪಡಿಸುವಂತಹ ಮತ್ತೊಂದರ ಧರ್ಮಗಳನ್ನು ಅಪೇಕ್ಷಿಸುತ್ತಾನೆ; ಈ ರೀತಿ ಭೇದವಿರುದೆಂದು ಒಪ್ಪಿದರೆ ನಾವು ಅನ್ಯೋನ್ಯಾಶ್ರಯವೆಂಬ ದೋಷಕ್ಕೆ ಗುರಿಯಾಗ ಬೇಕಾಗುತ್ತದೆ. ಆದುದರಿಂದ ಭೇದವು ಇಲ್ಲವೇ ಇಲ್ಲ. ಆದುದರಿಂದ ಆತ್ಮನಲ್ಲಿ ಯಾವ ಭೇದವೂ ಇರುವುದಿಲ್ಲ.

**ಪ್ರ : 115. ಇನ್ನು ದ್ವೈತವು ತನಗೆ ತಾನೇ ಸ್ವತಃ ಸಿದ್ಧವಾಗುವುದೆಂದರೆ ಬರುವ ದೋಷವೇನು ?**

ಉ : ಜಗತ್ತಿನ ದ್ವೈತರೂಪವು ಜಡವಾಗಿರುವುದರಿಂದಲೂ, ಪರ ಪ್ರಕಾಶವಾದುದರಿಂದಲೂ ತನಗೆ ತಾನೇ ಸ್ವತಃಸಿದ್ಧವಾಗಲಾರದು. ಅಂದರೆ ತನ್ನನ್ನು ತಾನೇ ತಿಳಿಯಲಾರದು, ಅರ್ಥಾತ್ ದ್ವೈತವು ಸ್ವಯಂ ಸಿದ್ಧವಲ್ಲ.

**ಪ್ರ : 116. ದ್ವೈತವು ಸ್ವತಃ ಜಡವಾದುದರಿಂದ ತನ್ನನ್ನು ತಾನು ತಿಳಿಯಲಾರದು ಎಂದಿರಿ. ಆತ್ಮನೊಡನೆ ಒಂದಾಗಿ ತನ್ನನ್ನು ತಾನು ತಿಳಿದುಕೊಳ್ಳಬಹುದಲ್ಲ ! ಅದರಿಂದಲೇ ಅದು ಸ್ವತಃ ಸಿದ್ಧವಾಗಬಹುದಲ್ಲ !**

ಉ : ಅದೂ ಶಕ್ಯವಿಲ್ಲ. ಏಕೆಂದರೆ ಜಡರೂಪವಾದ ಜಗತ್ತು ಚಿದ್ರೂಪನಾದ ಆತ್ಮನೊಡನೆ ಯಾವುದೇ ರೀತಿಯಿಂದಲೂ ಒಂದಾಗಲಾರದು.

**ಪ್ರ : 117. ಆತ್ಮ ಮತ್ತು ಜಗತ್ತುಗಳು ಒಂದಾಗದೆ ಹೋದರೂ ಬೇರೆ ಬೇರೆಯಾಗಿಯೇ ಇದ್ದುಕೊಂಡು ದ್ವೈತವನ್ನು ಸಿದ್ಧಮಾಡಬಹುದಲ್ಲ !**

ಉ : ಅದೂ ಶಕ್ಯವಿಲ್ಲ. ಏಕೆಂದರೆ ಅವು ಪರಸ್ಪರ ವಿರುದ್ಧ ಧರ್ಮಗಳುಳ್ಳವುಗಳು. ಸಮಾನ ಧರ್ಮಗಳಾದ ಪದಾರ್ಥಗಳು ಒಂದಕ್ಕೊಂದು ಸಾಧಕಬಾಧಕಗಳಾಗಬಹುದು ಇವು ಸಮಾನ ಧರ್ಮಗಳಲ್ಲ. ಆದ್ದರಿಂದ ಅವೆರಡರ ನಡುವೆ ಸಂಯೋಗಸಂಬಂಧ, ಸಮವಾಯ ಸಂಬಂಧಗಳಾವೂ ಆಗುವುದು ಸಂಭವಿಸುವುದೇ ಇಲ್ಲ.

ಆದುದರಿಂದ ಆತ್ಮಾನಾತ್ಮಗಳ ನಡುವೆ ಯಾವುದೇ ತರಹದ ನಿಜವಾದ ಸಂಬಂಧವಾಗಲಾರದು. ಅನಾತ್ಮವೆಂಬುದೊಂದು ಇದ್ದರಲ್ಲವೇ ಆತ್ಮನೊಡನೆ ಸಂಬಂಧವಾಗುವುದು. ಅನಾತ್ಮವಾದರೋ ರಜ್ಜುವಿನಲ್ಲಿ ಕಂಡ ಸರ್ಪದಂತೆ, ಸಿಂಪಿಯಲ್ಲಿ ಕಂಡ ಬೆಳ್ಳಿಯಂತೆ ಇಲ್ಲವೇ ಇಲ್ಲ. ರಜ್ಜುವಿನಲ್ಲಿ ಸರ್ಪವನ್ನು ಕಲ್ಪಿಸಿದಂತೆ, ಮರು ಮರೀಚಿಕೆಯಲ್ಲಿ ಜಲವನ್ನು ಕಲ್ಪಿಸಿದಂತೆ ಆತ್ಮನಲ್ಲಿ ಅಜ್ಞಾನದಿಂದ ಅನಾತ್ಮವನ್ನು ಕಲ್ಪಿಸಿರುತ್ತೇವೆ. ಅಷ್ಟೇವಿನಃ ನಿಜವಾದ ಇರುವಿಕೆ ಅದಕ್ಕೆ ಇಲ್ಲವೇ ಇಲ್ಲ. ಆದುದರಿಂದ ಅವೆರಡರ ನಡುವೆ ಸಂಬಧವಿರುವುದೆಂದು ತಿಳಿಯುವುದೂ ಸಹ ಅಜ್ಞಾನದಿಂದಲೇ ಸರಿ. ಆದುದರಿಂದ ಪಾರಮಾರ್ಥ ದೃಷ್ಟಿಯಿಂದ ಅದ್ವೈತವೇ ಸರಿಯಾದುದೆಂದು ಸಿದ್ಧವಾಗುತ್ತದೆ.

ಈ ದ್ವೈತ ಪ್ರಪಂಚವು ಆತ್ಮನ ಸ್ವರೂಪವಲ್ಲೆಂದೂ, ಆತ್ಮನ ಗುಣಗಳಾದರೂ ಆಗಲಾರದೆಂದೂ ತೋರಿಸಿಕೊಟ್ಟಿದ್ದಾಯಿತು. ಆದುದರಿಂದ ಪಾರಮಾರ್ಥಿಕ ದೃಷ್ಟಿಯಿಂದ ಅವೆಲ್ಲಾ ಬರೀ ಕಾಲ್ಪನಿಕ ವಸ್ತುಗಳೆಂದೂ ಅವು ಶೂನ್ಯಕ್ಕೆ ಸಮಾನವೆಂದೂ ತಿಳಿಯಬೇಕಾಗುವುದು.

**ಪೂ. ಪ. : ದ್ವೈತ ಪ್ರಪಂಚವು ಸಾಕ್ಷಾತ್ತಾಗಿ ನಮ್ಮ ಪ್ರತ್ಯಕ್ಷ ಅನುಭವಕ್ಕೆ ಬರುತ್ತಿರುವಾಗ ಅದು ಶೂನ್ಯ ಸಮನೆಂಬುದು ಹೇಗೆ? ಅಂದರೆ ಯಾವ ನ್ಯಾಯ ಬಲದಿಂದ ಹೇಳುವಿರಿ ?**

ಉ : ದ್ವೈತ ಪ್ರಪಂಚವನ್ನು ಯಾರೂ, ಎಂದೂ ಸಾಕ್ಷತ್ತಾಗಿ ಅನುಭವಿಸಿಯೇ ಇಲ್ಲ. ಸ್ವಯಂ ಪ್ರಕಾಶನಾದ ಶುದ್ಧ,ಚಿದ್ರೂಪ ಆತ್ಮನನ್ನು ಮಾತ್ರ ನಾವು ಸಾಕ್ಷಾತ್ತಾಗಿ ಅನುಭವಿಸುತ್ತೇವೆ. ಚಿದ್ರೂಪ ಆತ್ಮನೇ ನಮ್ಮ ಪ್ರತ್ಯಕ್ಷ ಅನುಭವವಾಗಿರುತ್ತಾನೆ.

**ಪ್ರ : 118. ನಾವು ಚಿದ್ರೂಪ ಆತ್ಮನನ್ನೇ ಅಪರೋಕ್ಷವಾಗಿ ಸಾಕ್ಷಾತ್ತಾಗಿ ಅನುಭವಿಸುತ್ತಿದ್ದರೂ ಬುದ್ಧಿಯೂ ಬಾಹ್ಯ ವಸ್ತುಗಳೂ ಪ್ರತ್ಯಕ್ಷವಾಗಿ ನಮ್ಮ ಅನುಭವಕ್ಕೆ ಬರುವಂತೆ ತೋರಲು ಕಾರಣವೇನು ?**

ಉ : ವಿಕಾರ ರಹಿತನಾದ, ನಿತ್ಯನಾದ ಮತ್ತು ಸ್ವಯಂಪ್ರಕಾಶನಾದ ಆತ್ಮನು ನಮಗೆ ಅಪರೋಕ್ಷವಾಗಿದ್ದಾನಷ್ಟೆ. ಆದರೆ ಅಜ್ಞಾನದ ಮೂಲಕವಾದ ಅಧ್ಯಾಸದಿಂದ ನಾವು ಅಂತಃಕರಣ ವೃತ್ತಿಗಳನ್ನೆಲ್ಲಾ ಆತ್ಮನ ಮೇಲೆ ಹೇರಿರುವುದರಿಂದ ಆ ಅಂತಃಕರಣ ವೃತ್ತಿಗಳೂ ಸಹ ಆತ್ಮನಂತೆ ನಮಗೆ ಅಪರೋಕ್ಷವಾಗಿಯೇ ಭಾಸವಾಗುತ್ತಿರುತ್ತವೆ. ಇನ್ನು ಬಾಹ್ಯವಸ್ತುಗಳಂತೂ ಅಂತಃಕರಣ ವೃತ್ತಿಗಳಲ್ಲಿ ಪ್ರತಿ ಬಿಂಬಿತವಾಗಿರುವುದರಿಂದ ಎಂದರೆ ಅಂತಃಕರಣ ವೃತ್ತಿಗಳ ಮೂಲಕವೇ ನಮಗೆ ಆ ಬಾಹ್ಯ ವಸ್ತುಗಳ ಜ್ಞಾನವಾಗುವುದರಿಂದ ಆ ಬಾಹ್ಯ ವಸ್ತುಗಳೂ ಸಹ ಆ ಅಂತಃಕರಣ ವೃತ್ತಿಗಳಂತೆ ಅಪರೋಕ್ಷವಾಗಿರುವಂತೆಯೇ ತೋರುತ್ತಿರುತ್ತವೆ.

ಅಷ್ಟೇ ವಿನಃ ಯಾರೂ ಯಾವಾಗಲೂ ಅಂತಃಕರಣ ವೃತ್ತಿಗಳನ್ನೇ ಆಗಲಿ ಅಥವಾ ಬಾಹ್ಯ ವಸ್ತುಗಳನ್ನಾಗಲಿ ಸಾಕ್ಷಾತ್ತಾಗಿ ಅಪರೋಕ್ಷವಾಗಿ ಎಂದೂ ಅನುಭವಿಸಿಯೇ ಇಲ್ಲ.

ಆದುದರಿಂದ ಆತ್ಮನ ವಿಷಯವಾಗಿ ನಮಗೆ ಸರಿಯಾದ ತಿಳುವಳಿಕೆಯಾಗಿಲ್ಲವೆಂಬ ಕಾರಣದಿಂದಲೇ ನಾವು ಆತ್ಮನಿಗೆ ನಾನು,ನನ್ನದು ಎಂದೂ, ಇಚ್ಛೆ ಮತ್ತು ಪ್ರಯತ್ನಗಳೆಂಬುವು ಇರುವುವೆಂದೂ ಅಧ್ಯಾಸದ ಮೂಲಕವಾಗಿ ತಿಳಿಯುವುದರಿಂದ ಕರ್ತೃ, ಕರ್ಮ ಮತ್ತು ಅವುಗಳ ಫಲವೆಂಬ ರೂಪದಿಂದ ಭಾಸವಾಗುತ್ತಿರುವ ಈ ಸಂಸಾರವು ಅಪರೋಕ್ಷವಾಗಿ ಅನುಭವಕ್ಕೆ ಬಂದಂತಾಗುತ್ತದೆ.

**ಉ.ದಾ. :** ವಸ್ತುತಃ ರೂಪ ರಹಿತವಾದ ಆಕಾಶದೊಳಗೆ ಅಧ್ಯಾಸದಿಂದ ಧೂಳು, ಹೊಗೆ, ಮಂಜು, ಇಬ್ಬನಿ ಮತ್ತು ಕಪ್ಪು ಬಣ್ಣ ಮೊದಲಾದುವು ತೋರುವಂತೆ, ಈ ದ್ವೈತ ಪ್ರಪಂಚವೂ ಆತ್ಮನ ಮೇಲೆ ಅಧ್ಯಾಸದಿಂದ ತೋರುತ್ತದೆಯೇ ವಿನಃ ಮತ್ತೇನೂ ಇಲ್ಲ. ಆದುದರಿಂದ ಯಾರೂ ಈ ದ್ವೈತ ಪ್ರಪಂಚವನ್ನು ಸಾಕ್ಷಾತ್ತಾಗಿ ಪ್ರತ್ಯಕ್ಷವಾಗಿ, ಅನುಭವಿಸಿಯೇ ಇಲ್ಲ. ನಾವು ಸಾಕ್ಷಾತ್ತಾಗಿ ಅಪರೋಕ್ಷವಾಗಿ ಅನುಭವಿಸುತ್ತಿರುವುದು ಆನಂದರೂಪ ಆತ್ಮನನ್ನೇ.

**ಪ್ರ : 119. ಅಧ್ಯಾಸದಿಂದ ದ್ವೈತ ಪ್ರಪಂಚವನ್ನು ಆತ್ಮನ ಮೇಲೆ ಹೇರಿ ಇಲ್ಲದ ದ್ವೈತ ಪ್ರಪಂಚವನ್ನು ಕಲ್ಪಿಸಿ ದುಃಖಕ್ಕೆ ಗುರಿಯಾಗಿರುವುದರಿಂದ ಮುಕ್ತಿಯು ಯಾವಾಗ ?**

ಉ : "ನಾನು" ಎಂಬ ಅಹಂಕಾರದ ಸುಳ್ಳು ಕಲ್ಪನೆಯಿಂದಲೇ ಆತ್ಮನು ದುಃಖಕ್ಕೆ ಗುರಿಯಾಗಿರುವುದು. ಆದರೆ ವೇದ ಮಾತೆಯು ಅವನನ್ನು ಕುರಿತು "ನೀನು ಇದಲ್ಲ–ಇದಲ್ಲ" ಎಂದು ಬೋಧಿಸಿದ ಕೂಡಲೇ ಆತ್ಮನು ತನ್ನ ನಿಜವಾದ ರೂಪವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಮತ್ತು ತನ್ನ ಮೇಲೆ ತಾನೇ ಅಧ್ಯಾಸದಿಂದ ಹೇರಿಕೊಂಡ ಕಲ್ಪಿತಪದಾರ್ಥ ದಧರ್ಮಗಳನ್ನೆಲ್ಲಾ ಕಿತ್ತುಹಾಕಿ ಸುಳ್ಳು ಕಲ್ಪನೆ (ಅಧ್ಯಾಸ)ದಿಂದ ಬಿಡಲ್ಪಟ್ಟು ತನ್ನ ಅದ್ವಿತೀಯತ್ವವನ್ನು ಹೊಂದುತ್ತಾನೆ. ಅದೇ ಅವನ ಮುಕ್ತಿಯು.

**ಪೂ. ಪ. : ವೇದಮಾತೆಯು ಅವನನ್ನು ಕುರಿತು ನೇತಿ ನೇತಿ ಎಂಬ ಬೋಧೆ ಮಾಡಿದ ಕೂಡಲೇ ಸತ್ಯ ವಸ್ತುವಿನ ಜ್ಞಾನ ವಾಗುತ್ತದೆಂದು ಹೇಳಿದಿರಿ. ಈ ರೀತಿ ನಿಮ್ಮ ಮಾತಿನಿಂದ ವೇದವು ಸತ್ಯವಾದುದೆಂದು ನಿಮ್ಮ ಅಭಿಪ್ರಾಯವಿದ್ದಂತಾಯಿತು. ಒಂದು ವೇಳೆ ವೇದವು ಮಿಥ್ಯವೆಂದರೆ ಮಿಥ್ಯವಾದ ವೇದವು ಸತ್ಯಜ್ಞಾನ ವನ್ನು ಹೇಗೆ ಮಾಡಿಕೊಡಬಲ್ಲದು ? ಇಲ್ಲವೆ ವೇದವು ಸತ್ಯವಾದರೆ ಸತ್ಯ ವಸ್ತುಗಳು ಎಷ್ಟು ? ವೇದ–ಅದನ್ನು ಬೋಧಿಸುವ ಗುರು–ಕಲಿ ಯುವ ಶಿಷ್ಯ ಇವರೆಲ್ಲಾ ಸತ್ಯವಾದವರೇ ಎಂಬುದು ನಿಮ್ಮ ಮಾತಿ ನಿಂದ ತಿಳಿದಂತಾಯಿತು. ಇದರಿಂದ ದ್ವೈತ ಪ್ರಪಂಚವನ್ನೇ ಒಪ್ಪಿ ದಂತಾಯಿತು. ಆಗ ಆತ್ಮನ ಅದ್ವಿತೀಯತ್ವಕ್ಕೆ ಭಂಗ ಬರಲಿಲ್ಲವೇ ? ಎಂದ ಮೇಲೆ ನಿಮ್ಮ ಅದ್ವೈತವೆಲ್ಲಿ ಸಿದ್ಧಿಯಾಯಿತು ?**

ಉ : ಸತ್ಯವಾದ ವಸ್ತುವಿನಿಂದಲೇ ಸತ್ಯವಾದ ಜ್ಞಾನವಾಗಬೇಕೆಂಬ ನಿಯಮವಿಲ್ಲವಲ್ಲ. ಮಿಥ್ಯಾ ಪದಾರ್ಥದಿಂದಲೂ ಸತ್ಯಜ್ಞಾನವಾಗಬಹುದಲ್ಲ.

**ಉ. ದಾ. :** ಒಬ್ಬನಿಗೆ ಸ್ವಪ್ನ ಬಿದ್ದಿದೆ. ಸಿಂಹ ದರ್ಶನವಾಯಿತು; ಗರ್ಜಿಸಿತು ಭಯವಾಯಿತು. ಎಚ್ಚರವಾಯಿತು. ಇಲ್ಲಿ ಸಿಂಹವು ಸತ್ಯವೇ ? ಅಲ್ಲ. ಮಿಥ್ಯಾರೂಪವಾದ ಸಿಂಹವೂ ಎಚ್ಚರವೆಂಬ ಸತ್ಯಜ್ಞಾನವನ್ನುಂಟು ಮಾಡಲಿಲ್ಲವೇ !

ಹಾಗೆಯೇ ಅಸತ್ಯವಾದ ಸಾಧನಗಳಿಂದ ಸತ್ಯಜ್ಞಾನವಾಗಬಹುದು. ಕನಸಿನೊಳಗಿನ ಮಿಥ್ಯಾ ಸಿಂಹದಿಂದಲೇ ಮಿಥ್ಯವಾದ ಸ್ವಪ್ನವು ನಾಶವಾಯಿ ತಲ್ಲವೆ ! ಹಾಗೆಯೇ ಮಿಥ್ಯಾ ಜಾಗ್ರತ್ತಿನ ಮಿಥ್ಯಾ ವೇದದಿಂದ ಪಾರ ಮಾರ್ಥಿಕ ಸತ್ಯಾ ಜ್ಞಾನವು ಆಗಬಹುದು. ಆದುದರಿಂದ ವೇದ ಮಾತೆಯು ನೇತಿನೇತಿ ಎಂದು ಬೋಧಿಸುವುದರಿಂದ ಅಧ್ಯಾಸದಿಂದ ಬಿಡುಗಡೆ ಹೊಂದಿ ನಿಶ್ಚಿತವಾದ ನಿಜವಾದ ಜ್ಞಾನವಾಗುತ್ತದೆ.

**ಅಧ್ಯಾಸದ ಉಪಸಂಹಾರ :—**

ನಾನು ವಸ್ತುತ ಆತ್ಮನೇ, ಚೈತನ್ಯರೂಪನೇ ಆಗಿರುವುದರಿಂದ ನನಗೆ ಅನಾತ್ಮದ ಸಂಸರ್ಗವು ಎಳ್ಳಷ್ಟೂ ಇಲ್ಲ. ಎಂದರೆ ನನಗೆ, "ನಾನು" ಎಂಬುವ

ಅಹಂಕಾರವಾಗಲಿ "ನನ್ನದೆಂಬುವ" ಅಭಿಮಾನವಾಗಲಿ ಇಲ್ಲವೇ ಇಲ್ಲ. ಸೂರ್ಯನ ಮೇಲೆ ಕತ್ತಲೆಯ ಮುಸುಕೂ ಮತ್ತು ಅದರ ಪರಿಹಾರಗಳೆರಡೂ ಆಗುವವೆಂದು ಹೇಳುವುದೂ ಅಧ್ಯಾಸದಿಂದಲೇ ಅಲ್ಲವೇ ! ಸತ್ಯವಾಗಿ ಸೂರ್ಯನ ಮೇಲೆ ಕತ್ತಲೆಯ ಮುಸುಕೂ—ಅದರ ಪರಿಹಾರ ಎರಡೂ ಎಂದೂ ಆಗಲಾರವು. ಹಾಗೆಯೇ ಆತ್ಮನ ಮೇಲೆ ಅನಾತ್ಮ ಪದಾರ್ಥಗಳೂ ಅದರ ಧರ್ಮಗಳೂ ಅಧ್ಯಾಸವಾಗಿವೆ ಎಂದು ಹೇಳುವುದೂ ಸರಿಯಾಗಲಾರದು. ಆರೀತಿ ಅಧ್ಯಾಸವಾಗಿದೆ ಎಂದು ತಿಳಿಯುವುದೇ ಅಜ್ಞಾನ. ಇಂತಹ ಮಿಥ್ಯವಾದ ಅಜ್ಞಾನವನ್ನು ಮಿಥ್ಯವಾದವೇದವು ಮಿಥ್ಯವಾದ ಗುರುವಿನ ಮೂಲಕ"ನೀನು ಅದಲ್ಲ"ವೆಂದು ಹೇಳಿ ಸತ್ಯವಾದ ಆತ್ಮ ಸಾಕ್ಷಾತ್ಕಾರ ಮಾಡಿಕೊಡುತ್ತದೆ.

**ಪ್ರ : 120. ಆತ್ಮ ಸಾಕ್ಷಾತ್ಕಾರ ಮಾಡಿಕೊಂಡ ಜ್ಞಾನಿಯ ಸ್ಥಿತಿ ಹೇಗಿರುತ್ತದೆ ?**

ಉ : ಯಾವಾಗ ಜ್ಞಾನಿಗೆ ಎಲ್ಲವೂ ಆತ್ಮವೇ ಎಂದು ಸಾಕ್ಷಾತ್ಕಾರವಾಗುವುದೋ ಆಗ ನೋಡುವವರಾರು? ಪ್ರಮಾತೃ–ಪ್ರಮಾಣ–ಪ್ರಮೇಯ ತ್ರಿಪುಟಿಗಳೆಲ್ಲಾ ಅಶಕ್ಯವೆ. ದ್ವೈತ ವ್ಯವಹಾರವೆಲ್ಲಾ ಅಲ್ಲಿಗೇ ನಿಂತು ಹೋಗುತ್ತವೆ. ಆಗ ಗಂಭೀರವಾಗಿ ಸಕಲ ಭೇದಗಳನ್ನೆಲ್ಲಾ ಅಲ್ಲಗಳೆದು ಸಂಸಾರವನ್ನು ನಿರ್ಮೂಲಮಾಡುವ ವೇದವನ್ನಾದರೂ ನಾನು ಇಷ್ಟು ಹೊತ್ತಿನವರೆಗೆ ಕೇಳಲಿಲ್ಲವಲ್ಲ ಎಂದುಕೊಳ್ಳುತ್ತಾನೆ. ಕಾಣುವುದೇನು ? ಯಾವುದರಿಂದ ನೋಡಬೇಕು ? ಮತ್ತು ಏನನ್ನು ನೋಡಬೇಕು. ಮತ್ತು ಇಷ್ಟು ಸ್ಪಷ್ಟವಾಗಿರುವ ವಿಷಯವು ನನಗೆ ಇಲ್ಲಿಯುವರೆವಿಗೂ ತಿಳಿಯಲಿಲ್ಲವೆ ! ಎಂದು ಸಂತೋಷಪಡುತ್ತಾನೆ.

**ಉ. ದಾ. :** ಗೂಬೆ ಮುಂತಾದ ಪ್ರಾಣಿಗಳು ನಡು ಹಗಲಿನ ಸೂರ್ಯನಲ್ಲಿಯೂ ಕತ್ತಲೆಯನ್ನು ಕಾಣುವಂತೆ ಅಜ್ಞ ಜನರು ಆತ್ಮನಲ್ಲಿ ಅಜ್ಞಾನವನ್ನು ಕಲ್ಪಿಸುತ್ತಾರೆ. ಸರಿಯಾಗಿ ಕಣ್ಣು ಕಾಣುವ ಪ್ರಾಣಿಗಳು ಸೂರ್ಯನಲ್ಲಿ ಕತ್ತಲೆ ಇಲ್ಲವೇ ಇಲ್ಲವೆನ್ನುವಂತೆ ಶ್ರುತಿ ಮಾತೆಯು ಅಜ್ಞಾನವನ್ನು ನಿಷೇಧಿಸುತ್ತದೆ. ಇದನ್ನೇ ಬೃಹದಾರಣ್ಯಕ ಶ್ರುತಿಯ 4–5–15ರಲ್ಲಿ "ನೇತಿ ನೇತಿ" ಎಂಬುದಾಗಿ ಅಜ್ಞಾನವನ್ನು ನಿಷೇಧಿಸುತ್ತದೆ.

## ಅಧ್ಯಾಯಾರ್ಥದ ಉಪಸಂಹಾರ

ಈ ರೀತಿ "ಓಂ"ಕಾರ ಪೂರ್ವಕವಾಗಿ ಆತ್ಮಜ್ಞಾನವನ್ನು ಪಡೆದು ಅಖಂಡನಾಗಿ, ಅಕಾರಕನೂ ಅಕ್ರಿಯನೂ, ಆಗಿ ಅಂತಃಕರಣಾದಿ ಬಾಹ್ಯ ಪ್ರಪಂಚವು ಮಿಥ್ಯಾ ಎಂಬ ಭಾವದ ವಿರಕ್ತಿಯನ್ನು ಪಡೆದು ಆತ್ಮರೂಪವಾದ ತನ್ನ ಅದ್ವಿತೀಯತೆಯನ್ನು ಪಡೆಯುತ್ತಾನೆ. ಎಂಬಲ್ಲಿಗೆ ಶ್ರೀ ಸುರೇಶ್ವರಾ ಚಾರ್ಯರ ನೈಷ್ಕರ್ಮ್ಯಸಿದ್ಧಿಯ

## — ೨ ನೇ ಅಧ್ಯಾಯ ಸಂಪೂರ್ಣ —

ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥

**ಓಂ ಶಾಂತಿಃ ಶಾಂತಿಃ ಶಾಂತಿಃ**
**ಓಂ ತತ್ಸತ್ ಬ್ರಹ್ಮಾರ್ಪಣಮಸ್ತು.**

